# ಸತ್ಯಂ ಶಿವಂ ಸುಂದರಂ

## ಭಾಗ - 3

ಭಗವಾನ್ ಶ್ರೀ ಸತ್ಯಸಾಯಿ ಬಾಬಾ ಅವರ ದಿವ್ಯ ಚರಿತ್ರೆ

ಲೇಖಕರು :

ದಿ| ನಾ. ಕಸ್ತೂರಿ, ಎಂ. ಎ., ಬಿ. ಎಲ್.,

ಪ್ರಕಾಶಕರು :

ಶ್ರೀ ಸತ್ಯಸಾಯಿ ಪಬ್ಲಿಕೇಷನ್ಸ್ ಸೊಸೈಟಿ (ರಿ.),

"ಸುಧಾಮ ಹೌಸ್", ಚಿಕ್ಕಪೇಟೆ

ಬೆಂಗಳೂರು - 560 053.

# ಅಧ್ಯಾಯಗಳು

# ಸತ್ಯಸಾಯಿ ಭಾಸ್ಕರ

ಸತ್ಯನಾರಾಯಣರಾಜು, ವಯಸ್ಸು ೧೪, ಜನ್ಮ ಸ್ಥಳ ಪುಟ್ಟಪರ್ತಿ, ತಂದೆ ಪೆದ್ದ ವೆಂಕಪ್ಪ ರಾಜು, ವಿದ್ಯಾರ್ಥಿ, ಉರವಕೊಂಡ ಉನ್ನತ ಪಾಠಶಾಲೆ, ಎಂಟನೆಯ ತರಗತಿ ! ಒಂದು ದಿನ ಸಂಜೆ ಶಾಲೆಯಿಂದ ಮನೆಯ ಕಡೆ ಬಂದವನು ಪುಸ್ತಕಗಳ ಚೀಲವನ್ನು ಹಜಾರದ ಮೂಲೆಗೆಸೆದು ಬೀದಿಗಿಳಿದು, ಆಗತಾನೆ ಒಳಗಿನಿಂದ ಬಾಗಿಲೀಚೆಗೆ ಬಂದ ತನ್ನ ಅಣ್ಣನ ಹೆಂಡತಿಗೆ, "ನಾನಿಲ್ಲಿ ವೃಥಾ ಕಾಲ ಕಳೆಯಲಾರೆ! ನಾನಿನ್ನು ನಿಮ್ಮವನಲ್ಲ. ನಾನು ಬಂದ ಕೆಲಸ ನನಗಾಗಿ ಕಾದಿದೆ. ನನ್ನ ಭಕ್ತರು ಮೊರೆಯಿಡುತ್ತಿದ್ದಾರೆ" ಎಂದು ಹೇಳಿ ಮುಂದಕ್ಕೆ ನಡೆದ!

ಊರಾಚೆ, ಎಕ್ಸೈಸ್ ಇನ್‌ಸ್ಪೆಕ್ಟರ್ ಆಂಜನೇಯುಲು ಅವರ ಮನೆ ಮುಂದಿನ ತೋಪನ್ನು ಸೇರಿ, ಅಲ್ಲಿದ್ದ ಆಲದ ಮರದ ಬುಡದಲ್ಲಿ ಕುಳಿತು, ಹಿಂದೆಯೇ ಬಂದ ಬಹುಮಂದಿ ಸ್ತ್ರೀಪುರುಷರನ್ನು ತನ್ನ ಸುತ್ತ ಕುಳ್ಳಿರಿಸಿಕೊಂಡು "ಮಾನಸ ಭಜರೇ, ಗುರು ಚರಣಂ, ದುಸ್ತರ ಭಗವಸಾಗರ ತರಣಂ" - ಎಂದು ಮುಕ್ತ ಕಂಠದಿಂದ ಹಾಡಲು ಹೇಳಿದ! ತಾನೇ ಗುರು, ತನ್ನದೇ ಆ ಗುರು ಚರಣ, ಎಂದು ಲೋಕಕ್ಕೆ ತಿಳಿಸಿ, ತನ್ನ ಅವತಾರ ಕಾರ್ಯವನ್ನು ಪ್ರತ್ಯಕ್ಷವಾಗಿ ಕೈಗೊಂಡ, ತಾನು 'ಸತ್ಯನಾರಾಯಣ ರಾಜು' ಅಲ್ಲ, 'ಸಾಯಿ ಬಾಬಾ' ಎಂದು.

ಸುದ್ದಿ ಎಂಟು ದೆಸೆಗೂ ಹರಡಿತು. "ಶಿರ್ಡಿ ಸಾಯಿಬಾಬಾ, ತಾನು ವಚನವಿತ್ತಂತೆ, ಸೀಮೋಲ್ಲಂಘನ ಮಾಡಿ, ಆಂಧ್ರದಲ್ಲಿ ಬಂದಿದ್ದಾರೆ". "ಪತ್ರಿ ಗ್ರಾಮದಲ್ಲಿ ಜನ್ಮವೆತ್ತಿದ ಸಾಯಿಬಾಬಾ ಸಮಾಧಿಗೆ ಹೊರಟ ಯಾತ್ರಿಕರು ಪರ್ತಿ ಗ್ರಾಮದಲ್ಲಿ ಜನ್ಮವೆತ್ತಿದ 'ಸತ್ಯ' ಸಾಯಿ ಸನ್ನಿಧಿಗೆ ಬಂದರು. ಕುಂಟು, ಕುರುಡು, ಬಡತನ, ಕಡತನ, ಕಡೆತನ ಎಂಬ ದೈಹಿಕ, ಮಾನಸಿಕ ರೋಗ ಪೀಡಿತರು, ಇರುವೆ ಸಾಲಿಟ್ಟಂತೆ ಈ ಸಕ್ಕರೆಬೆಟ್ಟಕ್ಕೆ ಸರಿಃ ು ಬರಲಾರಂಭಿಸಿದರು, ಬಾಲಸಾಯಿಯ ಮಾನವಾತೀತ ಜ್ಞಾನವನ್ನು ಕಂಡು ಬೆರಗಾದರು; ಪವಾಡಗಳಿಂದ ಪರೀಕ್ಷಿಸಲು ಬಂದವರು ಪೂಜಿಸಲು ನಿಂತರು; ಪ್ರತ್ಯಕ್ಷ ಪರಮಾತ್ಮನೇ ಎಂದು ಪದ್ಯ ಬರೆದರು. ಅನುಗ್ರಹ ಸಂಪಾದಿಸಿದವರು ಅನ್ಯರನ್ನು ಕರೆದು ತಂದರು ಅವತಾರ ಪುರುಷನ ಕಿರಣ ಪ್ರಸಾರ ಹೀಗೆ ೧೭-೧೮ ವರ್ಷಗಳು ಅವಿಚ್ಛಿನ್ನವಾಗಿ ಮುಂದುವರಿಯಿತು.

ಸತ್ಯಸಾಯಿಬಾಬಾ ಅವರ ೩೦ನೆಯ ವರ್ಧಂತಿ ಮಹೋತ್ಸವ! ಹೌದು, ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೂ ಭಾರತ ಭೂಮಿ ಅವರ ಪಾದ ಸ್ಪರ್ಶದಿಂದ ಪುನೀತವಾಗಿದೆ. ಅನಂತಶಯನದಿಂದ ಅಲಕನಂದಾ ತೀರದವರೆಗೂ ಅವರ ಅಮೃತ ವಾಣಿಯಿಂದ ಅಬಾಲ ಗೋಪಾಲ ಜನಸ್ತೋಮ ಪುಲಕಗೊಂಡಿದೆ. ಬಾಬಾ ಅವರು ಧರ್ಮಸಂಸ್ಥಾಪನಾ ಕಾರ್ಯದಲ್ಲಿ ನಿರತರಾಗಿ ಪ್ರಚಾರ ಪ್ರಬೋಧನೆಗಳ ಮೂಲಕ ಮನೆ

ಮನೆಗೂ ಸಾಯಿ ಸಂದೇಶವನ್ನು ಸಾರಿದ್ದಾರೆ. "ಅನ್ಯಾಯ, ಅಕ್ರಮ, ಅಸತ್ಯ ಮುಂತಾದ ಅಹಂಕಾರಜನ್ಯ ಅಂಧಕಾರದ ದುಷ್ಟ ಸೇನೆಗಳನ್ನು ಸದೆಬಡಿಯಲು, ಇಗೋ, ಈ ರಥ, ಈ ಸನಾತನ ಸಾರಥಿಯ ಸ್ವಾಮ್ಯದಲ್ಲಿ, ವೇದಶಾಸ್ತ್ರ ಇತಿಹಾಸ ಪುರಾಣಗಳೆಂಬ ಸನಾತನ ಚತುರಂಗ ಬಲವನ್ನಳವಡಿಸಿ ಸಮರ ಹೂಡಿದೆ; ವಿಜಯ ಸಾಧಿಸಲಿದೆ" - ಎಂದು ಬಾಬಾ ಅವರು ಅಂದು ರಣ ಕಹಳೆಯನ್ನೂದಿದರು.

ಬೆಂದ ಎದೆಗಳಿಗೆ ತಂಪು ನೀಡುವ, ಸಂದೇಹಗಳನ್ನೆಲ್ಲ ಸಂಪೂರ್ಣ ಬಗೆಪರಿಸುವ, ಝೀರೋಗಳನ್ನು ಹೀರೋಗಳಾಗಿಸುವ ಅವರ ದಿವ್ಯೋಪನ್ಯಾಸಗಳನ್ನು, ಸ್ವರಾಜ್ಯ ಪ್ರಾಪ್ತಿಯ ಅಮಲಿನಿಂದ ಉನ್ಮತ್ತರಾಗಿ ಚಿತ್ತಭ್ರಮೆ ಹಿಡಿದು ದಾರಿ ತಿಳಿಯದೆ. ಅಮೇರಿಕಾ ಕಡೆ ಒಂದು ಕಾಲು, ರಷ್ಯಾ ಕಡೆ ಒಂದು ಕಾಲು - ಹೀಗೆ ತತ್ತರಿಸುತ್ತಿದ್ದ ಭಾರತ ದೇಶವನ್ನು ಸ್ವಾರಾಜ್ಯ ಸಿದ್ಧಿಯ ಸುಖಶಾಂತಿ ಕಡೆಗೆ ನಡೆಸಿ, ಉಳಿಸಿದುವು.

ನಾಡು ಹಾಡಿನ ಬೀಡಾಯಿತು. ಹಾಡು ದೇವರ ಪೂಜೆಯ ಹೂವಾಯಿತು. ದುರಿತ ದುಗುಡಗಳಿಂದ ನಿಶ್ಚೇಷ್ಟರಾಗಿ ಕುಳಿತವರಿಗೆ ಗರಿ ಮೂಡಿತು, ಗುರಿ ತೋರಿತು. ದಿನದಿನದ ಕಷ್ಟ, ಕಾರ್ಪಣ್ಯಗಳಿಂದ ನೊಂದ ಜನರು, ಬಾಬಾ ಅವರ ಕರೆ - "ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ, ಪರಂತಪ" - ಎಂಬುದಕ್ಕೆ ಕಿವಿಗೊಟ್ಟು ಕಲಿಗಳಾದರು, ಕವಿಗಳಾದರು, ಮೋಹವನ್ನು ಕಳೆದು, ಮರವೆಯನ್ನು ಗೆದ್ದು, ತಮ್ಮಲ್ಲಿನ ದಿವ್ಯ ಶಕ್ತಿಯನ್ನರಿತು, ಕುರಿತನವನ್ನು ಕಳಚಿದ ಹುಲಿಗಳಾದರು.

ಮದ್ರಾಸ್ ನಗರದಲ್ಲಿ ಬಾಬಾ ಅವರ ಸನ್ನಿಧಿಯಲ್ಲಿ, "ಭಗವಾನ್ ಶ್ರೀ ಸತ್ಯಸಾಯಿ ಸೇವಾ ಸಮಿತಿಗಳ ಅಖಿಲ ಭಾರತ ಮಹಾಸಮ್ಮೇಳನ" ನಡೆದಾಗ, ವಿದೇಶಗಳಿಂದಲೂ ನೂರಾರು ಪ್ರತಿನಿಧಿಗಳು ಬಂದರು. ಆ ಮಹಾ ಸಮೂಹ, ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯಚ" - ಎಂಬ ಸೂತ್ರವನ್ನೇ ತನ್ನ ಜೀವನ ಧ್ಯೇಯವಾಗಿಯೂ, ಬಾಬಾ ಅವರನ್ನೇ ತನ್ನ ಇಷ್ಟ ದೇವತೆಯಾಗಿಯೂ ಅಂಗೀಕರಿಸಿ ಆನಂದಿಸಿತು. ಸಾಯಿ ಸೂರ್ಯ ನಾರಾಯಣನ ಅನುಗ್ರಹ ಕಿರಣಗಳಿಂದ, ನಿದ್ರಿಸಿದವರೆದ್ದು, ಕಣ್ಣು ತೆರೆದು, ತಮ್ಮನ್ನು ತಾವು ತಿದ್ದಿಕೊಳ್ಳಲು ಯತ್ನಿಸಿದರು. ಸಾಧಾರಣ ಸ್ವಭಾವದ ಸಾಮಾನ್ಯರೂ ಸಾಧಕರಾದರು; ಸಾಯಿ ಸೇನೆಯ ಯೋಧರಾದರು.

"ಸತ್ಯಂ ಶಿವಂ ಸುಂದರಂ" - ಎಂಬ ಈ ಪವಿತ್ರ ಮೊದಲನೆಯ ಹಾಗೂ ಎರಡನೆಯ ಭಾಗಗಳಲ್ಲಿ ಈ ವಿವರಗಳನ್ನು ವಿಶದವಾಗಿ ಹೇಳಲಾಗಿದೆ. ರೇಷ್ಮೆ ಹುಳದಂತೆ, ತಾನೇ ನಿರ್ಮಿಸಿ, ತಾನೇ ಒಳಗೆ ಸೇರಿ, ತಬ್ಬಿಬ್ಬಾಗಿ, ಹೊರಬರಲು ತವಕಪಡುವ ಮಾನವನನ್ನು ವಿಮೋಚಿಸಲು ಬಂದಿರುವ ಅವತಾರ ಪುರುಷನ ಸತ್ಕಥೆಯನ್ನು ಇಗೋ, ಮುಂದುವರಿಸಲಾಗಿದೆ.

ಬನ್ನಿ! ಓದಿ ಆನಂದಪಡೋಣ. ಆದರಿಸಿ, ಆಚರಿಸಿ ಪುನೀತರಾಗೋಣ.

# ಜಗದೋದ್ಧಾರ

೧೯೬೮ ಮೇ ೧೨ ಬೊಂಬಾಯಿ ನಗರದ ಮಂಗಳ ಚರಿತ್ರೆಯಲ್ಲಿ ಚಿರಸ್ಮರಣೀಯವಾದ ಮುಹೂರ್ತ. ನಗರದ ಹೊರವಲಯದ ಅಂಧೇರಿ ಉಪನಗರಕ್ಕೆ ಸೇರಿದ ಮಹಾಕಾಳೀ ಗುಹಾಲಯದ ಬಳಿ, ನಯನ ಮನೋಹರವಾದ ಗುಡ್ಡದ ಮೇಲೆ ಮನಮೋಹಕವಾದ ಶಿಲ್ಪ ರತ್ನ "ಧರ್ಮಕ್ಷೇತ್ರ" - ಎಂಬ ಸೌಧವನ್ನು ಬಾಬಾ ಅವರು ಆ ದಿನ ಪ್ರವೇಶಿಸಿ ಸ್ವಾಧೀನ ಪಡಿಸಿಕೊಂಡು, ಅದನ್ನೇ ತನ್ನ ಆ ಪ್ರಾಂತದಲ್ಲಿನ ನಿವಾಸಸ್ಥಾನವಾಗಿ ಅಂಗೀಕರಿಸಿದರು.

ಭಗವದ್ಗೀತೆಯ ಪ್ರಪ್ರಥಮ ಪದ - ಧರ್ಮಕ್ಷೇತ್ರ. ಕೌರವರ ಕೊಬ್ಬು ಕರಗಿಸಿ, ಪಾಂಡವರ ತಪ್ತ ಹೃದಯಗಳನ್ನು ತಂಪು ಮಾಡಿ ತೃಪ್ತಿಗೊಳಿಸಲು ಶ್ರೀ ಕೃಷ್ಣನು ಆರಿಸಿದ ಲೀಲಾರಂಗ ಕುರುಕ್ಷೇತ್ರದ ಕಾಳಗದ ಕಣಕ್ಕೆ, ಆ ಪವಿತ್ರನಾಮವನ್ನು ಕೊಟ್ಟಿದೆ, ಗೀತೆ! ಸತ್ಯ ಧರ್ಮ ಶಾಂತಿ ಪ್ರೇಮಗಳಿಗೆ ಬೆಂಗಾವಲಾಗಿ ನಿಂತು, ಅಲ್ಲಿ ವಿಜಯವನ್ನು ಸಾಧಿಸಿದ, ಪಾಂಡವರಿಗಾಗಿ, ಭಗವಂತ! ನೆಲಕ್ಕಾಗಿ, ಛಲಹಿಡಿದ ದುಷ್ಟರಿಗೂ, ಧರ್ಮವನ್ನೇ, ಸರ್ವಸ್ವವೆಂದು ನಂಬಿ ಪರಮಾತ್ಮನ ಪಥ ಹಿಡಿದು ಸನ್ಮಾರ್ಗಿಗಳಿಗೂ ಹಣಾಹಣಿಯಾದದ್ದು ಅಲ್ಲಿ ! ಅಸತೋ ಮಾ ಸದ್ಗಮಯ ಎಂಬ ಆರ್ತನಾದಕ್ಕೆ ಈಗಲೂ ಭಗವಂತ ಓಗೊಡುತ್ತಿದ್ದಾನೆ ಎಂಬುದಕ್ಕೆ ಬಾಬಾ ಅವರ ಲೀಲೆಗಳೇ ಗುರುತು.

ಧರ್ಮಕ್ಷೇತ್ರ! ಆ ಸ್ಥಾನಕ್ಕೆ ಬಾಬಾ ಅವರು ಸೂಚಿಸಿದ ಆ ಹೆಸರು ಎಷ್ಟು ಅರ್ಥ ಪೂರ್ಣವಾಗಿದೆ! ಶೋಕ-ಮೋಹಗಳಿಂದ ಕಂಗೆಟ್ಟು ಕೈಕಟ್ಟಿ ಕುಳಿತಿರುವ ಅರ್ಜುನರನ್ನೆಲ್ಲ ತಿವಿದು ಜರಿದು ಬೆಳಕಿತ್ತು ಭುಜ ತಟ್ಟಿ ಕಾರ್ಯೋನ್ಮುಖರಾಗಿ ಮೂಡುವ ಮಾಟ ಇಂದಿಗೂ ನಡೆಯುತ್ತಿದೆ. ಧರ್ಮಕ್ಷೇತ್ರ! ಧರ್ಮವೆಂಬ ಮಹಾನಿಧಿಯನ್ನು ಅರ್ಜಿಸಿ ರಕ್ಷಿಸಿ ಪೋಷಿಸಿದ ಋಷಿಗಳ, ಚಕ್ರವರ್ತಿಗಳ ದೈವಾಂಶ ಸಂಭೂತರ, ಅವತಾರ ಪುರುಷರ ದಿವ್ಯ ಪರಂಪರೆಯೊಂದು ನಮ್ಮ ಮನದಲ್ಲಿ ಮೊಳಗುತ್ತದೆ, ಆ ಹೆಸರನ್ನು ನೆನೆದರೆ! ಎಂತ ಹೃದಯಸ್ಪರ್ಶಿ ನಾಮಧೇಯ!

ಧರ್ಮಕ್ಷೇತ್ರ! "ಅರ್ಥವಿಲ್ಲದ ಒಂದು ಮಾತೂ ನನ್ನಿಂದ ಹೊರಡುವುದಿಲ್ಲ" - ಎನ್ನುತ್ತಾರೆ. ಬಾಬಾ. ಅದೊಂದು ಕರೆ, ಅದೊಂದು ಕಹಳೆ, ಪಾಂಚಜನ್ಯದ ಮೊಳಗು! ಅದೊಂದು ಅರಿಕೆ, ಆಶ್ವಾಸನದ ಘೋಷಣೆ. ಬನ್ನಿ, ಇದು ಧರ್ಮಾಚರಣೆಯ ಆಸ್ಥಾನ, ವಿಜ್ಞಾನದ ವಿದ್ಯಾಲಯ, ಧರ್ಮ ಬೋಧೆಗೆ ಮೀಸಲಾದ ಆಶ್ರಮ.

ಭಾರತದ ಎಂಟು ದಿಕ್ಕುಗಳಿಂದಲೂ, ವಿದೇಶಗಳಿಂದಲೂ ಸಾವಿರಾರು ಜನ ಬೊಂಬಾಯಿಗೆ ಬಂದರು. ಸಾಯಿಜ್ಯೋತಿ ಅವರನ್ನಾಕರ್ಷಿಸಿತು; ಸಾಯಿ ಮಾರುತ ಅವರಲ್ಲಿ ಪ್ರಾಣ ತುಂಬಿತು; ಸಾಯಿ ದಾಹ ಅವರನ್ನು ಸಾಗಿಸಿ ಸನ್ನಿಧಿ ಸೇರಿಸಿತು.

ಗುದ್ದಲಿ ಪೂಜೆಯಾಗಿ ೧೦೮ ದಿನಗಳಲ್ಲಿ ಸಾಯಿ ಆಶೀರ್ವಾದ ಬಲದಿಂದ ಆ ಸೌಧದ ನಿರ್ಮಾಣ ಕಾರ್ಯ ಸಂಪೂರ್ಣವಾಯಿತು. ಅದರ ಶಿಲ್ಪದಲ್ಲಿ, ಎಲ್ಲೆಲ್ಲೂ ಬ್ರಹ್ಮ ಸಂಖ್ಯೆಯಾದ ೯ ಸುಸ್ಪಷ್ಟ ವಿರಾಜಿಸುತ್ತಿದೆ. ಮೆಟ್ಟಿಲುಗಳು, ಕಲಶಾಕಾರದ ಪದ್ಮದ ವಿಕಸಿತ ದಳಗಳು, ಸ್ತಂಭಗಳು, ಕಟಕಟೆಯಲ್ಲಿನ ಗೂಡುಗಳು, ಎಲ್ಲ ೯ನ್ನು ಗುಣಾಕಾರ ಮಾಡಿದಾಗ ದೊರೆಯುವ ಸಂಖ್ಯೆಗಳೇ!

ಅಂದು ಸಂಜೆ ಸುಮಾರು ೫೦ ಸಹಸ್ರ ಭಕ್ತರು ಮಹಾಸಭೆಯಲ್ಲಿ ನೆರೆದು ನಲಿದರು. ಮಂತ್ರಿವರ್ಯ ಶ್ರೀ ಪಾಂಡುರಂಗ ಸಾವಂತ್ ಅವರು, ತಮ್ಮ ಪೂರ್ವಶರೀರದಲ್ಲಿ ಬಾಬಾ ಅವರು ಮಹಾರಾಷ್ಟ್ರವನ್ನೇ ತಮ್ಮ ಅವತಾರ ಕ್ಷೇತ್ರವಾಗಿ ಆರಿಸಿಕೊಂಡಿದ್ದರೆಂದೂ, ಈಗಲೂ ಅದೇ ಕೃಪಾ ದೃಷ್ಟಿಯನ್ನು ಈ ರಾಜ್ಯದ ಮೇಲೆ ಬೀರುತ್ತಿರುವರೆಂದೂ ಹರ್ಷಿಸಿದರು. ತಮ್ಮ ದಿವ್ಯೋಪನ್ಯಾಸದಲ್ಲಿ ಬಾಬಾ, "ಕುರು ಎಂದರೆ ಮಾಡು ಎಂದರ್ಥ; ಕರ್ಮ ಎಂದರೆ ಮಾಡಿದ್ದು ಎಂದರ್ಥ. ಈ ಜಗತ್ತೇ ಕುರುಕ್ಷೇತ್ರ. ಧರ್ಮಾವಲಂಬನೆಯಿಂದ ಮಾನವನು ಇದನ್ನು ಧರ್ಮ ಕ್ಷೇತ್ರವನ್ನಾಗಿ ಪುಟಗೊಳಿಸಬೇಕು. ಈ ಸಂದೇಶವನ್ನು ಜಗತ್ತಿಗೆ ಸಾರುವುದೇ ಇಲ್ಲಿ ಸ್ಥಾಪಿಸಲಾದ ಸಂಸ್ಥೆಯ ಕೆಲಸ" - ಎಂದರು. ಅಂದಿನಿಂದ ಬಾಬಾ "ಸತ್ಯದೀಪ" ಎಂಬ ಆ ಕ್ಷೇತ್ರದ ಮಂದಿರದಲ್ಲಿ ಕೆಲವು ವಾರಗಳ ಕಾಲ ತಂಗಿದರು. ಸುತ್ತಲೂ ನೀರು ತುಂಬಿ ಕಮಲಗಳಿಂದ ಶೋಭಿಸುವ ವರ್ತುಲಾಕಾರದ ಅಗಳಿ; ನಡುವೆ ಅರಳಿದ ತಾವರೆಯಂತೆ ನಿರ್ಮಿತವಾದ ಬಂಗಲೆ. ಬಾಬಾ ಅಲ್ಲಿ ಬಿಡಾರ ಮಾಡಿದ ಕೂಡಲೆ, ಅದು ರುಚಿರ ಜ್ಯೋತಿಯ, ಮಧುರತಮ ಭೇಷಜದ, ಅಮೃತಾನಂದದ ನೆಲೆ ಬೀಡಾಯಿತು. ಬಾಲವಿಹಾರದ ಶಿಶುಗಳಿಗೂ, ಸೇವಾದಳದ ಬಾಲಬಾಲಿಕೆಯರಿಗೂ, ಯುವಕ ಯುವತಿಯರಿಗೂ, ಸೇವಾ ಸಮಿತಿಗಳ ಹಿರಿಯರಿಗೂ ಅಲ್ಲಿ ಮಹತ್ವ ಪೂರ್ಣ ಆದೇಶಗಳು ದೊರೆತವು. ಅಲ್ಲಿಗೆ ಸತ್ಯಸಾಯಿ ಭಜನ ಮಂಡಲಿಗಳು ಸಾಲಾಗಿ ಬಂದು, ಸರದಿ ಮೇರೆಗೆ ನಾಮಸಂಕೀರ್ತನೆ ಮಾಡಿದುವು. ಸಾಧಕರೂ ಸಮಾಜ ಸೇವಕರೂ ಶಿಕ್ಷಕರೂ ವಿದ್ಯಾರ್ಥಿಗಳೂ ಸಂನ್ಯಾಸಿಗಳೂ ಅಲ್ಲಿ ಬಂದು, ಬಾಬಾ ಅವರಿಂದ ಸ್ಫೂರ್ತಿ ಪಡೆದು ಹಿಂದಿರುಗಿದರು.

ಇದೇ ಸಮಯದಲ್ಲಿ ಹತ್ತಾರು ಹೆದ್ದಾರಿಗಳ ಮೇಲೆ ಜನಭರ್ತಿ ಬಸ್ಸುಗಳು ಧರ್ಮ ಕ್ಷೇತ್ರದ ಕಡೆಗೆ ನೂರಾರು ಸಂಖ್ಯೆಯಲ್ಲಿ ಹರಿದು ಬರುತ್ತಿದ್ದುವು! ಒಳಗೆ ಕುಳಿತಿದ್ದ ಭಕ್ತರು ಭಾವಾವೇಶದಿಂದ ಹಾಡಿದ ಕೀರ್ತನೆಗಳೂ, ನಾಮಾವಳಿಗಳೂ ರಸ್ತೆಯ ಉದ್ದಕ್ಕೂ ಇಕ್ಕೆಲದ ಪಾದಚಾರಿಗಳನ್ನು ಎಚ್ಚರಿಸಿ ಅಚ್ಚರಿಗೊಳಿಸಿದುವು. ಪ್ರಶಾಂತಿ ನಿಲಯದ ಸ್ವರ್ಗೀಯ ಪರಿಮಳ ಗಾಳಿಯಲ್ಲಿ ಬೆರೆತು, ಜನರಿಗೆ ತಾವು ಎಂದೋ ಎಲ್ಲೋ ಸವಿದು ಮರೆತಿದ್ದ ಆನಂದವನ್ನು ನೆನಪಿಗೆ ತಂದುವು.

ವಿಕ್ಟೋರಿಯಾ ಟರ್ಮಿನಸ್, ದಾದರ್, ಬಾಂಬೆ ಸೆಂಟ್ರಲ್ ನಿಲ್ದಾಣಗಳಿಗೆ ಮಾಮೂಲಿಗಿಂತ ಎರಡೋ ಮೂರೋ ಸ್ಪೆಷಲ್ 'ಕೋಚು'ಗಳನ್ನು ನಾಲ್ಕು ದಿಕ್ಕುಗಳಿಂದ

ಎಳೆದು ತಂದ ಎಂಜಿನ್‌ಗಳು, ಓರೆ ಲೇನುಗಳಲ್ಲಿ ನಿಂತು ನಿಟ್ಟುಸಿರು ಬಿಡುತ್ತಿದ್ದುವು. ಮದ್ರಾಸ್, ಬೆಂಗಳೂರು, ತಿರುವನಂತಪುರಂ, ಮಧುರೈ, ನಾಗಪುರ, ನವಸಾರಿ, ಹೈದರಾಬಾದ್ ಡಿಲ್ಲಿ, ಡೆರಾಡೂನ್, ಕಲ್ಕತ್ತ, ಜಂಷೇಡ್ಪುರ, ಗೌಹತಿ, ಲಕ್ನೊ, ಪಾಟ್ನಾ ನಗರಗಳಿಂದಲೂ ಅವುಗಳ ಸುತ್ತಣ ಗ್ರಾಮಗಳಿಂದಲೂ ಭಕ್ತರು ಅಮಿತೋತ್ಸಾಹದಿಂದ ಸೇರಿ, ಪ್ರತ್ಯೇಕ ರೈಲು ಬಂಡಿಗಳನ್ನು ಗೊತ್ತು ಮಾಡಿಕೊಂಡು, ಸ್ವಾಮಿಯ ದರ್ಶನಕ್ಕಾಗಿ ತಪಿಸುತ್ತ, ನಿಧಾನ ವೇಗಕ್ಕಾಗಿ ಬಂಡಿಯನ್ನು ಶಪಿಸುತ್ತ, ಪ್ರಯಾಣಾಯಾಸವನ್ನು ಭಜನಾನಂದದಿಂದ ಗೆದ್ದು, ಹೇಗೋ ಕೊನೆಗೆ ಬೊಂಬಾಯಿ ಸೇರಿ, ಧರ್ಮಕ್ಷೇತ್ರದಲ್ಲಿ ಕಿಕ್ಕಿರಿದರು. ವಿಮಾನಗಳೂ ಹಡಗುಗಳೂ ಭಕ್ತರನ್ನು ತರುವುದರಲ್ಲಿ ತಮ್ಮ ಪಾಲಿನ ಸೇವೆಯನ್ನು ಸಲ್ಲಿಸಿದುವು. ಶ್ರೀಲಂಕಾ, ಸಿಂಗಾಪುರ, ಜಕಾರ್ತಾ, ಮನಿಲಾ, ಹಾಂಕಾಂಗ್, ಟೋಕಿಯೋ, ಕುವಾಯತ್, ದುಬಾಯಿ, ಮೊಂಬಾಸಾ ಅರೂಷಾ, ನೈರೋಬಿ, ಕಂಪಾಲಾ, ಮಲ್ಟಾ, ಕಲಬ್ಲಾಂಕಾ, ಲಂಡನ್, ಟೆಹರ್ರಾಫಿಜಿ ಅಮೇರಿಕಾದ ಪೂರ್ವ ಪಶ್ಚಿಮ ತೀರದ ನಗರಗಳು ವಾಷಿಂಗ್‌ಟನ್, ಕೆನಡಾ, ಸ್ವೀಡನ್, ಪ್ಯಾರಿಸ್, ಪೆರು, ಬ್ರಜೀಲ್ - ಇಲ್ಲಿಂದೆಲ್ಲ ಭಕ್ತರು ಸಾಯಿಸನ್ನಿಧಿಗೆ ಧಾವಿಸಿದರು.

ಏತಕ್ಕೆಂದರೆ, ಮೇ ೧೬ನೆಯ ತಾ| ನಿಂದ ಬೊಂಬಾಯಲ್ಲಿ ಸತ್ಯ ಸಾಯೀ ಭಕ್ತರ ಪ್ರಥಮ ಜಗತ್ಸಮ್ಮೇಳನ' ನಡೆಯುವುದಿತ್ತು. ಭಗವದವತಾರ ಮೂರ್ತಿ ಪ್ರತ್ಯಕ್ಷ ಪ್ರಸನ್ನರಾಗಿ ದರ್ಶನ ಸ್ಪರ್ಶನ ಸಂಭಾಷಣೆಗಳಿಂದ ಭಕ್ತರನ್ನಾಶೀರ್ವದಿಸಿ ಹಿತಬೋಧೆ ಮಾಡುವ ಸದವಕಾಶವನ್ನು ಕಳೆದುಕೊಳ್ಳಬಾರದೆಂಬ ಉತ್ಸಾಹ ಅವರಿಗೆಲ್ಲ. ಬಾಂದಳದಲ್ಲಿ ಬೇರೆ ಆಶ್ರಯವಿಲ್ಲದೆ ರೆಕ್ಕೆ ಬಡಿದು ತಿರುಗುತ್ತಿದ್ದ ಪಕ್ಷಿಗಳು ಹಡಗೊಂದರ ಕಂಬದ ಕಡೆ ಹಾರಿ ಬರುವಂತೆ, ಅವರೆಲ್ಲ ಬಂದು ಸೇರಿ ಸುಖಶಾಂತಿಯನ್ನು ಪಡೆದರು.

"ಭಾರತೀಯ ವಿದ್ಯಾಭವನ"ದ ಆವರಣದಲ್ಲಿ ಆ ದಿನ ಅರುಣೋದಯದ ಜೊತೆಗೆ ಆನಂದೋದಯವೂ ಆಯಿತು. ಆತ್ಮೀಯ ಬಾಂಧವ್ಯದ ತಂಗಾಳಿ, ಭಕ್ತಿಯ ಸುವಾಸನೆ, ಭಗವತ್ಸನ್ನಿಧಿಯ ಸಂತೃಪ್ತಿ, ಇವು ಆಗಂತುಕರೆಲ್ಲರನ್ನೂ ಸ್ವಾಗತಿಸಿದವು. ಸರಳ ಸುಂದರವಾಗಿ ಅಲಂಕೃತವಾಗಿದ್ದ ವೇದಿಕೆಯ ಹಿಂದಣ ಭಿತ್ತಿಯ ಮೇಲೆ ನಾವು ಸಂಕೀರ್ತನಾನಂದದಲ್ಲಿ ತಲ್ಲೀನನಾದ ಮಹಾಪ್ರಭು ಚೈತನ್ಯ ದೇವನ ಹಾಗೂ ರಾಮನಾಮ ಗಾನದ ಭಾವ ರಾಗ ತಾಳ ಲಯಗಳಿಂದ ಮೈಮನಗಳನ್ನು ಮರೆತ ತ್ಯಾಗರಾಜ ಸ್ವಾಮಿಯ ವರ್ಣಚಿತ್ರಗಳು ಕಂಗೊಳಿಸಿದುವು. ಬಾಬಾ ಅವರ ಪೀಠದ ಹಿಂಬದಿಯಲ್ಲಿ, 'ನಿವಾತ ನಿಷ್ಕಂಪ ಇವ ಪ್ರದೀಪ' - ಎಂಬ ಗೀತಾವಾಕ್ಯದ ಉದಾಹರಣೆಯಾಗಿ ಒಂದು ಸೊಡರಿನ ಚಿತ್ರ!

೯ ಗಂಟೆಗೆ ಬಾಬಾ ಅವರು ಕಿರುನಗೆಯ ಹೊಂಗದಿರನ್ನು ಸೂಸುತ್ತ, ಸಭಾಭವನವನ್ನು ಪ್ರವೇಶಿಸಿದರು; ಹತ್ತು ಸಾವಿರ ಹೃದಯಗಳು ಮುದಗೊಂಡವು. ಇಪ್ಪತ್ತು ಸಾವಿರ ನಯನಗಳು ಆನಂದಾಶ್ರುಗಳಿಂದ ಅವರನ್ನಾರಾಧಿಸಿದುವು. ವೇದ ಮಂತ್ರ ಘೋಷವಾಗುತ್ತಿದ್ದಾಗ ಪ್ರತ್ಯಕ್ಷ ಪರಮೇಶ್ವರನನ್ನು ಮಹರ್ಷಿಗಳು ಸ್ತುತಿಸುತ್ತಿರುವಂತೆ ಸಭಿಕರಿಗೆ ಭಾಸವಾಯಿತು.

ಬಾಬಾ ಅವರ ಆಜ್ಞಾನುಸಾರ, ನಾನಾ ದೇಶಗಳಿಂದ ಬಂದ ಭಕ್ತರು ತಮ್ಮ ತಮ್ಮಲ್ಲಿನ ಸಾಧನಾ ಸಂಪತ್ತನ್ನೂ ಸಮಸ್ಯೆಗಳನ್ನೂ ಸನ್ನಿಧಿಗೆ ಸಮರ್ಪಿಸಿದರು. ಕುಲಪತಿಗಳು, ನ್ಯಾಯಾಧೀಶರು, ವೈಜ್ಞಾನಿಕರು, ವೈದ್ಯರು, ರಾಜಕಾರಣಿಗಳು, ಕವಿಗಳು, ಕರ್ಮಕುಶಲರು ಎಲ್ಲರೂ ಸಾಲಾಗಿ ಬಂದು, ವೇದಿಕೆಯನ್ನು ಸಮೀಪಿಸಿ, ಸತ್ಯಸಾಯಿ ಸೇವಾ ಸಮಿತಿಗಳ ವ್ಯಾಸಂಗ ಗೋಷ್ಠಿಗಳ, ಭಜನಾ ಮಂಡಳಿಗಳ ವರದಿಗಳನ್ನು ಶ್ರುತಪಡಿಸಿದರು.

ಹಾವರ್ಡ್ ಮರ್ಫೆಟ್ ಎಂಬುವರು, "ಸ್ವಾಮೀ! ಆಸ್ಟ್ರೇಲಿಯಾ ಖಂಡಕ್ಕೆ ತಮ್ಮ ಕರುಣೆ, ತಮ್ಮ ಪ್ರೇಮ, ತಮ್ಮ ಬೆಳಕು ಇಂದು ಅತ್ಯಗತ್ಯ" - ಎಂದರು. "ತರ್ಕ ವಿತರ್ಕಗಳಿಂದ ಶುಷ್ಕವಾಗಿರುವ ನಮ್ಮ ದೇಶದ ಹೃದಯ ಸ್ಥಾನದಲ್ಲಿ ನೀವು ನೆಲೆಸಿ ಅದನ್ನು ಚಿಗುರಿಸಬೇಕು" - ಎಂದು ಸ್ಕಾಂಡಿನೇವಿಯಾದ ಟಡಿಮಾನ್ ಜೊಹಾನೆಸ್ಸನ್ ಎಂಬುವರು ಪ್ರಾರ್ಥಿಸಿದರು. ಶ್ರೀಲಂಕೆಯಿಂದ ಬಂದ ಡಾ|| ನಲ್ಲೈನಾದನ್, "ನಾವು ಕಗ್ಗತ್ತಲೆಯಲ್ಲಿ ಕಂಗೆಟ್ಟು ತತ್ತರಿಸುತ್ತಿರುವ ಶಿಶುಗಳು. ನಮ್ಮನ್ನು ಕೈ ಹಿಡಿದು ಕಾಪಾಡಿ. ನಮ್ಮ ದೃಷ್ಟಿಯನ್ನು ಸರಿಮಾಡಿ. ನಮ್ಮನ್ನು ನಿಮ್ಮೆಡೆಗೆ ನಡೆಯಿಸಿ" - ಎಂದರು. ಆಫ್ರಿಕಾದ ಖಂಡದ ಉಗಾಂಡಾ ರಾಜ್ಯದ ರಾಜಧಾನಿ ಕಂಪಾಲಾದಿಂದ ಬಂದಿದ್ದ ಡಾ|| ಪಟೇಲ್, 'ಸ್ವಾಮೀ! ಆಫ್ರಿಕಾ ಖಂಡ ಈಗ ತಾನೆ ಸ್ವಾತಂತ್ರ್ಯದ ಹಾದಿಯಲ್ಲಿ ಮೊದಲ ಹೆಜ್ಜೆಯನ್ನಿಡುತ್ತಿದೆ; ಈ ತರುಣದಲ್ಲಿ ತಮ್ಮ ಮಾರ್ಗದರ್ಶನ ಅಲ್ಲಿಯ ಜನಾಂಗಗಳಿಗೆ ಅತ್ಯವಶ್ಯಕ" - ಎಂದು ಪ್ರಾರ್ಥಿಸಿದರು. ಮೆಕ್ಸಿಕೊ ದೇಶದ 'ಇಂದ್ರಾ ದೇವಿ' ಮಾತನಾಡುತ್ತ, "ಸ್ವಾಮೀ! ನಿಮ್ಮನ್ನು ಕುರಿತು ಸಂತಾಬಾರ್ಬರಾ, ಬರ್ಕ್ಲಿ, ಚಿಕಾಗೊ ವಿಶ್ವವಿದ್ಯಾಲಯಗಳಲ್ಲಿ ನಾನು ಹಲವು ಬಾರಿ ಉಪನ್ಯಾಸ ಮಾಡಿದ್ದೇನೆ. ಆಗ ಅಲ್ಲಿಯ ವಿದ್ಯಾರ್ಥಿಗಳು ಬಾಬಾ ಅವರನ್ನು ನಮ್ಮ ದೇಶಕ್ಕೆ ಯಾವಾಗ ಕರೆದು ತರುತ್ತೀರಾ, ಎಂದು ಆತುರ ಪಟ್ಟರು. ಅಮೇರಿಕಾ ಖಂಡಕ್ಕೆ ತಮ್ಮ ದರ್ಶನ ಸ್ಪರ್ಶನ ಸಂಭಾಷಣಾ ಭಾಗ್ಯ ಅನಿವಾರ್ಯ" - ಎಂದರು.

ಲಾಸ್ ಎಂಜಲಿಸ್ ನಗರದಿಂದ ಚಾರ್ಲ್ಸ್ ಪೆನ್ ಎಂಬ ಅಮೇರಿಕನ್ ಸಾಧು, "ಭಾರತ ದೇಶದಿಂದಲೇ ನಾವು ಪುಷ್ಟಿವಂತ ಆಧ್ಯಾತ್ಮಿಕಾಹಾರವನ್ನೆದುರು ನೋಡುತ್ತಿದ್ದೇವೆ. ನಮ್ಮಲ್ಲಿಗೆ ಬರಬೇಕೆಂದು ನಾವು ಬಾಬಾರವರನ್ನು ಬೇಡುತ್ತೇವೆ. ಅವರು ನಮ್ಮಲ್ಲಿಗೆ ಬಂದರೆ, ನೀವು ಭಾರತೀಯರು ಅದಕ್ಕಾಗಿ ಚಿಂತಿಸಬೇಕಾಗಿಲ್ಲ. ಏಕೆಂದರೆ, ಅವರು ಅಲ್ಲಿರುವಾಗಲೇ ಇಲ್ಲೂ ಇರುತ್ತಾರೆ" - ಎಂದರು.

ಸಾಯಂಕಾಲದ ಮಹಾಸಭೆಗೆ ಒಂದು ಲಕ್ಷಕ್ಕೂ ಹೆಚ್ಚು ಸಂಖ್ಯೆಯಲ್ಲಿ ಜನರು ಬಂದರು. ಒಬ್ಬೊಬ್ಬರ ಹೃದಯದಲ್ಲೂ ಸಾಯಿದೇವನು ಉಪಸ್ಥಿತನಾಗಿದ್ದ. ಸಭಾಧ್ಯಕ್ಷ ಸ್ಥಾನವನ್ನು ಗಾಂಧೀತತ್ವದ ಆಚರಣೆಯಲ್ಲಿ ಅದ್ವಿತೀಯರೆನಿಸಿದ್ದ ಭಾರತದ ಉಪಪ್ರಧಾನಿ ಶ್ರೀ ಮೊರಾರ್ಜಿ ದೇಸಾಯಿ ಅವರು ವಹಿಸಿದ್ದರು. ಅವರು ಆಗಲೇ ಧರ್ಮಕ್ಷೇತ್ರದಲ್ಲಿ ಸ್ವಾಮಿಯ ದರ್ಶನ ಪಡೆದು, ಅವರ ಕರುಣೆಯ [illegible] ದಿವ್ಯಶಕ್ತಿಯ ಮಹತ್ವವನ್ನೂ

ಅರಿತಿದ್ದರು. ವೇದಿಕೆಯನ್ನೇರಿ ನಿಂತು ಸಭೆಯನ್ನು ಅವಲೋಕಿಸಿದಾಗ, ಅವರು ದಿಗ್ಭ್ರಾಂತರಾದರು. ಹಾಗೆಂದು ತಮ್ಮ ಭಾಷಣದಲ್ಲಿ ಎಲ್ಲರಿಗೂ ತಿಳಿಸಿದರು. ಕೂಡ! ಆಧ್ಯಾತ್ಮಿಕ ದಾಹದಿಂದ ಪೀಡಿತರಾಗಿ, ಉಪದೇಶ ಗಂಗೆಯನ್ನರಸುತ್ತ ಬಂದಿದ್ದ ನೂರು ಸಾವಿರ ಜನ, ಹೆಣ್ಣು ಮಕ್ಕಳೂ ಗಂಡಸರೂ ಸಾಲುಸಾಲಾಗಿ ಪ್ರತ್ಯೇಕ ಪ್ರತ್ಯೇಕ, ಶಿಸ್ತಿನಿಂದ, ನಿಶ್ಶಬ್ದದಿಂದ ಕುಳಿತು, ತಮ್ಮೆದುರು ವಿರಾಜಮಾನರಾಗಿದ್ದ ದಿವ್ಯ ತೇಜೋಮೂರ್ತಿಯನ್ನು ಆತುರದಿಂದ ವೀಕ್ಷಿಸುತ್ತಿದ್ದ ದೃಶ್ಯ ಅವರನ್ನು ಮುಗ್ಧಗೊಳಿಸಿತಂತೆ. ಆ ಸಭಾ ಮಂಟಪವೇ ಗುಡಿ, ಗುರುದ್ವಾರ, ಚರ್ಚ್, ಮಸೀದಿ, ಎಂಬ ಪೂಜ್ಯ ಭಾವನೆ ಹರಡಿತು, ಜನರ ಮನದಲ್ಲಿ.

ದೇಸಾಯಿ ಅವರು ಗೀತಾಮಾತೆಯ ಸದ್ಬೋಧೆಯನ್ನು ವಿವರಿಸಿ, ಜಯಾಪ ಜಯಗಳನ್ನು ಸಮ ಭಾವನೆಯಿಂದ ಸವಿಯಲು ಸನಾತನ ಧರ್ಮ ಸಾಧನಾಮಾರ್ಗವನ್ನು ತೋರಿಸುತ್ತದೆ. ಭಗವದರ್ಪಿತರಾಗಿ ಸಕಲ ಕರ್ಮಗಳನ್ನೂ ಮಾಡಿದರೆ, ಮನಶ್ಶಾಂತಿಗೆ, ಕಿಂಚಿತ್ತೂ ಭಂಗ ಬರುವಂತಿಲ್ಲ" - ಎಂದರು.

ಬಾಬಾ ಅವರು ದೇವವಾಣಿಯಲ್ಲೇ ತಮ್ಮ ಉಪನ್ಯಾಸವನ್ನು ಪ್ರಾರಂಭಿಸಿದರು. ಅಂದರೆ ಸಂಸ್ಕೃತ ಭಾಷೆಯಲ್ಲಿ! ಅವರ ಭಾಷಣವನ್ನು ಇಂಗ್ಲಿಷಿಗೆ ತರ್ಜುಮೆ ಮಾಡಿ ಹೇಳುವ ಆಜ್ಞಾಪಿತನಾಗಿ, ಅವರ ಪಕ್ಕದಲ್ಲೇ, ಬೇರೊಂದು ಮೈಕ್ ಮುಂದೆ ನಿಂತಿದ್ದ ನಾನು, ಗಡಗಡ ನಡುಗಿದೆ. ಮಂದಾಕಿನೀ ಪ್ರವಾಹವಾಗಿ ಹರಿದು ಬಂದ ಆ ಅಮೃತ ಧಾರೆಯನ್ನು ಗಮನಿಸಿದಾಗ, ನಾನು ಮೂಕನಾದೆ, ಆನಂದಾಶ್ಚರ್ಯಗಳಿಂದ ಸ್ತಬ್ಧನಾದೆ. ಭಾಗೀರಥಿಯನ್ನು ಥೇಂಸ್ ನದಿಯ ಕಡೆ ತಿರುಗಿಸುವುದು ಹೇಗೆ ಸೇರಿ? - ಎಂದು ತಲ್ಲಣಿಸಿದೆ.

ಆದರೆ ಸ್ವಾಮಿ ಕರುಣಾಮಯ; ತೆಲುಗು ಭಾಷೆಯನ್ನೇ ಅಳವಡಿಸಿಕೊಂಡರು. ನನ್ನ ಕೆಲಸವನ್ನು ಸುಗಮವಾಗಿಸಿದರು. "ದೇಹ ಎಂಬ ದೇವಾಲಯದಲ್ಲಿ ನಾನು ಎಂಬುದನ್ನು ಪ್ರತಿಷ್ಠೆ ಮಾಡಿ ಪೂಜಿಸುತ್ತಿದ್ದೀರಿ; ದೇಶ ಎಂಬ ದೇಹದಲ್ಲಿ ನಾವು ಎಂಬುದನ್ನು ಪ್ರತಿಷ್ಠಿಸಿ ಪೂಜೆ ಮಾಡಿ" - ಎಂದು ಪ್ರೋತ್ಸಾಹಿಸಿದರು. ಜಗತ್ತೆಂಬ ದೇವಾಲಯದಲ್ಲಿ 'ನಾನು' 'ನಾವು' ಎರಡೂ ಸೇರಿದಾಗ ತೋರುವ 'ಅವನ'ನ್ನು ಪ್ರತಿಷ್ಠಿಸಿ ಪೂಜಿಸಿ" - ಎಂದು ಹೇಳಿದರು. ಮೈಯ್ಯೆಲ್ಲ ಕಣ್ಣಾಗಿ ಸಭೆ ಅವರ ಆದೇಶವನ್ನಾಲಿಸಿತು.

"ಎಲ್ಲ ಮತದವರೂ ಇಲ್ಲಿ ಸೇರಿದ್ದೀರಿ. ಆದ್ದರಿಂದ ಎಲ್ಲ ಮತಗಳೂ ಕೈಗೊಂಡಿರುವ ಕಾರ್ಯವೊಂದೇ ಎಂಬುದನ್ನು ನಿಮಗೆ ತಿಳಿಸಬೇಕಾಗಿದೆ. ಸತ್ಯವನ್ನು ಅಂಕುಡೊಂಕುಗಳಿಲ್ಲದೆ ಪ್ರತಿಬಿಂಬಿಸಲು ಚಿತ್ತದ ಕನ್ನಡಿಯನ್ನು ಶುಭ್ರಗೊಳಿಸುವುದೇ ಎಲ್ಲ ಮತ ಸಂಪ್ರದಾಯಗಳ, ಶಾಸ್ತ್ರ ನಿಯಮಗಳ ಉದ್ದೇಶ. ಎಲ್ಲರೂ ಹುಡುಕುವುದು ಒಂದೇ ನಿಧಿಯನ್ನೇ! ಎಲ್ಲರೂ ಆರೋಹಿಸಲು ಯತ್ನಿಸುವುದು ಒಂದೇ ಶಿಖರವನ್ನೇ! ಏರುವವರಿಗೆ ದಾರಿತೋರುವವರು

ಹಲವರು; ದಾರಿಗಳೂ ಹಲವು. ಆದ್ದರಿಂದಲೇ ಕಲಹ, ಕಾಳಗ, ಸೆಳೆತ, ಸಮರ," - ಎಂದರು ಬಾಬಾ.

"ದೇವರೇ ಇಲ್ಲ; ನಾವೆಲ್ಲೆಲ್ಲೂ ಹುಡುಕಿದೆವು. ಅಂತರಿಕ್ಷವನ್ನೆಲ್ಲ ಹುಡುಕಿದೆವು". "ದೇವರೆಂಬುದು ಅರಿಯದವರ ಭ್ರಮೆ" "ದೇವರು ಎಂಬೋದನ್ನು ತಯಾರಿಸಿ ಶ್ರೀಮಂತರೂ ಬುದ್ಧಿವಂತರೂ, ಬಡವರನ್ನೂ ಪಾಮರರನ್ನೂ ಮೋಸಗೊಳಿಸುತ್ತಿದ್ದಾರೆ". "ದೇವರು ಸತ್ತು ಶತಮಾನಗಳಾಗಿ ಹೋಗಿವೆ". "ದೇವರೆಂಬುದೊಂದಿದ್ದರೂ ಅದನ್ನು ಬಳಸದೆಯೇ ನಾವು ಬಾಳಬಲ್ಲೆವು" ಎಂದೆಲ್ಲ ತೊದಲುವವರು ಕೂಡ, ತಮ್ಮ ತರ್ಕಕ್ಕೆಟುಕದ ಪ್ರಪಂಚ ವ್ಯಾಪಿಯಾದ, ಸರ್ವಶಕ್ತಿಗಳಿಗತೀತವಾಗಿ, ಅವುಗಳಿಗೆ ಕಾರಣವಾದ ಒಂದು ಮಹಾಶಕ್ತಿಯನ್ನೊಪ್ಪಲೇ ಬೇಕು. ಅವರು ಪ್ರೇಮತ್ಯಾಗ ಸೇವೆಗಳಿಂದಾಗುವ ಆನಂದವನ್ನು ಇಲ್ಲವೆಂಬುವ ಹಾಗಿಲ್ಲ. ಆ ಶಕ್ತಿಯೇ ದೇವರು; ಆ ಆನಂದವೇ ದೇವರು ಎಂದರು.

೧೭ ನೇ ತಾ| ಮಧ್ಯಾಹ್ನ ೭ ಉಪಸಮಿತಿಗಳು ಸಭೆಗೆ ವರದಿಗಳನ್ನು ನಿವೇದಿಸಿದುವು. ಭಜನೆ, ನಾಮಸ್ಮರಣೆ, ನಗರ ಸಂಕೀರ್ತನೆ, ವೇದಶಾಸ್ತ್ರ ಪಾಠ ಶಾಲೆಗಳು, ಶಾಲಾ ಕಾಲೇಜುಗಳಲ್ಲಿ ನೈತಿಕ ಹಾಗೂ ಆಧ್ಯಾತ್ಮಿಕ ಶಿಕ್ಷಣ, ಸತ್ಯಸಾಯಿ ಸೇವಾ ದಳದ ನಿಯಮಾವಳಿ, ಮಹಿಳಾ ಮಂಡಳಿಗಳ ಕಾರ್ಯಕ್ರಮ, ಸತ್ಯಸಾಯೀ ಸಂಸ್ಥೆಯ ವಿವಿಧ ಶಾಖೆಗಳ ನಡುವಣ ಸಹಕಾರ ಸಮನ್ವಯಗಳು, ಭಾರತದಲ್ಲಿನ ಸಂಸ್ಥೆಗೂ ವಿದೇಶೀ ಸಂಸ್ಥೆಗಳಿಗೂ ಸಂಬಂಧ ಸಂಪರ್ಕಗಳು ಮುಂತಾದ ಸಮಸ್ಯೆಗಳನ್ನು ಉಪಸಮಿತಿಗಳು ಕೂಲಂಕುಷವಾಗಿ ಪರಿಶೀಲಿಸಿದುವು.

ಅನಂತರ ಡಾ| ವಿನಾಯಕ ಕೃಷ್ಣ ಗೋಕಾಕ್‌ರವರು ಬಾಬಾ ಅವರ ಅವತಾರ ತತ್ತ್ವವನ್ನು ಕುರಿತು ಉಜ್ವಲ ಭಾಷಣ ಮಾಡಿದರು. "ಜಡಕ್ಕಿಂತ ಚಿತ್ ಉತ್ತಮ; ದೃಶ್ಯಕ್ಕಿಂತ ದ್ರಷ್ಟ ಉತ್ತಮ; ರಥಕ್ಕಿಂತ ಸಾರಥಿ ಉತ್ತಮ; ಜಗತ್ತಿಗಿಂತ ಜಗದೀಶ ಉತ್ತಮ - ಎಂದು ಅಂತರಂಗದಲ್ಲಿ ದೃಢಪಡಿಸಿಕೊಳ್ಳಬೇಕು. ಆಗ ಮಾತ್ರ, ನರಾಕಾರ ತಾಳಿರುವ ಈ ನಿರಾಕಾರದೆದುರು ಸಂದೇಹರಹಿತರಾಗಿ ನಾವು ನಿಲ್ಲಬಹುದು" - ಎಂದರು.

ಸ್ವಾಮಿ ಆ ದಿನದ ಭಾಷಣದಲ್ಲಿ, ತಾವು ಹಿಂದಿನ ದಿನ ಅಪ್ಪಣೆ ಕೊಡಿಸಿದ ಪ್ರಕಾರ, ನಾಮ ಮಹಿಮೆಯನ್ನು ಕುರಿತೇ ಮಾತಾಡಿದರು. 'ದೇವರನ್ನು ಸಮೀಪಿಸಲು, ದೇವರ ಕೃಪೆ ಸಂಪಾದಿಸಲು, ನಾಮ ಜಪವೊಂದೇ ಸುಲಭೋಪಾಯ. ಮೀರಾ ನಾಮ ಜಪಮಾಡುತ್ತ ವಿಷವನ್ನು ಕುಡಿದಾಗ, ಅದು ಅಮೃತವಾಯಿತು. ನಾಮದ ನೆನಪಿನಲ್ಲೇ, ನಾಮ ಸೂಚಿಸುವ ರೂಪದ ಬೆಳಕಿನಲ್ಲೇ ಬಾಳಿ ಬದುಕಿ. ನನ್ನ ಈಗಿನ ಹೆಸರನ್ನು; ನನ್ನ ಈಗಿನ ರೂಪವನ್ನು ಪ್ರಚಾರ ಮಾಡುವುದು ನನ್ನ ಇಚ್ಛೆ ಅಲ್ಲ. ಜಗದೀಶನನ್ನು ಚಿತ್ರದಲ್ಲಿ ಚಿತ್ರಿಸುವಾಗ, ವಾಕ್ಕಿಂದ ವಿವರಿಸುವಾಗ, ಮಾನವನು ಯಾವ ಯಾವ ರೂಪ ನಾಮಗಳನ್ನು ಕಲ್ಪಿಸಿ ಕೊಂಡಿರುವನೋ,

ಅವೆಲ್ಲ ನನ್ನವೇ!ರಾಮ, ಕೃಷ್ಣ, ಈಶ್ವರ, ಸಾಯೀ, ಎಲ್ಲ ಹೆಸರುಗಳೂ ನನ್ನವೇ! ನನಗೆ ಪ್ರತ್ಯೇಕವಾಗಿ ಯಾವ ಊರೂ ಇಲ್ಲ. ಯಾವ ಹೆಸರೂ ಇಲ್ಲ. ಎಲ್ಲ ನನ್ನವೇ! ಆದರೆ ಹೆಸರನ್ನು ಮಾತ್ರ ಬರಿದೆ ಒದರಿದರೆ ಫಲವಿಲ್ಲ; ಜೊತೆಗೆ ನನ್ನ ಸಮತ್ವ ದೃಷ್ಟಿಯನ್ನೂ ಶಾಂತ ಸ್ವಭಾವವನ್ನೂ ಪ್ರೇಮವನ್ನೂ ಸಹನೆಯನ್ನೂ ಆನಂದವನ್ನೂ ನಿಮ್ಮಲ್ಲಿ ಬೆಳೆಸಲೇಬೇಕು. ರೂಪವನ್ನು ಬರಿದೆ ಪೂಜಿಸಿದರೆ ಪುಣ್ಯವೂ ಇಲ್ಲ, ಪುರುಷಾರ್ಥವೂ ಇಲ್ಲ.

ಅನೇಕರು ನನ್ನ ಬಳಿ ಬಂದು, "ಸ್ವಾಮಿ! ನನಗೊಂದು ಸಂದೇಶ ಕೊಡಿ" - ಎಂದು ಕೇಳುತ್ತಾರೆ. ಅವರಿಗೆಲ್ಲ ನಾನು ಹೇಳುವುದಿದೇ; "ನನ್ನ ಜೀವನವೇ ನನ್ನ ಸಂದೇಶ". ನಿಮ್ಮ ಜೀವನ ಧೈರ್ಯ, ಶ್ರದ್ಧೆ, ಸಾಹಸ, ಸಹನೆ, ದೀನದಲಿತರ ಮೇಲೆ ಅನುಕಂಪದಿಂದ ತುಂಬಿದರೆ, ನನ್ನ ಸಂದೇಶವನ್ನು ನೀವು ಲಾಲಿಸಿದಂತೆ, ಪಾಲಿಸಿದಂತೆ"- ಎಂದರು.

ಬಾಬಾ ಅವರು ತಮ್ಮೆದುರು ಸಾಲು ಕುಳಿತಿದ್ದ ದಾಹಪೀಡಿತ ನಯನಗಳನ್ನು ಅವಲೋಕಿಸಿದರು. ಸಭೆಯನ್ನಾವರಿಸಿದ್ದ ಆತುರತೆಯನ್ನರಿತು ಅವರ ಹೃದಯ ಕರಗಿತು. ಅವರ ಧ್ವನಿ ಏರಿತು. ಅವರ ವಾಕ್ ಪ್ರವಾಹದ ವೇಗ ಇಮ್ಮಡಿಯಾಯಿತು. ತಮ್ಮ ತಮ್ಮ ಜೀವನದಲ್ಲಿ ಅದೊಂದು ಮಹತ್ವದ ಮುಹೂರ್ತ ಎಂಬುದನ್ನು ಅವರೆಲ್ಲರೂ ಹೇಗೋ ಅರಿತುಕೊಂಡರು. ಪ್ರಪಂಚದ ಇತಿಹಾಸದಲ್ಲೇ ಅದೊಂದು ಸುವರ್ಣ ಸನ್ನಿವೇಶ. ಮಾನವ ಕುಲಕ್ಕೆ ತಮ್ಮ ಪರಮ ರಹಸ್ಯವನ್ನು ತಿಳಿಸಲು ಬಾಬಾ ಅವರು ನಿರ್ಧಾರ ಮಾಡಿರುವರೆಂದು ಆಗ ವಾತಾವರಣವೇ ತಿಳಿಸಿತು. ಅವರ ತೆಲುಗು ಘೋಷಣವನ್ನು ಆಂಗ್ಲ ಭಾಷೆಯಲ್ಲಿ ತಿಳಿಸಲು ನನಗೆ ಉತ್ಸಾಹ; ಆದರೂ, ಎಲ್ಲಿ ಆ ದಿವ್ಯ ಧೋರಣೆಗೆ ನನ್ನಿಂದ ಅಪಚಾರವಾಗಿ ಬಿಡುತ್ತದೆಯೋ ಎಂಬ ಭಯ! ಯಾರೂ ಎದುರು ನೋಡದ, ಎಲ್ಲರಿಗೂ ಕಣ್ತೆರೆಯುವ ಮಾತುಗಳು ಅವರದು. ಅವರ ತೆಲುಗು ಭಾಷಣವನ್ನೇ ಕನ್ನಡದಲ್ಲಿ ನಿಮಗೆ ಅಕ್ಷರಶಃ ತಿಳಿಸುತ್ತಿದ್ದೇನೆ. ಓದಿ ಹರ್ಷಗೊಳ್ಳಿರಿ.

"ಎಲ್ಲರೂ ಭಕ್ತರೇ ಇಲ್ಲಿ ಸೇರಿದ್ದೀರಿ. ಪ್ರಪಂಚದಲ್ಲಿನ ವಿವಿಧ ದೇಶದವರೂ ಇಲ್ಲಿ ಸಮಾವೇಶಗೊಂಡು ಒಟ್ಟು ಸೇರಿದ್ದೀರಿ. ಆದ್ದರಿಂದ ಒಂದು ವಿಷಯವನ್ನು ಕುರಿತು ಹೇಳದಿರಲು ಸಾಧ್ಯವಿಲ್ಲ.

ಈ ತನಕ, "ಪ್ರಪಂಚ ಸಮ್ಮೇಳನ"ಗಳು ಅನೇಕ ವಿಧವಾದ 'ಮತ ಸಮ್ಮೇಳನ'ಗಳು, ಆಧ್ಯಾತ್ಮಿಕ ತತ್ವಗಳನ್ನು ಚರ್ಚಿಸುವ 'ಸಭೆ'ಗಳು ಎಷ್ಟೋ ನಡೆದಿರಬಹುದಾದರೂ, ಅವೆಲ್ಲ ಆಯಾ ದಿವ್ಯ ದೇಹಗಳು ಅಂತ್ಯವಾದ ಮೇಲೆಯೇ ನಡೆದಿವೆ.

ಆದರೆ ಈ ದೇಹವೂ, ಈ ದೇಹಕ್ಕೆ ಸಂಬಂಧಿಸಿದ ಈ ಹೆಸರು ಲೋಕದಲ್ಲಿರುವಾಗಲೇ ಈ ಪ್ರಪಂಚ ಸಮ್ಮೇಳನ ನಡೆಯುತ್ತಿರುವುದನ್ನು ನೀವು ಗಮನಿಸಬೇಕು.

ಇದಕ್ಕೆ ಮೂಲಕಾರಣ ಸ್ವಾಮಿಯ ತತ್ವವೇ ಆ ತತ್ವ ಏನು? ಎಂದು ಭಕ್ತರ ಪೈಕಿ ನೂರರಲ್ಲಿ ೯೯ ಜನ ಅರಿತುಕೊಳ್ಳಲಾರರು.

ತಮ್ಮ ತಮ್ಮ ಆಧ್ಯಾತ್ಮಿಕಾಭಿವೃದ್ಧಿಗಾಗಿ, ಕೆಲವು ಸಂಸ್ಥೆಗಳ ಸ್ಥಾಪನೆಗಾಗಿ, ಒಂದು ಬಗೆಯ ಪ್ರೇಮ ಸಂಬಂಧದಿಂದ ಆಕರ್ಷಿತರಾಗಿ, ತಾತ್ಕಾಲಿಕ ಉದ್ದೇಶ ಸಾಧನೆಯ ಆಶೆಯಿಂದ ಪ್ರೇರಿತರಾಗಿ, ಉತ್ಸಾಹದಿಂದ ಪ್ರೇರಿತರಾಗಿ, ನೀವು ಇಲ್ಲಿಗೆ ಬಂದು ಸೇರಿರಬಹುದೇ ಹೊರತು, ನನ್ನ ತತ್ವವನ್ನು ಇಂದಲ್ಲ, ಎಷ್ಟು ಸಾವಿರ ಸಂವತ್ಸರಗಳ ಕಾಲ ತಪಸ್ಸು ಮಾಡಿದರೂ, ಲೋಕದಲ್ಲಿರುವಂಥ ಸರ್ವರೂ ಏಕೀಭವಿಸಿ ವಿಚಾರಣೆ ಸಲ್ಲಿಸಿದರೂ ತಿಳಿದುಕೊಳ್ಳಲಾರರು.

ಬದಲಾಗಿ, ಈ ಪವಿತ್ರ ಶರೀರದಲ್ಲಿ, ಈ ಪವಿತ್ರ ಅವತಾರವನ್ನು ಧರಿಸಿದ ತತ್ವದ ಆನಂದವನ್ನು, ತೀರ ಸಮೀಪ ಕಾಲದಲ್ಲೇ ನೀವು ಸವಿಯಬಹುದು. ಈ ಪವಿತ್ರ ಅವತಾರವನ್ನು, ಈ ಪವಿತ್ರ ಅವಕಾಶವನ್ನು ಅಳವಡಿಸಿಕೊಳ್ಳುವ ಭಾಗ್ಯ ಸಾಯಿಭಕ್ತರಿಗೆ ಮಾತ್ರ ದೊರಕಿದೆ. ಎಂದರೆ ಯಾವ ಮಹನೀಯರೂ, ಯಾವ ಮಹರ್ಷಿಗಳೂ, ಎಂಥ ತಪಸ್ವಿಗಳೂ, ಯಾವ ದೈವಾಂಶ ಸಂಭೂತರೂ ಗಳಿಸದ ಭಾಗ್ಯವನ್ನು ನೀವು ಗಳಿಸಿದ್ದೀರಿ. ಎಂದು ಹೇಳಬಹುದು. ನಾನು ಕೇವಲ ಎಲ್ಲರೊಂದಿಗೂ ತಿರುಗುತ್ತಾ, ಸಂಪರ್ಕ ಬೆಳೆಸುತ್ತಾ, ಎಲ್ಲರೊಂದಿಗೂ ಆಡುತ್ತಾ ಹಾಡುತ್ತಾ ಊಟಮಾಡುತ್ತಾ ಇರುವುದರಿಂದ, ಇದು ಸಾಮಾನ್ಯ ಮಾನವತ್ವವೇ ಎಂದು ನೀವು ತಿಳಿದರೆ ಅದು ತಪ್ಪು ತಿಳುವಳಿಕೆ!

ಯಾವ ಯುಗವಾದರೂ ಹೀಗೇನೆ! ಮಾನವತ್ವದಿಂದ ಮುಚ್ಚಲ್ಪಟ್ಟಿರುವುದರಿಂದ ಜನಗಳು ತಿಳಿದುಕೊಳ್ಳಲಾರದೆ ಹೋದರು. ಸ್ವಾಮಿಯ ತತ್ವ, ಸರ್ವದೇವತ್ವ ಸ್ವರೂಪವನ್ನು ಧರಿಸಿದಂಥ ಮಾನವಾಕಾರವೇ.

ನನ್ನ ಕಾರ್ಯಗಳು, ನನ್ನ ಮಾತುಗಳು, ನನ್ನ ಹಾಡುಗಳು, ಇವುಗಳಿಂದ ನಾನು ಕೂಡ ನಿಮ್ಮನ್ನು ಭ್ರಮೆಪಡಿಸುವಂತೆ ಮಾಡುತ್ತಿದ್ದೇನೆ, ನಿಜ! ಆದರೆ, ಎಷ್ಟು ಭ್ರಮೆಪಡಿಸಿದರೂ, ಸ್ವಾಮಿಯ ದೈವತ್ವ ಭಾವವನ್ನು ಮಾತ್ರ ನಿಮ್ಮ ಹೃದಯ ಪೀಠದ ಮೇಲೆ ಒಂದಿಷ್ಟೂ ಕದಲದೆ ಕರಗದೆ ಪ್ರತಿಷ್ಠಿಸಿದರೆ, ನಿಮಗೆ ನನ್ನ ಸ್ವಸ್ವರೂಪವನ್ನು ದರ್ಶಿಸಲು ಸಾಧ್ಯವಾಗುತ್ತದೆ. ಹಾಗಲ್ಲದೆ ಗಡಿಯಾರದ ಪೆಂಡುಲದ ಹಾಗೆ, ಒಂದು ನಿಮಿಷ ಇತ್ತ, ಒಂದು ನಿಮಿಷ ಅತ್ತ ಆಡುತ್ತಿರುವವರೆಗೂ ನನ್ನ ಯತಾರ್ಥ ನಿಮಗೆ ಬೋಧೆಯಾಗದು.

ಮತ್ತೊಂದು ವಿಷಯ. ಹಿಂದಿನ ಅವತಾರಗಳ ಶಕ್ತಿ ಸಾಮರ್ಥ್ಯಗಳು ಪ್ರಪಂಚವನ್ನು ವಶಪಡಿಸಿಕೊಂಡವು, ಎಂದರೆ, ಅದಕ್ಕೆ ಚಕ್ರವರ್ತಿಯಾಗಿದ್ದುದರಿಂದಲೋ, ಇನ್ನು ಯಾವುದೋ ಅಧಿಕಾರ ಸ್ಥಾನ ಹೊಂದಿದ್ದುದರಿಂದಲೋ ಕೊಂಚಮಟ್ಟಿಗೆ ಕಾರಣವಾಗಿದ್ದಿರಬಹುದು. ಆದರೆ ಈ ಸಮಯದಲ್ಲಿ, ಈ ಕಲಿಯುಗದಲ್ಲಿ, ಈ ಸತ್ಯಸಾಯೀ ಸ್ವರೂಪ ಧರಿಸಿಬಂದಿರುವ ಈಗ, ಯಾವುದರಿಂದಾಗಿ, ಇಷ್ಟು ದೇಶಗಳಿಂದ ಇಂಥ ಜನ ಸಮೂಹ ವಶವಾಗಿದ್ದಾರೆಂದರೆ, ಎಲ್ಲಕ್ಕೂ ಪರತತ್ವವಾದ ಆ ದೈವತ್ವವೇ ಕಾರಣ ಎಂದು ನಿಮಗೆ ಚೆನ್ನಾಗಿ ಅರ್ಥವಾಗುತ್ತದೆ

ಈ ಸತ್ಯಸಾಯೀ ಸ್ವರೂಪ ಎನ್ನುವುದನ್ನು, ಎಂದೋ ಮುಂದೆ, ಈ ಉಪಾಧಿ ಹೋದ ನಂತರ, ತಿಳಿದುಕೊಳ್ಳುವ ಪರಿಸ್ಥಿತಿ ಕೂಡ ನಿಮಗೆ ಸಂಭವಿಸಲಿಲ್ಲ! ಈ ದೇಹ ಇರುವಾಗಲೇ, ಸರ್ವ ದೇಶಗಳೂ ನಮ್ಮ ಭಾರತ ದೇಶಕ್ಕೆ ಶಿರಬಾಗಿ, ಈ ದೈವತತ್ವವಾದ ಸತ್ಯಸಾಯಿ ಅವತಾರ ಸರ್ವದೇಶಗಳಲ್ಲೂ ಕ್ಷಣಕಾಲದಲ್ಲೇ ಮೊಳಗಿ ಮೆರೆಯುವುದನ್ನು ನೀವು ನೋಡುವಿರಿ.

ಸನಾತನ ಧರ್ಮವನ್ನು ವೇದವಿಹಿತ ಧರ್ಮವನ್ನು ಇಷ್ಟರಲ್ಲೆ ಪ್ರಪಂಚದಲ್ಲೆಲ್ಲ ವ್ಯಾಪಿಸುವಂತೆ ಮಾಡುವುದೇ ಸಾಯಿ ಸಂಕಲ್ಪ. ಅಲ್ಲದೆ, ಕೆಲವರು ಭಾವಿಸುವಂತೆ, ಸ್ವಾಮಿಯ ಶಕ್ತಿಗಳನ್ನು ಲೋಕದಲ್ಲಿ ವಿಜೃಂಭಿಸಿ, ಪ್ರಪಂಚವನ್ನು ಆಕರ್ಷಿಸುವ ಭ್ರಮೆ ತತ್ವವಲ್ಲ ಇದು.

ಸತ್ಯವನ್ನು ನೆಲೆಗೊಳಿಸಿ, ಅಸತ್ಯವನ್ನು ನಿರ್ಮೂಲ ಮಾಡಿ, ಆ ಪ್ರಕಾಶದಲ್ಲಿ ನಿಮ್ಮೆಲ್ಲರನ್ನೂ ಆನಂದಿಸುವಂತೆ ಮಾಡಿ ಆಡಿಸುವ ಶಕ್ತಿ ಸ್ವರೂಪವೇ ಈ ಸಾಯಿ ಸ್ವರೂಪ".

ಈ ಹೇಳಿಕೆಯನ್ನು ಕೇಳಿದ ಕಿವಿಗಳು ಧನ್ಯ. ಅದನ್ನು ಅನುಗ್ರಹಿಸುತ್ತಿದ್ದಾಗ ಬಾಬಾರವರ ದಿವ್ಯ ತೇಜಸ್ಸನ್ನು ಪ್ರತ್ಯಕ್ಷ ಕಂಡವರೇ ಧನ್ಯರು. ಸಭಾ ಭವನದಿಂದ ಅಂದು ಹೊರ ಬಿದ್ದಾಗ, ಪ್ರತಿಯೊಬ್ಬರ ಎತ್ತರವೂ ನಾಲ್ಕೈದು ಬೆರಳು ಏರಿತ್ತು. ಸರ್ವ ದೇವತಾ ಸ್ವರೂಪರಾದ ಬಾಬಾರವರ ಸ್ಪರ್ಶನ ಸಂಭಾಷಣೆಗಳನ್ನು ಪಡೆದವರು ತಾವು ಎಂಬ ಹೆಮ್ಮೆ ಅವರ ಕಣ್ಮನಗಳಲ್ಲಿ ಹೊಳೆಯಿತು. ತಾವು ಅವತಾರ ಮೂರ್ತಿ ಎಂದೂ, ತಮ್ಮದು ಸಾಕ್ಷಾತ್ ದೈವ ಸ್ವರೂಪವೆಂದೂ ಸ್ವಾಮಿ ಅನೇಕ ಸಲ ಹಿಂದೆ ಹೇಳಿದ್ದರು. ಆದರೆ ದುಃಖ ನಿವೃತ್ತಿಗಾಗಿ, ಆನಂದ ಪ್ರಾಪ್ತಿಗಾಗಿ, ಮನುಷ್ಯ ಕಲ್ಪಿಸಿಕೊಂಡು ಆರಾಧಿಸುತ್ತಿರುವ ಎಲ್ಲ ದೇವತಾ ಸ್ವರೂಪಗಳೂ ತಾವೇ, 'ಬಹುಧಾ ವದಂತಿ'ಯಾದ 'ಏಕಂ' ತಾವೇ ಎಂದು ತಿಳಿಯ ಹೇಳಿದ್ದು ಅಂದೇ, ಅಲ್ಲೇ ಆ ಪ್ರಪಂಚ ಸಮ್ಮೇಳನದಲ್ಲೇ!

೧೮ನೇ ತಾ| ಉಪಸಮಿತಿಗಳ ಸಲಹೆಗಳನ್ನು ಮತ್ತಷ್ಟು ಜನ ಪ್ರತಿನಿಧಿಗಳು ಚರ್ಚಿಸಿದರು. ಸಭೆಯನ್ನುದ್ದೇಶಿಸಿ ಮತ್ತೆ ಕೆಲವರು ಭಾಷಣ ಮಾಡಿದರು. ಅವರ ಅಭಿಪ್ರಾಯಗಳನ್ನೆಲ್ಲ ಸ್ವಾಮಿ ಕ್ರೋಢೀಕರಿಸಿ ತಮ್ಮ ಭಾಷಣದಲ್ಲಿ ಹೇಳಿದರು. ಸಾಯಿ ಸೇವಾ ಸಂಸ್ಥೆಗಳನ್ನು ಅನುಸರಿಸಬೇಕಾದ ಪಥವನ್ನು ನಿರೂಪಿಸಿದರು. ಕುಹಕ, ಕೃತ್ರಿಮಗಳಿಗೆ ಆದರಣೆ ಮನ್ನಣೆ ದೊರಕುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ, ಅವರ ಉಪದೇಶದ ನೇರವಾದ ಆಚರಣೆ" ಎಲ್ಲರಿಗೂ ಸಮಾನವಾದ ಹಕ್ಕು ಬಾಧ್ಯತೆಗಳಿರಬೇಕೆಂಬುದು ತಪ್ಪು! ದನಗಳೆಲ್ಲ ಸಮಾನ ಎನ್ನುತ್ತ ಪಜನಿಗೆ ಇಷ್ಟು ಬೆಲೆ ಎಂದು ನಿರ್ಧರಿಸಿ ಅವನ್ನು ಒಟ್ಟಾಗಿಕೊಳ್ಳಲು ಸಾಧ್ಯವೆ? ಹಾಲು ಕೊಡುವುದರಲ್ಲಿ ವ್ಯತ್ಯಾಸವಿರುತ್ತದೆ. ಆಹಾರದ ಅಳತೆಯಲ್ಲಿ ಹೆಚ್ಚು ತಗ್ಗುಗಳಿರಬಹುದು; ಒಂದೊಂದಕ್ಕೂ ಒಂದು ವಿಶಿಷ್ಟತೆ ಇರುತ್ತದೆ. ಹಾಗೆಯೇ ಮನುಷ್ಯರಲ್ಲೂ, ಅವರವರ

ವಯುಸ್ಸು, ಅಂತಸ್ತು, ಅಧಿಕಾರ, ಶಕ್ತಿ ಸಾಮರ್ಥ್ಯ, ಆರೋಗ್ಯ, ಆಶೆ ಆತಂಕಗಳಿಗನುಸಾರವಾಗಿ, ಅವರವರ ಹಕ್ಕು ಬಾಧ್ಯತೆಗಳನ್ನು ನಿಶ್ಚಯಿಸಿ ನಿರೀಕ್ಷಿಸಬೇಕಾಗುತ್ತದೆ. ಆತ ಗುರುವೆ, ಶಿಷ್ಯನೆ? ತಂದೆಯೆ, ಮಗುವೆ? ಪತಿಯೆ, ಸತಿಯೆ? ದೃಢಗಾತ್ರನೆ ರೋಗಿಯೆ? - ಎಂದು ವಿವೇಚಿಸಬೇಕಾಗುತ್ತದೆ. ಆದರೆ ನಾನು ಮಾತ್ರ ಒಂದೇ ಒಂದು ವಿಷಯವನ್ನು ಗಮನಿಸಿ ಅನುಗ್ರಹ ಮಾಡುತ್ತೇನೆ, ಹತ್ತಿರ ಸೇರಿಸುತ್ತೇನೆ. ಅದೇನೆಂದರೆ ಪ್ರೇಮ. ನಿಮ್ಮಲ್ಲಿ ಪರಿಶುದ್ಧ ಪ್ರೇಮ ಬೆಳೆದರೆ, ನಿಮಗೆ, ಅದರಿಂದಲೇ ಸುಖ, ಶಾಂತಿ, ಭಗವತ್ ಸಾನ್ನಿಧ್ಯ ಸಾಯುಜ್ಯ ಎಲ್ಲವೂ ಲಭಿಸುತ್ತವೆ".

ಆ ದಿನ ಸಂಜೆ, ಅಖಿಲ ಭಾರತ ಸತ್ಯಸಾಯೀ ಪ್ರಶಾಂತಿ ವಿದ್ವನ್ ಮಹಾಸಭೆಯ ಕಾರ್ಯಕಾರೀ ಮಂಡಲಿಯ ನಾಲ್ಕು ಮಹಾ ವಿದ್ವಾಂಸರು ಸಂಸ್ಕೃತದಲ್ಲಿ ಉಪನ್ಯಾಸವಿತ್ತರು. "ಅದ್ಭುತ ಮೂರ್ತಿ ಸಾಯಿಬಾಬಾ" (In Incredible Saibaba) - ಎಂಬ ಆಂಗ್ಲ ಗ್ರಂಥವನ್ನು ರಚಿಸಿದ ಶ್ರೀ ಆರ್ಥರ್ ಓಸ್ಬೋರ್ನ್ ಅವರ ಧರ್ಮಪತ್ನಿ ಸತ್ಯಸಾಯಿ ಅವತಾರವನ್ನು ಕುರಿತು ಮಾತನಾಡಿದರು. ಅಂಥದ್ದೇ 'ನಂಬಲಾಗದ ಮಹಿಮೆ' ಈಗಲೂ ಸತ್ಯಸಾಯಿಯಲ್ಲಿ ಕಾಣುತ್ತಿದ್ದೇವೆ ಎಂದರು.

ಬಾಬಾ ತಮ್ಮ ಸಮಾಪ್ತಿ ಭಾಷಣದಲ್ಲಿ, ಧ್ಯಾನ, ಭಜನೆ, ಗ್ರಂಥ ವ್ಯಾಸಂಗಗಳನ್ನು ಕುರಿತು ಅಮೂಲ್ಯ ಸಲಹೆಗಳನ್ನಿತ್ತರು. ದೇಶದಾದ್ಯಂತ ಸಂಸ್ಥೆಗಳು ನಗರ ಸಂಕೀರ್ತನೆಗೆ ವಿಶೇಷ ಗಮನವೀಯಬೇಕೆಂದರು. ಜಯದೇವ, ಗೌರಾಂಗ, ತುಕಾರಂ, ಕಬೀರ್, ಪುರಂದರದಾಸರು, ಶಿವಶರಣರು ಎಲ್ಲರೂ ಭಗವಂತನನ್ನು ಮನೆಯ ಬಾಗಿಲಿಗೂ, ಮನದ ಬಾಗಿಲಿಗೂ ಇಂಥ ಕೀರ್ತನಾ ಪದ್ಧತಿಯಿಂದಲೇ ತಂದರೆಂದರು. "ಅರುಣೋದಯ ತರುಣದಲ್ಲಿ ಗುಂಪಾಗಿ ಸೇರಿ, ಸ್ತೋತ್ರಗಳನ್ನು ಹಾಡುತ್ತ, ಬೀದಿಗಳಲ್ಲಿ ನಡೆಯಿರಿ! ನಿದ್ರಿಸುವವರನ್ನೆಚ್ಚರಿಸಿ. ಕಲಹ, ಕದನ, ಕುಹಕ, ಕುಭಾಷೆಗಳಿಂದ ದಿನವಿಡೀ ಕಲುಷಿತವಾದ ವಾತಾವರಣವನ್ನು ಭಗವನ್ನಾಮದಿಂದ ಶುದ್ಧೀಕರಿಸಿ, ದಿವ್ಯ ಪರಿಮಳದಿಂದ ಪಾವನಗೊಳಿಸಿ. ಹೊಸ ದಿನವನ್ನು ಹೆಸರಿಂದ ಹಸನಾಗಿಸಿ. ನಿಮ್ಮ ಆನಂದವನ್ನು ಉದ್ದಕ್ಕೂ ಹಂಚಿ" - ಎಂದರು.

೧೯ನೇ ತಾ॥ ಬೆಳಿಗ್ಗೆ ೧೦ ಗಂಟೆಗೆ ಸಮ್ಮೇಳನದ ಮುಕ್ತಾಯ ಸಮಾರಂಭ ಜರುಗಿತು. ನೆರೆದಿದ್ದ ಜನಸ್ತೋಮಕ್ಕೆ ಸಮ್ಮೇಳನದಲ್ಲಿ ನಿಶ್ಚಯಿಸಲಾದ ತೀರ್ಮಾನಗಳನ್ನು ತಿಳಿಸಿ, ಅವರನ್ನೂ ಸ್ಫೂರ್ತಿಗೊಳಿಸಿರೆಂದು ಬಾಬಾ ಆಜ್ಞಾಪಿಸಿದರು. ಡಾ॥ ಗೋಕಾಕ್ ಭಾಷಣ ಮಾಡುತ್ತ, ಹಿಂದಿನ ದಿನ ಸ್ವಾಮಿ ತಮ್ಮ ನಿಜತತ್ತ್ವವನ್ನು ಹೊರಗೆಡೆಹಿದ್ದನ್ನು ಜ್ಞಾಪಕಕ್ಕೆ ತಂದರು. "ಆತ್ಮೋನ್ನತಿಯ ಮಾರ್ಗದ, ಆತ್ಮ ತೇಜಸ್ಸನ್ನು ಅಭಿವೃದ್ಧಿಗೊಳಿಸುವ ಪಥದ ದಾರ್ಶನಿಕ, ಸ್ವಾಮಿ! ಸಾಯಿ ಎಂಬ ಮಾತು ಮಾಯೆಯನ್ನು ಜಯಿಸುತ್ತದೆ, ಬಂಧನವನ್ನು ಬಿಡಿಸುತ್ತದೆ, ಕತ್ತಲೆಯನ್ನು ಕರಗಿಸುತ್ತದೆ. ಎಲ್ಲ ಮಾತುಗಳ ಮರ್ಮವೂ ಆ ಮಾತಿನಲ್ಲಡಕವಾಗಿದೆ." - ಎಂದರು.

ಮಹಾರಾಷ್ಟ್ರದ ಶಾಸನ ಸಭೆಯ ಅಧ್ಯಕ್ಷರಾದ ಶ್ರೀ ಭಾರ್ದೆ ಅವರು, "ಭೋಗ ನಗರವಾದ ಬೊಂಬಾಯಿ ನಗರವನ್ನು ಬಾಬಾ ಅವರು ಯೋಗ ನಗರವಾಗಿ ಮಾರ್ಪಡಿಸುತ್ತಿದ್ದಾರೆ" - ಎಂದು ಸಂತೋಷಪಟ್ಟರು. ಕ್ಷಿಪ್ರದಲ್ಲೇ ಎಲ್ಲ ಭೋಗ ನಗರಗಳೂ ರಾಷ್ಟ್ರಗಳೂ ಯೋಗನಗರಗಳಾಗಿ ಯೋಗಭೂಮಿಯಾಗಿ ರೂಪಾಂತರ ಹೊಂದುತ್ತವೆ ಎಂದರು. ಬಾಬಾ ಅವರು ಗೀತಾ ಸಂದೇಶವನ್ನು ಮತ್ತೆ ಉದ್ಧರಿಸುತ್ತ, ನಷ್ಟೋಮೋಹಃ ಸ್ಮೃತಿರ್ಲಬ್ಧಾ ಎಂದು ಹೇಳಿದ ಫಲಾಪೇಕ್ಷೆಯಿಲ್ಲದೆ ಭಗವದರ್ಪಣ ಬುದ್ಧಿಯಿಂದ ಕರ್ತವ್ಯ ನಿರತನಾದ ಅರ್ಜುನನನ್ನು ಅನುಸರಿಸಿ ಬಾಳುವುದುತ್ತಮ ಎಂದು ಬೋಧಿಸಿದರು.

ಸಮ್ಮೇಳನದ ದಿನಗಳಲ್ಲಿ ಸ್ವಾಮಿ ಧರ್ಮಕ್ಷೇತ್ರದಲ್ಲೇ ಬಿಡಾರ ಮಾಡಿದ್ದರು. ಅಲ್ಲೂ ನೂರಾರು ಭಕ್ತರು ಅವರನ್ನು ಸಂದರ್ಶಿಸಿದರು. ರಾತ್ರಿ ಹಗಲೆನ್ನದೆ, ದೇಹಶ್ರಮವನ್ನು ಲೆಕ್ಕಿಸದೆ, ಸ್ವಾಮಿ ಅವರಿಗೆ ಸಾಧನಾ ಮಾರ್ಗವನ್ನೂ ಆತ್ಮೋನ್ನತಿಯ ಆನಂದವನ್ನೂ ಉಪದೇಶಿಸುತ್ತಿದ್ದರು. ೬೫ ವಿದ್ಯಾರ್ಥಿಗಳಿಗೆ ಒಂದು ತಿಂಗಳ ಕಾಲ 'ಪ್ರಶಾಂತಿ ಶಿಕ್ಷಣ'ವನ್ನೊದಗಿಸುತ್ತಿದ್ದ ಶಿಬಿರಕ್ಕೆ ಸ್ವಾಮಿ ಭೇಟಿಕೊಟ್ಟರು. ಬೊಂಬಾಯಿ ನಗರದ "ಲಯನ್ಸ್"ಗಳಿಗೆ, ಅವರಿಗಿರಬೇಕಾದ ತತ್ತ್ವದೃಷ್ಟಿಯನ್ನು ಬೋಧಿಸಿದರು. ವಿದೇಶಗಳಿಂದ ಬಂದಿದ್ದ ಭಕ್ತರಿಗೆ ಪ್ರತ್ಯೇಕ ಪ್ರತ್ಯೇಕ ಸಮಾವೇಶಗಳನ್ನು ಏರ್ಪಡಿಸಿ, ಅವರಿಗೆ ವಿಶೇಷ ತರಬೇತಿಯನ್ನೊದಗಿಸಿದರು. ಮನ ಬಂದಾಗಲೆಲ್ಲ ಭಾರತಕ್ಕೆ ಬಂದು, ಸ್ವಾಮಿಯನ್ನು ಪ್ರತ್ಯಕ್ಷ ಕಂಡು, ಅವರಿಂದ ಉಪದೇಶ ಪಡೆವ ಭಾಗ್ಯ ಅವರಿಗಿಲ್ಲವೆಂದು ಸ್ವಾಮಿಗೆ ತಿಳಿದಿತ್ತು.

ಸಮ್ಮೇಳನದ ಕಾಲದಲ್ಲಿ ತಮ್ಮ ಸಾಮೀಪ್ಯಕ್ಕೆ ಸ್ವಾಮಿಯವರು ಬರಮಾಡಿಕೊಂಡು ಅನುಗ್ರಹಿಸಿದವರಲ್ಲಿ, ಗಾಂಧೀಪಂಥವನ್ನು ಹಿಡಿದು ಪ್ರಖ್ಯಾತಿ ಪಡೆದ, ಗುಜರಾಥಿ ಸಾಹಿತ್ಯ ಕ್ಷೇತ್ರದಲ್ಲಿ ಅದ್ವಿತೀಯರೆನಿಸಿದ, ರಾಜಕಾರಣಗಳಲ್ಲಿ ಅಪ್ರತಿಹತ ಧೈರ್ಯ ಸಾಹಸಗಳನ್ನು ಪ್ರಕಟಿಸಿದ, ಭಾರತೀಯ ಸಂಸ್ಕೃತಿಯ ಪುನರುದ್ಧಾರಣ ಕೈಂಕರ್ಯದಲ್ಲಿ ಅಮಿತಾಸಕ್ತಿ ಹೊಂದಿದ್ದ, ಕೆ.ಎಂ. ಮುನ್‌ಷಿ ಅವರೂ ಒಬ್ಬರು. ಪರಕೀಯರ ಆಡಳಿತದಿಂದ ಭಾರತ ಬಿಡುಗಡೆಯಾದರೆ, ಅದರ ಸಂಸ್ಕೃತಿ ವಿಕಾಸಗೊಂಡು ಜಗತ್ತಿಗೇ ಕಲ್ಯಾಣವಾಗುವುದೆಂದು ಅವರು ನಂಬಿದ್ದರು. ಅದಕ್ಕಾಗಿಯೇ ಅವರು ಸ್ವತಂತ್ರ ಭಾರತದ ಕೊಡುಗೆಯಾಗಿ - 'ಭಾರತೀಯ ವಿದ್ಯಾಭವನ' - ಎಂಬ ವಿದ್ಯಾ ಸಂಸ್ಥೆಯನ್ನು ನೆಟ್ಟು ಬೆಳೆಸಿ ಪೋಷಿಸಿ ಕೃತಾರ್ಥರಾದರು. ಆ ಭವನದಲ್ಲೇ ಸಮ್ಮೇಳನವನ್ನು ನಡೆಸಲು ಸಾಧ್ಯವಾದದ್ದಕ್ಕಾಗಿ ಸ್ವಾಮಿಯವರೂ, ಮುನ್‌ಷಿಯವರೂ ಸಂತೋಷಿಸಿದರು. ೮೦ ವರ್ಷದ ವೃದ್ಧಾಪ್ಯಸ್ಥಿತಿಯಲ್ಲೂ, ಮುನ್‌ಷಿಯವರು ಸಭಾ ಮಂಟಪಕ್ಕೆ ಬಂದು, ಕಾರ್ಯಕ್ರಮವನ್ನು ವೀಕ್ಷಿಸಿ ಸಂತೃಪ್ತಿ ಪಡೆದರು. ಅವರ ಕುತೂಹಲಕ್ಕೂ ಉತ್ಸಾಹಕ್ಕೂ ಮೇರೆ ಇರಲಿಲ್ಲ. "ಅತೀತ ಶಕ್ತಿ ಹೊಂದಿರುವ ಮಹಾ ಪುರುಷರನ್ನು ಸಂದರ್ಶಿಸುವುದರಲ್ಲಿ ಯಾವಜ್ಜೀವನ ನನಗೆ ಆಸೆಯುಂಟು. ಅಂಥವರ ನಡೆ ನುಡಿಗಳನ್ನೂ, ಮನದಲ್ಲಿ ಶ್ರದ್ಧಾ ಭಕ್ತಿಗಳನ್ನು ಅಭಿವೃದ್ಧಿಗೊಳಿಸಲು ಅವರು ಕೈಗೊಳ್ಳುವ ವಿಧಿ ವಿಧಾನಗಳನ್ನೂ ನಾನು ಸದಾ ಪರೀಕ್ಷಿಸುವುದುಂಟು" ಎಂದು ಅವರು ಒಪ್ಪಿಕೊಂಡರು.

ಮೊದಲನೆಯ ಬಾರಿ ಮುನ್‌ಷಿ ಅವರು ಧರ್ಮಕ್ಷೇತ್ರಕ್ಕೆ ಬಂದು ಬಾಬಾ ಅವರನ್ನು ಸಂದರ್ಶಿಸಿದಾಗ, ಪ್ರಾರ್ಥನೆ ಫಲಿಸಿತು. ದಾಹ ತೀರಿತು, ಗತಿ ಗುರಿ ಮುಟ್ಟಿತು ಏಕೆಂದರೆ ಅವರ ಆಸೆ ಈಡೇರಿತು. ಅವರಲ್ಲಿ ಅಡಕವಾಗಿದ್ದ ಆತಂಕಗಳು ಅಂತ್ಯವಾದವು. ಅವರೇ ಹೇಳಿದಂತೆ, ಭಾರತೀಯ ವಿದ್ಯೆಯನ್ನು ಜಗತ್ತಿನ ಹೃದಯ ಸಿಂಹಾಸನದಲ್ಲಿ ಕೂರಿಸಿ ಪಟ್ಟಾಭಿಷೇಕ ಜರಗಿಸುವ ಅವತಾರ ಪುರುಷನನ್ನೇ ಅವರು ಕಂಡರು.

ತಮ್ಮ ಪಕ್ಕದಲ್ಲಿ ಮುನ್‌ಷಿ ಅವರು ಕುರ್ಚಿಯಲ್ಲಿ ಕುಳಿತುಕೊಂಡಾಗ, ಅವರ ಬಲಗೈ ಗಡಗಡನೆ (ಪಾರ್ಕಿನ್‌ಸನ್ ಖಾಯಿಲೆಯಿಂದ) ನಡುಗುತ್ತಿದ್ದುದನ್ನು ಸ್ವಾಮಿ ಗಮನಿಸಿದರು. ಮುನ್‌ಷಿಯವರು "ಭಗನ್ಸ್ ಜರ್ನಲ್"ನಲ್ಲಿ ಬರೆದಂತೆ, "ಬಾಬಾ ಅವರು ತಮ್ಮ ಕುರ್ಚಿಯಿಂದ ಎದ್ದರು. ನನ ಬಲಗೈ ಬೆರಳುಗಳನ್ನು ಅವರ ಕೈಯಿಂದ ಮುಚ್ಚಿ ಹಿಡಿದರು. ಅವರ ಅಂಗೈಯಲ್ಲಿ ಉದ್ಭವವಾದ ವಿಭೂತಿಯಿಂದ ನನ್ನ ಬೆರಳುಗಳನ್ನುಜ್ಜಿದ್ದರು. ಕೂಡಲೇ ಕೈ ಬೀಸುತ್ತ, ಆಗಲೇ ಸೃಷ್ಟಿಯಾದ ಒಂದು ಉಂಗುರವನ್ನು ಮುಷ್ಟಿಯಲ್ಲಿ ಹಿಡಿದು, ನನ್ನ ಬಲಗೈ ಕಿರುಬೆರಳಿಗೆ ಹಾಕಿದರು. ಬೆರಳುಗಳನ್ನು ಆ ಕೂಡಲೇ ಮಡಿಸಲು ನನ್ನಿಂದ ಸಾಧ್ಯವಾಯಿತು! ಬಲಗೈ ನಡುಕ ನಿಂತಿತು; ಬಲಗಾಲಿನ ನಡುಕವೂ ತಕ್ಷಣವೇ ಮಾಯವಾಯಿತು". ಮತ್ತೆ ಮುನ್‌ಷಿ ಅವರಿಗೆ ಈ ಖಾಯಿಲೆ ಇರಲೇ ಇಲ್ಲ. ಪಾರ್ಕಿನ್‌ಸನ್ ಖಾಯಿಲೆ ಎಂಬುದು ವೈದ್ಯಶಾಸ್ತ್ರ ರೀತ್ಯಾ ವಾಸಿಯಾಗದ ರೋಗ! ಅದರ ಹೊರ ಚಿಹ್ನೆಗಳನ್ನು ಕೂಡ ಹತೋಟಿಗೆ ತರುವುದು ದುಸ್ಸಾಧ್ಯವಂತೆ.

ಅನೇಕ ವರ್ಷಗಳ ಕಾಲ ಎದೆ ಗಟ್ಟಿಮಾಡಿಕೊಂಡು ತಾನು ಅನುಭವಿಸುತ್ತಿದ್ದ ಆ ಖಾಯಿಲೆಗಳನ್ನು ಸಂಪೂರ್ಣ ಗುಣಪಡಿಸಿದ್ದಕ್ಕಿಂತ, ಮುನ್‌ಷಿಯವರಿಗೆ ಸ್ವಾಮಿ ಮತ್ತೊಂದು ವಿಶಿಷ್ಟ ಅನುಗ್ರಹವನ್ನು ದಯಪಾಲಿಸಿದರು. ಅವರು ಅರಸುತ್ತಿದ್ದ ಸದ್ಗುರುವನ್ನೂ ದೊರಕಿಸಿಕೊಟ್ಟರು. ಬಾಬಾ ಅವರು ಅವರ ಹಾಗೂ ಅವರ ಮಡದಿ ಮಕ್ಕಳ ಅಂತರಂಗವನ್ನು ಪ್ರವೇಶಿಸಿ, ಅದರ ಆರಾಧನೆಗಳನ್ನು ಸ್ವೀಕರಿಸಿದರು. ಅವರೆಲ್ಲರೊಂದಿಗೂ ಬೆಂಗಾವಲಾಗಿ, ಕೈದೀವಿಗೆಯಾಗಿ, ಭಾಗ್ಯದ ದೆಸೆಯಲ್ಲೂ ಕಷ್ಟ ಕಾಲದಲ್ಲೂ ಜೀವನದ ಏರಿಳಿತದ ಹೊಯ್ಲಿನಲ್ಲೂ, ತಾವೇ ಜೊತೆಯಲ್ಲಿದ್ದರೆಂಬುದನ್ನು ತಿಳಿಯ ಹೇಳಿದರು. ಪದವಿಗೇರಿದಾಗಲೂ ಪದಚ್ಯುತರಾದಾಗಲೂ, ಶ್ರೀಮಂತಿಕೆಯಲ್ಲಿ ಹೊರಳಿದಾಗಲೂ ಕಾರಾಗೃಹದಲ್ಲಿ ನರಳಿದಾಗಲೂ, ತಾವೇ ಅವರಿಗೆ ಶ್ರೀರಾಮ ರಕ್ಷೆಯಾಗಿದ್ದರೆಂಬುದನ್ನು ಸ್ಪಷ್ಟಪಡಿಸಿದರು. ಅನೇಕ ವರ್ಷಗಳ ಹಿಂದೆ, ಮುನ್‌ಷಿಯವರ ಮಗ ರೈಲು ಪ್ರಯಾಣದ ಮಧ್ಯೆ ಮರಣಾವಸ್ಥೆಯಲ್ಲಿ ಯಾವುದೋ ಒಂದು ಚಿಕ್ಕ ಸ್ಟೇಷನ್‌ನಲ್ಲಿಳಿದು, ಅಲ್ಲಿಯ ಮಾಸ್ತರ ವೈದ್ಯೋಪಚಾರದಿಂದ ಬದುಕಿದ ಸನ್ನಿವೇಶದಲ್ಲಿ, ತಾನೇ ಅಲ್ಲಿ ಆಗ ಪ್ರತ್ಯಕ್ಷ ಇದ್ದು ಉಪಚಾರ ಮಾಡಿದೆ ಎಂದು ಹೇಳಿದಾಗ, ಆ ಕುಟುಂಬ ಕೃತಜ್ಞತಾಸೂಚಕವಾದ ಅಶ್ರುಧಾರೆಯನ್ನರ್ಪಿಸಿತು. "ಬಾಬಾ ಅವರು ಶ್ರದ್ಧಾಭಕ್ತಿಗಳ ಬೀಜವನ್ನು ಹೃದಯಕ್ಷೇತ್ರದಲ್ಲಿ

ನಾಟುತ್ತಾರೆ. ಅವು ಅಲ್ಲಿ ಮೊಳೆತು ಬೆಳೆದು ಹೂತು ಕಾಯಿಬಿಟ್ಟು, ಲೋಭ ಮೋಹ ದ್ವೇಷಾಸೂಯೆಗಳನ್ನು ನಾಶ ಮಾಡುತ್ತವೆ" - ಎಂದು ಮುನ್‌ಷಿಯವರು ಬರೆದಿದ್ದಾರೆ.

ದೀರ್ಘಕಾಲದ ತಮ್ಮ ಜೀವಿತದಲ್ಲಿ ಮುನ್‌ಷಿಯವರು ಅಸಂಖ್ಯಾತ ಬಾಬಾಗಳನ್ನು ಕಂಡಿದ್ದರು. ಆದ್ದರಿಂದ ಮೊಟ್ಟಮೊದಲು ಸ್ವಾಮಿಯ ಹೆಸರನ್ನು ಕೇಳಿದಾಗ, ಅವರಲ್ಲಿ ಕುತೂಹಲ ಕೂಡ ಅಂಕುರಿಸಲಿಲ್ಲವಂತೆ! ಆದರೆ, ಸ್ವಾಮಿಯ ದರ್ಶನ ಸ್ಪರ್ಶನ ಸಂಭಾಷಣೆ ಭಾಗ್ಯ ದೊರೆತ ನಂತರ, ನಿಜವನ್ನರಿತು, ಅವರು ತಮ್ಮ "ಭವನ್ಸ್ ಜರ್ನಲ್" ಎಂಬ ಪತ್ರಿಕೆಯಲ್ಲಿ (ಪ್ರತಿ ಪಕ್ಷಕ್ಕೂ ಅದರ ೫೦ ಸಾವಿರ ಪ್ರತಿಗಳು ಖರ್ಚಾಗುತ್ತಿವೆ) ಈ ರೀತಿ ಬರೆದು ತಮ್ಮ ಪಶ್ಚಾತ್ತಾಪವನ್ನು ಪ್ರಕಟ ಮಾಡಿದರು. "ಸಾವಿರಾರು ವರ್ಷಗಳ ಹಿಂದೆ ರೋಮ್ ನಗರದ ಚಕ್ರಾಧಿಪತಿಯಾಗಿದ್ದ ಜೂಲಿಯಸ್ ಸೀಸರ್ ಎಂಬ ಶೂರಾಗ್ರೇಸರ ಬ್ರಿಟಿಷರನ್ನು ಜಯಿಸಿದ ನಂತರ ತಮ್ಮವರಿಗೆ, "ಬಂದೆ, ಕಂಡೆ, ಗೆದ್ದೆ" - ಎಂಬ ಮೂರೇ ಮಾತುಗಳಲ್ಲಿ ತನ್ನ ದಿಗ್ವಿಜಯವನ್ನು ತಿಳಿಸಿದನಂತೆ. ಬಾಬಾ ಅವರನ್ನು ಕುರಿತು ನಾನೂ ಮೂರೇ ಮಾತುಗಳನ್ನಾಡ ಬಯಸುತ್ತೇನೆ. ನಾನು ಸ್ವಾಮಿಯ ಸನ್ನಿಧಿಗೆ "ಬಂದೆ, ಕಂಡೆ, ಸೋತೆ!" ಮುನ್‌ಷಿಯವರೊಬ್ಬರೇ ಅಲ್ಲ, ಯಾರಾದರೂ ಸರಿ, ನೇರವಾದ ನೋಟದೊಂದಿಗೆ ಅವರ ಸನ್ನಿಧಿಗೆ ಹೋಗುವವರ ಅನುಭವ ಎಲ್ಲ ಈ ರೀತಿಯದೇ."

ಮಾನವ ಹೃದಯ ಕುಹರಗಳಲ್ಲಿ ಕಗ್ಗತ್ತಲೆ ಕವಿದು, ದ್ವೇಷಾಸೂಯೆಗಳೂ ಲೋಭ ಮದ ಮಾತ್ಸರ್ಯಗಳೂ ಅಲ್ಲಿ ಬಾವಲಿಗಳಂತೆ ನೇತಾಡುವುದರಿಂದ, 'ದೀಪ ಪ್ರಚಾರ' ಎಂಬ ಒಂದು ಜಾಗತಿಕ ಚಳುವಳಿಯನ್ನು ಬಾಬಾ ಅವರ ಆಶೀರ್ವಾದ ಸಹಿತ ಪ್ರಾರಂಭಿಸಿದ ಮೆಕ್ಸಿಕೋ ದೇಶದ 'ಇಂದ್ರಾದೇವಿ' ಎಂಬ ವೃದ್ಧ ಮಹಿಳೆ, ೧೮ನೇ ತಾ| ಧರ್ಮಕ್ಷೇತ್ರದಲ್ಲಿ ಬೆಳಗುವ ನಂದಾದೀಪದಿಂದ ಒಂದು ದೀಪವನ್ನು ಹೊತ್ತಿಸಿ ತೆಗೆದೊಯ್ದರು!

ನಯನರೋಗ ಪೀಡಿತರಾದ ದೃಷ್ಟಿಮಾಂದ್ಯದಿಂದ ನರಳುತ್ತಿದ್ದ ಹಲವರಿಗೆ ಸಾಯಿ ಸೂರ್ಯೋದಯದಿಂದ ಅಶಾಂತಿ ತಲೆದೋರಿತು. ಲಕ್ಷೋಪಲಕ್ಷ ಜನ ಇರುವೆ ಸಾಲಿಟ್ಟಂತೆ ಬಾಬಾರವರು ಎಲ್ಲಿದ್ದರಲ್ಲಿಗೆ ಭಕ್ತಿಯಿಂದ ಪ್ರೇರಿತರಾಗಿ ಹೋಗುತ್ತಿರುವುದನ್ನು ನೋಡಿದಾಗ, ತಟ್ಟೆ ಕಾಸು, ನಜರು ಕಾಣಿಕೆ, ಪಾದ ಪೂಜೆ ರುಸುಂ, ಶಿಷ್ಯ ಸಂಪಾದನೆ, ಇತ್ಯಾದಿಗಳಿಂದ ಬದುಕಿ ಬಾಳುವ ವ್ಯಕ್ತಿಗಳಿಗೆ ಹೀಗಾಗುವುದು ಸಹಜ. ಆದರೆ ಈ ಅವತಾರ ಪುರುಷನಿಂದ ಲೋಕದಲ್ಲಿ ಆಧ್ಯಾತ್ಮಿಕ ಶಕ್ತಿ ಬಲಪಡುವುದೆಂದೂ, ಎಲ್ಲ ಮತಗಳಿಗೂ, ಎಲ್ಲ ಮತ ಸ್ಥಾಪನಗಳಿಗೂ ಅವರ ಬೋಧನೆಯಿಂದ ತುಷ್ಟಿ ಪುಷ್ಟಿಗಳು ಲಭಿಸುವುವೆಂದೂ, ಅವರರಿಯರು; ತಮ್ಮದೇ ಆದ ಒಂದು ಮತವನ್ನಾಗಲಿ, ಪಂಥವನ್ನಾಗಲಿ, ಪೂಜಾ ಪದ್ಧತಿಯನ್ನಾಗಲಿ, ಮೋಕ್ಷ ಮಾರ್ಗವನ್ನಾಗಲಿ, ತತ್ವಶಾಸ್ತ್ರವನ್ನಾಗಲಿ ನೆಲೆಗೊಳಿಸುವ ಸಂಕಲ್ಪ ಬಾಬಾ ಅವರಿಗಿಲ್ಲ. ಪ್ರೇಮವೇ ಅವರ ಬೋಧೆ, ಅವರ ಶಾಸ್ತ್ರ, ಅವರ ಅಸ್ತ್ರ, ಅವರ ಆಸ್ತಿ ಎಂಬುದನ್ನು ತಿಳಿದುಕೊಳ್ಳುವವರೆಗೂ ಇಂಥವರಿಗೆ ಭಯ ಶಂಕೆ ಆಂದೋಳನಗಳು ತಪ್ಪಿದ್ದಲ್ಲ,

ಬಹುಮುಖದ ಪರ್ವತ ಶಿಖರ, ಒಂದು ಕಡೆಯಿಂದ ನಂದಿ, ಮತ್ತೊಂದು ಕಡೆ ಗರುಡ, ಮಗುದೊಂದು ಕಡೆ ಮಾರುತಿಯ ಹಾಗೆ ಕಾಣಿಸುವುದಿಲ್ಲವೆ? ಹಾಗೆಯೇ ಬಾಬಾ ಅವರು, ಶಿವ, ವಿಷ್ಣು, ದುರ್ಗಾ, ಏಸು, ಬುದ್ಧ ಎಂಬ ವಿವಿಧ ರೂಪಗಳಂತೆ ತೋರುವುದರಲ್ಲಿ ಆಶ್ಚರ್ಯವಿಲ್ಲ. ಆದರೂ ದ್ವೇಷ ಬೆಳೆಸಿ, ಅದರ ಕಹಿ ಕಾಯನ್ನೇ ತಿಂದು ತಣಿವ ಕೆಲ ಪತ್ರಿಕೆಗಳು ಬಾಬಾ ಅವರನ್ನು ದೂಷಿಸಿ ತಮ್ಮ ತಮ್ಮ ಮುಖಗಳಿಗೆ ಮಸಿ ಬಳಿದುಕೊಂಡುವು. ಮತ್ತೆ ಹಲವು ಪತ್ರಿಕೆಗಳು ಸತ್ಯವನ್ನರಿಯಲು ಉತ್ಸಾಹದಿಂದ ಬಾಬಾ ಅವರನ್ನು ಸಂದರ್ಶಿಸಿ, ನೇರವಾಗಿ ಅವರ ಸ್ವರೂಪ ಸ್ವಭಾವಗಳನ್ನು ಅರಿತು ಪ್ರಚಾರ ಮಾಡಲು ನಿಶ್ಚಯಿಸಿದವು.

ಮೇ ೫ನೇ ತಾ| ಇಂಥ ಸುಮಾರು ೩೦ ಪತ್ರಿಕೆಗಳು ತಮ್ಮ ಪ್ರತಿನಿಧಿಗಳನ್ನು ಧರ್ಮಕ್ಷೇತ್ರಕ್ಕೆ ಕಳುಹಿಸಿದವು. ಪ್ರಥಮತಃ ಅವರು ಸ್ವಾಮಿಯನ್ನು 'ಪವಾಡ'ಗಳನ್ನು ಕುರಿತು ಕೇಳಿದರು; ಅದು ಸಹಜ! "ನಾನು ಸೃಷ್ಟಿಸಿ ನನ್ನವರಿಗೆ ಕೊಡುವ ವಸ್ತುಗಳು ದೈವೀಶಕ್ತಿಯ ನಿದರ್ಶನಗಳು; ಪ್ರದರ್ಶನಗಳಲ್ಲ. ಅವರ ಮೇಲಿನ ಪ್ರೇಮದಿಂದ ನಾನು ಅವರಿಗೆ ಅದನ್ನು ಕೊಡುತ್ತಿದ್ದೇನೆ. ಕೊಡುವ ಸಂಕಲ್ಪ ಬಂದ ಕ್ಷಣದಲ್ಲೆ ಅವು ಸಿದ್ಧ" - ಎಂದು ಸ್ವಾಮಿ ತಮ್ಮ ಪವಾಡಗಳನ್ನು ವಿವರಿಸಿದರು. "ನಾನು ಸಂಕಲ್ಪ ಮಾತ್ರದಿಂದ ಭೂಮಿಯನ್ನು ಆಕಾಶ ಮಾಡಬಲ್ಲೆ; ಆಕಾಶವನ್ನು ಭೂಮಿ ಮಾಡಬಲ್ಲೆ. ಆದರೆ ಅದರಿಂದ ಮಾತ್ರ ನೀವು ನನ್ನ ಸ್ವರೂಪವನ್ನಳೆಯಬಾರದು! ಪ್ರೇಮ, ಕರುಣೆ, ಜನರಲ್ಲಿ ತುಂಬಿ ತುಳುಕುತ್ತಿರುವ ಮದ ಮತ್ಸರಗಳನ್ನು ಲೆಕ್ಕಿಸದೆ ಅವರನ್ನು ಬಳಿಗೆ ಕರೆದು, ಉಪಚರಿಸಿ, ಉಪದೇಶಿಸುವ ಸಹನೆ, ಸೌಹಾರ್ದ ಮನೋಭಾವ - ಇವುಗಳು ನನ್ನ ಪ್ರತ್ಯೇಕತೆ' - ಎಂದರು.

ಪರೀಕ್ಷಿಸಲು ಬಂದವರು ತಮ್ಮ ತಮ್ಮ ಪರೀಕ್ಷೆಗಾಗಿ ಕುಳಿತುಕೊಳ್ಳಲೊಪ್ಪಿದರು! ಸ್ವಾಮಿ, ಅವರಿಗೆ ವೃತ್ತಪತ್ರಿಕೆಗಳ ಕರ್ತವ್ಯವನ್ನು ಚೆನ್ನಾಗಿ ವಿಶದ ಮಾಡಿದರು. "ಭಾರತೀಯ ಸಂಸ್ಕೃತಿಯ ವಿಶಿಷ್ಟತೆ, ಅದರ ಏಕರೂಪತೆ, ಭಾರತೀಯರ ಜೀವನ ಧ್ಯೇಯಗಳು, ರೀತಿ ನೀತಿಗಳು - ಇವುಗಳ ಶ್ರೇಷ್ಠತೆಗಳನ್ನು ಒತ್ತಿ ಹೇಳಬೇಕು. ಭೇದಗಳನ್ನೂ ಕೊರತೆಗಳನ್ನೂ ಎತ್ತಿ ಆಡಬೇಡಿ. ಯಾರನ್ನೂ ಹೊಗಳಬೇಡಿ; ಯಾರನ್ನೂ ತೆಗಳಬೇಡಿ. ಯಾರೊಬ್ಬರ ಮೇಲೂ ಜನರನ್ನು ಉದ್ರೇಕಗೊಳಿಸಬೇಡಿ. ಯಾರೊಬ್ಬರನ್ನೂ ಶಿಖರವೇರಿಸಬೇಡಿ. ಆದರೆ ಜನಸೇವೆ ಮಾಡುವವರಿಗೂ ತ್ಯಾಗ ಮಾಡುವವರಿಗೂ ನಿಮ್ಮ ಪತ್ರಿಕೆಗಳ ಮೂಲಕ ಕೃತಜ್ಞತೆಯನ್ನರ್ಪಿಸಿ" - ಎಂದರು.

೨೪ನೆ ತಾ| ಸಾಯಿರಾಷ್ಟ್ರವಾಗುತ್ತಿರುವ ಸೌರಾಷ್ಟ್ರದ ಕಡೆ ಸ್ವಾಮಿ ಕಾರಲ್ಲಿ ಪ್ರಯಾಣ ಬೆಳೆಸಿದರು. ಆ ರಾಜ್ಯಾದ್ಯಂತ ನೂರಾರು ಸತ್ಯಸಾಯಿ ಭಜನ ಮಂಡಲಿಗಳೂ, ವ್ಯಾಸಂಗ ಗೋಷ್ಠಿಗಳೂ, ಸೇವಾ ಸಮಿತಿಗಳೂ, ಸಾಯಿಸಂದೇಶವನ್ನು ಸಾರಿ, ಅದನ್ನು ಭಗವದ್ ಭಕ್ತಿಯ ನೆಲೆವೀಡಾಗಿ ಮಾರ್ಪಡಿಸಿದುವು. ಬರೋಡಾ ನಗರಕ್ಕೆ ಹೋಗುವ ದಾರಿಯಲ್ಲಿ ಸ್ವಾಮಿ ನವಸಾರಿ

ಹಾಗೂ ಸೂರತ್ ಪಟ್ಟಣಗಳಿಗೆ ಭೇಟಿ ಇತ್ತರು. ಬರೋಡಾದಲ್ಲಿ ನಡಿಯಾದ್ ಮುಂತಾದ ಹತ್ತಾರು ಊರುಗಳಿಂದ ಬಂದ ಜನ ಅವರ ಬಿಡಾರದ ಮುಂದಿನ ಮೈದಾನದಲ್ಲಿ ಕಿಕ್ಕಿರಿದರು. ಅವರಿಗೆಲ್ಲ ದರ್ಶನ ಭಾಗ್ಯವನ್ನೊದಗಿಸಿ, ಸ್ವಾಮಿ ಬೊಂಬಾಯಿಗೆ ಹಿಂದಿರುಗಿದರು. ಅಲ್ಲಿಂದ ಪೂನಾ ನಗರಕ್ಕೆ ಹೊರಟರು.

ಅಲ್ಲಿ ಹಲವಾರು ವರ್ಷಗಳಿಂದ ಭಾಷಾ ಸೇವೆ ಸಲ್ಲಿಸುತ್ತಿರುವ "ಆಂಧ್ರ ಸಂಘ"ಕ್ಕೆ ಭೇಟಿ ಇತ್ತು ನೆರೆದಿದ್ದ ಜನ ಸಮೂಹಕ್ಕೆ ತಮ್ಮ ದಿವ್ಯೋಪನ್ಯಾಸದಿಂದಲೂ, ನಾಮ ಸಂಕೀರ್ತನದಿಂದಲೂ ಆನಂದವನ್ನೊದಗಿಸಿದರು. ಅಂದರೆ, ತಾವು ಆಂಧ್ರರು, ತಮ್ಮದು ಆಂಧ್ರಪ್ರದೇಶ ಎಂಬ ಮಮತೆಯಿಂದಲ್ಲ. ಏಕೆಂದರೆ, ಅವರನ್ನು ಜಗತ್ತಿನೊಳಗಣ ಜನವೆಲ್ಲ. ತಮ್ಮವರೆಂದೇ ಭಾವಿಸುತ್ತಾರೆ. ದೇಶ ಕಾಲಗಳಿಗತೀತರಾದವರು ಬಾಬಾ. "ಮಾನವ ಕುಲದ ರೋಗರುಜಿನಗಳಿಗೆ ಋಷಿಗಳು ತಮ್ಮ ತಪಸ್ಸಿಂದ ಕಂಡು ಹಿಡಿದು ಪ್ರಚಾರ ಮಾಡಿರುವ ಸನಾತನ ಪದ್ಧತಿಯೇ ಪರಿಹಾರ" - ಎಂದು ಅವರು ಒತ್ತಿ ಹೇಳಿದರು.

ಪೂನಾದಿಂದ ಹೈದರಾಬಾದಿಗೆ ಮಾಡಿದ ಕಾರು ಪ್ರಯಾಣದ ಮಧ್ಯೆ, ಸ್ವಾಮಿ ಸೊಲ್ಲಾಪುರದಲ್ಲಿ ಕೊಂಚ ಹೊತ್ತು ನಿಂತರು. ಅಲ್ಲಿ ನೆರೆದಿದ್ದ ಜನ ಸಮೂಹವನ್ನುದ್ದೇಶಿಸಿ ಭಾಷಣ ಮಾಡಿದರು. "ಆತ್ಮವಿಶ್ವಾಸವನ್ನೂ ಆತ್ಮ ಬಲವನ್ನೂ ಅಭಿವೃದ್ಧಿ ಮಾಡಿಕೊಳ್ಳಿ" ಜೀವಾಮ ಶರದಶ್ಶತಂ; ಮೋದಾಮ ಶರದಶ್ಶತಂ. ನೂರು ವರ್ಷ ಬದುಕಿ ಬಾಳುತ್ತೇವೆ; ನೂರು ವರ್ಷ ಮುದವಾಗಿ ಬಾಳಿ, ಇತರರಿಗೂ ಮುದವನ್ನು ಕೊಡುತ್ತೇವೆ ಎಂದು ಸಂಕಲ್ಪ ಮಾಡಿ, ಅದಕ್ಕೆ ಬೇಕಾದ ಸಾಧನೆಯಲ್ಲಿ ತೊಡಗಿರಿ ಎಂದರು. ಹೈದರಾಬಾದಿನಲ್ಲೂ ಅವರ ಭಾಷಣ ಸಂಶಯಗ್ರಸ್ತರಿಗೂ, ಅಸಂತೃಪ್ತಿಯಿಂದ ಅಬಲರಾದವರಿಗೂ, ಜೀವನದಲ್ಲೇ ಜುಗುಪ್ಸೆಗೊಂಡವರಿಗೂ ಉತ್ತಮ ಟಾನಿಕ್ಕಾಗಿ ಪರಿಣಮಿಸಿತು. "ನಗುನಗುತ್ತಾ ನಲಿದಾಡಿ; ನಿರಾಶರಾಗಬೇಡಿ. ಸತ್ಸಂಗವನ್ನು ಹುಡುಕಿ ಹರ್ಷಿಸಿ; ನೇರವಾಗಿ ನಡೆಯಿರಿ, ಸಂದು ಗೊಂದುಗಳನ್ನು ವಿಸರ್ಜಿಸಿ. ಹೊಲಸನ್ನು ಓದಬೇಡಿ; ಹುಳುಕನ್ನು ಬೆಳೆಸಬೇಡಿ. ವಿಚಾರವನ್ನು ವಿಕಾರಗೊಳಿಸುವ, ಮೆದುಳನ್ನು ಚಂಚಲಗೊಳಿಸುವ ಚಲನಚಿತ್ರಗಳನ್ನು ನೋಡಬೇಡಿ. ಇಂದ್ರಿಯಗಳ ಹಿಂದೆ ಓಡಬೇಡಿ" - ಎಂದು ಬೋಧಿಸಿದರು. ಜೂನ್ ೧೧ನೇ ತಾ| ಸ್ವಾಮಿ - ಪ್ರಶಾಂತಿ ನಿಲಯವನ್ನು ಸೇರಿದರು.

ಬೊಂಬಾಯಿ ಸಮ್ಮೇಳನದಿಂದ ಅಮೇರಿಕಾ ಖಂಡಕ್ಕೆ ಹಿಂತಿರುಗಿದ ನಂತರ, ಚಾರ್ಲ್ಸ್‌ಪೆನ್ ಎಂಬವರು ಬರೆದ ಒಂದು ಪತ್ರದಿಂದ ಕೆಲವು ವಾಕ್ಯಗಳನ್ನುದ್ಧರಿಸಿ ಈ ಅಧ್ಯಾಯವನ್ನು ಮುಗಿಸಲಿಚ್ಛಿಸುತ್ತೇನೆ. ಪೆನ್ ಅವರಿಗೆ ಬಾಬಾರವರು ಆಗಾಗ ಅವರ ಮನೆಯಲ್ಲೇ ಪ್ರತ್ಯಕ್ಷ ದರ್ಶನವಿತ್ತು, ಅವರೊಂದಿಗೆ ಮಾತಾಡಿ, ಸದುಪದೇಶ ಕೊಡುತ್ತಿರುತ್ತಾರೆ ಎಂಬುದು ವಾಚಕರಿಗೆ ನೆನಪಿರಬಹುದು.

"ಬಾಬ ಅವರು ಮೊನ್ನೆ ನನ್ನೆದುರು ಬಂದು, 'ಚಾರ್ಲ್ಸ್! ಮೋಕ್ಷವನ್ನು ಬಯಸು ಅದಕ್ಕಾಗಿ ಅನೇಕ ರೀತಿ ಪ್ರಯತ್ನಪಡುತ್ತಿರುವ ಸಾವಿರಾರು ಜನರನ್ನು ನೀನು ಬೊಂಬಾಯಿ ಬಂದಿದ್ದಾಗ ಕಂಡೆ, ಅಲ್ಲವೆ? ಆದರೆ ನಿನಗೆ ಒಂದು ವಿಷಯ ತಿಳಿಸುತ್ತೇನೆ. ಅದಮಹಾ ಸಮೂಹ, ಅಪಾರ ಸಮುದ್ರದ ಒಂದು ಬಿಂದು ಮಾತ್ರ! ಮನುಷ್ಯೋಪಾಧಿಯನ್ನು ತೊರೆದು ತತ್ತರಿಸುತ್ತಿರುವ ಅಸಂಖ್ಯಾತ ಜೀವಿಗಳು ನನ್ನನ್ನು ಸೇರಲು ಬಯಸುತ್ತಿವೆ, ಬಲ್ಲೆಯಾ?

ಅವುಗಳಿಗೂ ನಾನು ಬೆಳಕು ನೀಡಿ, ಬಳಿಗೆ ಕರೆದು, ಕರುಣೆ ಇತ್ತು, ಬಿಡುಗಡೆಯ ದಾರಿಯಲ್ಲಿ ಅವುಗಳನ್ನು ನಡೆಸುತ್ತಿದ್ದೇನೆ. ಪ್ರತ್ಯಕ್ಷ ನನ್ನನ್ನು ಸಮೀಪಿಸಿ ಬರುವವರು 'ನಿಜತತ್ತ್ವ'ವನ್ನು ಅರಿಯಲು ಕೊಂಚ ಅರ್ಹತೆಯನ್ನು ಪಡೆದಿರುತ್ತಾರೆ. ಅವರು ಬೇಡಿಕೆಗಳು ಈಡೇರುತ್ತವೆ. ನನ್ನ ದರ್ಶನವನ್ನೂ ಅವರಿಗನುಗ್ರಹಿಸುತ್ತೇನೆ.

ಆದರೆ ಚಾರ್ಲ್ಸ್! ಪ್ರತ್ಯಕ್ಷ ನನ್ನ ದರ್ಶನ ಪಡೆಯಲು ಸಮರ್ಥರಾದವರು ಬಹುಮಂದಿ ಆದರೂ, ಅಂಥವರೂ ನನ್ನನ್ನು ಒಂದು ಫೋಟೋದ ಮೂಲಕ, ಒಂದು ಪುಸ್ತಕದ ಮೂಲಕ, ಒಬ್ಬ ಮಿತ್ರನ ಮೂಲಕ ಅರಿತುಕೊಳ್ಳುತ್ತಾರೆ. ಅವರ ಹೃದಯದಲ್ಲಿ ಆತುರತೆ ಅಂಕುರಿಸಿ ವಿರಹ ಬೆಳೆಯುತ್ತದೆ. ಆಗ ನಾನು ಆಂತರಿಕ ಅನುಭೂತಿಗಳಿಂದ ಅವರಿಗೆ 'ದರ್ಶನ' ಕೊಡುತ್ತೇನೆ. ಅಂಥವರೆಂದರೆ ನನಗೆ ತುಂಬಾ ಇಷ್ಟ! ಏಕೆಂದರೆ ಅವರು ದೇಹ ಬುದ್ಧಿ ತೊರೆದು, ಆತ್ಮಾ ನಂದದಲ್ಲಿ ಸುಖಶಾಂತಿಗಳೊಂದಿಗಿರುತ್ತಾರೆ. 'ಬಹುರೂಪಿ', 'ಬಹುನಾಮಿ' ನಾನು, ಎಂದು ನನ್ನನ್ನು ಧ್ಯಾನಿಸಿದವರಿಗೆ ಶಾಂತಿ ಕರತಲಾಮಲಕ".

# ಆಫ್ರಿಕಾದಲ್ಲಿ ಅರುಣೋದಯ

"ಸನಾತನ ಧರ್ಮವನ್ನು, ವೇದ ವಿಹಿತ ಧರ್ಮವನ್ನು ಪ್ರಪಂಚದಲ್ಲೆಲ್ಲ ಇಷ್ಟರಲ್ಲೇ ವ್ಯಾಪಿಸುವಂತೆ ಮಾಡುವುದೇ ಸಾಯಿಸಂಕಲ್ಪ" - ಎಂದು, ಸ್ವಾಮಿ ಪ್ರಪಂಚ ಸಮ್ಮೇಳನದಲ್ಲಿ ಘೋಷಿಸಿದರು. ಇದಾದ ಎರಡು ತಿಂಗಳೊಳಗೆ ಜೂನ್ ತಿಂಗಳ ಕಡೆಯ ದಿನ, ಸ್ವಾಮಿ ಬೊಂಬಾಯಿಂದ ಬೋಯಿಂಗ್ ವಿಮಾನ ಹತ್ತಿ, ಆಫ್ರಿಕಾ ಖಂಡಕ್ಕೆ, ಆ ಸನಾತನ ಧರ್ಮ ಪ್ರಬೋಧೆಗಾಗಿ ಹೊರಟರು.

ಮುನ್ಸೂಚನೆಕೊಟ್ಟು, ಪರಿವಾರದವರೊಂದಿಗೆ, ಭಾರತದ ಗಡಿಯನ್ನು ದಾಟಿ, ಪರದೇಶಗಳಿಗೆ ಸ್ವಾಮಿ ಇದೇ ಪ್ರಥಮ ಬಾರಿ ಪ್ರತ್ಯಕ್ಷ ಪ್ರಯಾಣ ಬೆಳೆಸಿದ್ದು. ಅನೇಕ ಶತಮಾನಗಳ ಕಾಲ, ಪರರಾಷ್ಟ್ರಗಳಿಂದ ತುಳಿದು ತುಂಡರಿಸಲ್ಪಟ್ಟು ಅಸ್ತವ್ಯಸ್ತವಾಗಿ ಬಿದ್ದಿದ್ದ ಆ ಖಂಡದ ರಾಷ್ಟ್ರಗಳು ಆಗ ತಾನ ಸ್ವಾತಂತ್ರ್ಯ ಸೂರ್ಯೋದಯ ಅರುಣ ಕಿರಣಗಳಲ್ಲಿ ಅರೆ ಬೆಳಕು ಕಾಣುತ್ತಿದ್ದವು. ಅಂಥ ಜನಾಂಗಗಳಿಗೆ ಎದೆಗಾರಿಕೆಯನ್ನೂ, ತಿಳುವಳಿಕೆಯನ್ನೂ ನೀಡುವುದಕ್ಕಾಗಿಯೇ ಸಾಯಿ ಅವತಾರ. ಅವರಿಗೆ ಅನ್ಯೋನ್ಯತೆಯನ್ನು ಕಲಿಸಿ, ಸಮನ್ವಯದ ಸಮರಸದ ಪಾಠ ಕಲಿಸುವುದು ಅವರು ಕೈಕೊಂಡಿರುವ ಕಾರ್ಯ. ಭಯ ವಿಫಲತೆಗಳ ಬಿಸುಸುಯ್ಲು ಕೇಳಿದರೆ, ಉತ್ತಮ ಆದರ್ಶಗಳ ಕಡೆ ನಡೆವ ಜನ ಎಡವಿದರೆ, ಸ್ವಾಮಿ ಅಲ್ಲಿಗೆ ಹೋಗದಿರುವುದಿಲ್ಲ.

ಜೂನ್ ೨೯ನೆ ತಾ| ಬೊಂಬಾಯಿ ಮಹಾನಗರದ ಜನರು ಶ್ರೀಯವರಿಗೆ ಒಂದು ಬೀಳ್ಕೊಡುವ ಸಮಾರಂಭವನ್ನೇರ್ಪಡಿಸಿದರು. ವಿಮಾನ ನಿಲ್ದಾಣದಲ್ಲಂತೂ ಜನಸಂದಣಿ ಕಿಕ್ಕಿರಿದು ಸೇರಿತು. ಕಟ್ಟಡದ ಮಹಡಿಯ ಮೇಲೆ ಎಂದೂ ಇಲ್ಲದ ಸಮೂಹ ನಿಂತು ಜೈಕಾರ ಮಾಡಿತು. ವಿಮಾನದ ಸುತ್ತ, ಎಲ್ಲ ಬಗೆಯ ವಿಧಿ ನಿಷೇಧಗಳನ್ನೂ ಉಲ್ಲಂಘಿಸಿ, ಸಾವಿರಾರು ಜನ ಸ್ತ್ರೀ ಪುರುಷರು ಅತ್ತಿತ್ತ ಪರದಾಡಿದರು; ಸ್ವಾಮಿಯ ದರ್ಶನಕ್ಕಾಗಿ, ಅವರ ದೃಷ್ಟಿ ತಮ್ಮ ಮೇಲೆ ಬೀಳುವುದಕ್ಕಾಗಿ, ನೂಕುತ್ತ ಅವರ ಬರವನ್ನೇ ಎದುರು ನೋಡುತ್ತ ಪರವಶರಾದರು.

ಬೋಯಿಂಗ್ ವಿಮಾನ ನೆಲದಿಂದೆದ್ದು, ೭ ಮೈಲಿ ಎತ್ತರದಲ್ಲಿ ಘಂಟೆಗೆ ೫೫೦ ಮೈಲಿ ವೇಗದಲ್ಲಿ ಹಾರಿತು. ಬಾಬಾ ಅವರಿಗೆ, ಎಲ್ಲೂ ಯಾವಾಗಲೂ ಭಕ್ತಾನುಗ್ರಹ, ಭಕ್ತಿ ಪ್ರಚೋದನೆ ಇವೆರಡೇ ಕೆಲಸ. ಆ ಅನುಗ್ರಹ ಸಂಪಾದನೆಯ ಆಸೆಯಿಂದಲೇ ಕೆಲವರು ಅದೇ ವಿಮಾನದಲ್ಲಿ ಅವರೊಂದಿಗೆ ಪ್ರಯಾಣ ಮಾಡಲು ನಿಶ್ಚಯಿಸಿ ಬಂದಿದ್ದರು. ಅವರೆಲ್ಲರಿಗೂ ಬಾಬಾ ತಮ್ಮ ಕೃಪಾಪೂರಿತ ಕುಶಲ ಪ್ರಶ್ನೆ, ಉಪದೇಶ. ವಿಭೂತಿ ಪ್ರದಾನ ಇವುಗಳಿಂದ ಅಮಿತಾನಂದವಿತ್ತರು. ಅವರು ತೋರಿಸದ ತಸ್ವೀರುಗಳಲ್ಲಿ ಹಸ್ತಾಕ್ಷರ ಬರೆದರು; ಪ್ರಶ್ನೆಗಳಿಗೆ

ಉತ್ತರ ದಯಪಾಲಿಸಿದರು; ಆಶ್ವಾಸನವಿತ್ತರು. ಪ್ರಯಾಣಿಕರಿಗೆ ಮಾತ್ರವೇ ಅಲ್ಲ. ವಿಮಾನ ಸಂಚಾಲಕರು, ಸತ್ಕಾರ ಸಹೋದರಿಯರು, ನೌಕರರು ಎಲ್ಲರಿಗೂ ಸಂಭಾಷಣೆಯ ಭಾಗ್ಯವನ್ನೊದಗಿಸಿದರು; ಆಂತರಿಕ ಹಸಿವನ್ನು ನೀಗಿಸಿದರು.

ನಮ್ಮ ಜೊತೆಯಲ್ಲಿ ಬಂದಿದ್ದ ಬಾಬ್ ರೆಯ್ಮರ್ ಎಂಬ ಅಮೇರಿಕಾ ದೇಶದವರು ಸ್ವಾಮಿಯ ಪರಿವಾರಕ್ಕೆ ಸೇರಿ ವಿಮಾನದಲ್ಲಿದ್ದರು. ಸ್ವಾಮಿ ತಮ್ಮ ಮುಂದಿನ ಸೀಟಿನಲ್ಲಿ ಯಾರೂ ಇಲ್ಲದಿದ್ದ ಕಾರಣ, ಆ ಕುರ್ಚಿಯನ್ನು ಕಾಲಿಂದ ತಳ್ಳಿ, ಕಾಲುಗಳನ್ನು ಹಾಗೆಯೇ ನೀಡಿ ಕುಳಿತರು, ರೆಯ್ಮರ್ ತಮ್ಮ ಕ್ಯಾಮರಾವನ್ನು ಕ್ಲಿಕ್ ಮಾಡಿ, ಲೋಕ ಪೂಜ್ಯರಾದ ಆ ಪಾದಗಳೆರಡನ್ನೂ ಫೋಟೊ ತೆಗೆದರು. ಆಗ ಅದೇ ಕುರ್ಚಿಯ ಹಿಂಭಾಗದ ಜೋಬಿನಲ್ಲಿ ಇಟ್ಟಿದ್ದ ಒಂದು ಕಾರ್ಡನ್ನು ಬಾಬಾ ಮೇಲಕ್ಕೆಳೆದು, "ನೀನೊಬ್ಬ ತುಂಟ; ನಿಮಿಷ ನಿಮಿಷವೂ ಚೇಷ್ಟೆ" - ಎಂದು ಬರೆದು, "ಬಾಬ್, ಬೋಯಿಂಗ್ ೭೦೭" - ಎಂದು ವಿಳಾಸ ಬರೆದು, ನಮ್ಮ ಕೈಯಿಂದ ಅವರಿಗೆ ಕೊಡಿಸಿದರು! ಬಾಬ್ ಕೂಡ ಆನಂದಾಶ್ರುಗಳಿಂದ ಅದನ್ನು ಸ್ವೀಕರಿಸಿ, "ಕ್ಷಮಿಸಿ ಸ್ವಾಮಿ, ಅರಿಯದ ಕೂಸು! ಆನಂದದುನ್ಮೇಷ"! - ಎಂದು ಮತ್ತೊಂದು ಕಾರ್ಡಿನಲ್ಲಿ ಬರೆದು, "ನೀಲಿ ಗಗನ ನೀಲ ಜಲಧಿ, ಆಶಾಪೂರಣ! ನಿಮ್ಮೊಡನೆ ನಮಗೂ ಆಕಾಶ ಗಮನ" - ಎಂದು ಒಂದು ಪದ್ಯವನ್ನೂ ಸೇರಿಸಿ, ನಮ್ಮ ಕೈಯಿಂದ ಸ್ವಾಮಿಯವರಿಗೆ ಮುಟ್ಟಿಸಿದರು.

ಗಗನ ಉದ್ದಕ್ಕೂ ನೀಲಿಯಾಗಿರಲಿಲ್ಲ. ಆಫ್ರಿಕಾ ಸೇರುವ ತನಕ ಅದು ಆಗಾಗ ಕಪ್ಪಾಗಿ, ಭಾರತದ ಕಡೆಗೆ ತುಂಬು ನೀರಿನ ಮುಂಗಾರು ಮೋಡಗಳು ಸಾಲಾಗಿ ಬರುತ್ತಲೇ ಇದ್ದುವು. ಕಡಲಲ್ಲಿ ಆ ನೆಳಲು ಬಿದ್ದು, ಅದರ ತಳವೂ ಕಪ್ಪಾಗಿಯೇ ಕಂಡಿತು. ಆಗಾಗ ಆರಕ್ಷಣ ಬೆಳ್ಳಿಯ ಮಿಂಚೊಂದು ನೀರಿನ ಮೇಲೆ ಬಳುಕುವುದು; ಅಲೆಯ ಅಂಚಿನ ಮೇಲಿನ ನೊರೆಯ ಬಿಳುಪಿರಬಹುದೆಂದು ನಾವು ಊಹಿಸಿದೆವು. ವಿಮಾನ ಮುಂದುವರಿದದ್ದೇ ನಮಗೆ ಗೋಚರವಾಗಲಿಲ್ಲ. ನೀರನ್ನೂ ನೆಲವನ್ನೂ ಯಾರೋ ನಮ್ಮ ಕೆಳಗಿಂದ ವೇಗವಾಗಿ ಹಿಂದು ಹಿಂದಕ್ಕೆ ಎಳೆದಂತೆ ಗೋಚರವಾಯಿತು, ಅಷ್ಟೆ!

ಅಷ್ಟರಲ್ಲಿ, ನಮ್ಮ ನೋಟಕ್ಕೆ ಹಸುರು ತುಂಡುಗಳನ್ನೂ ಕರೀ ತುಂಡುಗಳನ್ನೂ ಅಲ್ಲಲ್ಲಿ ತೇಪೆ ಹಾಕಿದ್ದ, ಬಣ್ಣದ ಬಟ್ಟೆಯಂತೆ ನೆಲ ಕಾಣಿಸಿತು. ನೇರ ಗೆರೆಗಳು! ತುದಿಯಿಂದ ತುದಿಯವರೆಗೆ ಟಾರ್ ರಸ್ತೆಗಳು. ಕೂಡಲೇ ಕುರಿ ಮಂದೆಯಂತೆ ಬಿಳಿ ಮೋಡಗಳು ನಮ್ಮ ಸುತ್ತ, ನಮ್ಮ ಕೆಳಗೆ! ಚಾಲಕ ಬರೆದು ಕಳುಹಿಸಿದ ಚೀಟಿಯೊಂದನ್ನು ನನ್ನ ಹಿಂದಿನ ಸೀಟಿನಲ್ಲಿ ಕುಳಿತಿದ್ದ ಒಬ್ಬ ನೀಗ್ರೋ ಮಹಾಶಯ ನನಗಿತ್ತ. "ನಮ್ಮ ಬಲಗಡೆಯಲ್ಲಿ, ಇನ್ನೊಂದೆರಡು ಮಿನಿಟಲ್ಲಿ, ಕೀನಿಯಾ ಪರ್ವತವನ್ನು ನೋಡಬಹುದು" - ಎಂದಿತ್ತು ಅದರಲ್ಲಿ ಕ್ಷೀರ ಸಮುದ್ರದ ನಡುವೆ ಮಂದರ ಪರ್ವತದ ಹಾಗಿನ ಒಂದು ದೃಶ್ಯ

ಅರೆ ನಿಮಿಷ ಹಾಲಿನ ಸಮುದ್ರ ನಮ್ಮ ವಿಮಾನದ ಸುತ್ತ! ಇನ್ನೊಂದು ಕ್ಷಣದಲ್ಲಿ, ನಾವು ಅದರ ಕೆಳಗೆ! ಚೌಕ ಚೌಕವಾಗಿ ತುಂಡು ಮಾಡಿ ಹೊಲಿದಿದ್ದ ಹೊಲಗಳು....... ಸೂರ್ಯಕಿರಣಗಳನ್ನು ಪ್ರತಿಫಲಿಸುವ ಜಿಂಕ್ ಷೀಟುಗಳ ಸೂರುಗಳು! ನೈರೊಬಿ ವಿಮಾನ ನಿಲ್ದಾಣ! ಕಟ್ಟಡದ ನಡುವಣದ ಗೋಪುರದಲ್ಲಿ ದೊಡ್ಡ ಗಡಿಯಾರ...... ನೆಲದ ಮೇಲೆ ಹರಿಯುವಾಗ ವಿಮಾನದ ಕಿಟಿಕಿಯಿಂದ ನೋಡಿದೆ.... ಅದರ ಪ್ರಕಾರ ಗಂಟೆ ೧೨ (ಮಧ್ಯಾಹ್ನ)ಕ್ಕೆ ಇನ್ನೂ ೪ ಮಿನಿಟ್. ನನ್ನ ಗಡಿಯಾರದ ಪ್ರಕಾರ ಆಗ ಭಾರತದಲ್ಲಿ ಗಂಟೆ ೨.೨೪.

ವಿಮಾನದ ಬಾಗಿಲಲ್ಲಿ ಬಾಬಾ ಕಾಣಿಸಿಕೊಂಡಾಗ, ಸಾವಿರ ಕಂಠಗಳು, "ನಂದ ಲಾಲಾ! ಯದು ನಂದಲಾಲಾ" - ಎಂದು ಅವರನ್ನು ಸ್ವಾಗತಿಸಿದುವು. ಪುಷ್ಪ ಮಾಲಾ ಲಂಕೃತ ಕಾರೊಂದರಲ್ಲಿ ಡಾ| ಚುನಿಲಾಲ್ ಪಟೇಲ್‌ರವರು ಬಾಬಾರವರನ್ನು ಭಕ್ತ ಸಮೂಹದವರು ಕುಳಿತಿದ್ದ ಮಂಟಪಕ್ಕೆ ಕರೆದೊಯ್ದರು. ನಾವು ಮಾತ್ರ ಇತರ ಪ್ರಯಾಣಿಕರ ಹಿಂದೆ ಸಾಲು ಹಿಡಿದು ನಮ್ಮ ಪಾಸ್‌ಪೋರ್ಟುಗಳು, ವೀಸಾಗಳು, ಇನಾಕ್ಯುಲೇಷನ್ ಸರ್ಟಿಫಿಕೇಟುಗಳು ಲಗೇಜು ಚೀಟಿಗಳು ಇವುಗಳನ್ನು ತೋರಿಸಿ, ಸರಿ ಎನ್ನಿಸಿ ಸುಲಗ್ನಾ ಸಾವಧಾನಾ ಅಂತ ಹೆಜ್ಜೆಯ ಮೇಲೆ ಹೆಜ್ಜೆ ಇರಿಸಿ ಮುಂದು ಮುಂದಕ್ಕೆ ಮಂದ ಮಂದ ಹೋಗಿ, ಮಹಾದ್ವಾರದ ಪತ್ತಿರದ ಕಾರುಗಳನ್ನು ಸಮೀಪಿಸುತ್ತಿದ್ದೆವು. ಅಷ್ಟರೊಳಗೆ ಬಾಬಾ ಅವರು, "ಕಸ್ತೂರಿ! ಕಸ್ತೂರಿ ಎಲ್ಲಿ?" - ಎಂದು ಕೇಳಿದರಂತೆ, ತಮ್ಮ ಭಾಷಣವನ್ನು ಭಾಷಾಂತರಿಸಿ ಹೇಳುವುದಕ್ಕಾಗಿ! ವಾಲಂಟೀರುಗಳು ಹತ್ತು ಕಡೆ ಓಡಿದರು, ವಿಮಾನ ನಿಲ್ದಾಣಕ್ಕೆ ಫೋನ್ ಬಂತು. ನಾನೂ ಕಾತುರನಾದೆ; ಕಿಟಿಕಿಯಿಂದ ಕಿಟಿಕಿಗೆ ಬೇಗ ಬೇಗ ಹಾರಿದೆ. ಆದರೆ ಅಷ್ಟರೊಳಗೆ, ಸಭೆಯಲ್ಲೇ ಕುಳಿತಿದ್ದ ಒಬ್ಬರು ತಮಿಳರನ್ನು ಕರೆದು, ಸ್ವಾಮಿ ಆ ಕೆಲಸ ನಿರ್ವಹಿಸಿ ಬಿಟ್ಟಿದ್ದರು. ಆ ಮಹಾಸಭೆಯನ್ನು ಕುರಿತು ಬಾಬಾ ಗೋಕಾಕರವರಿಗೆ ಬರೆದ ಕಾಗದದಲ್ಲಿ, "ಕಣ್ಣಿಗೂ ಕಿವಿಗೂ ಅದೊಂದು ಸುಮಧುರ ಸಮಾರಾಧನೆ. ಹೂವಿನ ದಳಗಳನ್ನು ದಾರಿ ಉದ್ದಕ್ಕೂ ಚೆಲ್ಲಿದರು. ದೀಪದ ಸಾಲನ್ನು ಹಿಡಿದು ಹಾಡಿದರು. ಹೃದಯಾಂತರಾಳದಿಂದ ಭಕ್ತಿ ಉಕ್ಕಿ ಬಂದು ಭಜನೆಯಾಗಿ ರೂಪುಗೊಂಡಿತು. ಜಯದೇವ ಗೌರಾಂಗ ಇವರ ಕಾಲದ ದೃಶ್ಯಗಳು ನನ್ನ ಸ್ಮರಣೆಗೆ ಬಂತು" - ಎಂದು ಬರೆದರು.

"ಆಫ್ರಿಕಾದ ಮುತ್ತು" - ಎಂದು ಪ್ರಖ್ಯಾತವಾದ ಉಗಾಂಡಾ ರಾಷ್ಟ್ರದ ರಾಜಧಾನಿ ಕಂಪಾಲಾವನ್ನು ನಾವು ಆ ದಿನವೇ ಸೇರಬೇಕಿತ್ತು. ಆದ್ದರಿಂದ ಕೂಡಲೇ ಕಾರು ಹತ್ತಿ, ೪೦೭ ಮೈಲುಗಳ ದೂರ ಪ್ರಯಾಣವನ್ನು ಮೊದಲು ಮಾಡಿದೆವು. ಅಂಕುಡೊಂಕಿಲ್ಲದ ರಸ್ತೆ; ಉದ್ದಕ್ಕೂ ಹಸಿರು ತೋಪುಗಳು; ಕಳಕಳಿಸುವ ಹೊಲಗದ್ದೆಗಳು. ಕಮನೀಯ ದೃಶ್ಯ ಪರಂಪರೆ! ಕೀನ್ಯಾ ರಾಜ್ಯದ ಬಾವುಟದಲ್ಲಿನ ಮಹಾವಾಕ್ಯ "ಹರಂಬೀ" (ಜೊತೆಗೂಡಿ ಕಾಯಕ) ಎಂದು ಅದು ಅಲ್ಲಿನ ಪ್ರಜೆಗಳನ್ನು ಮುನ್ನಡೆಸುತ್ತದೆ. ಅದರ ಸತ್ ಪರಿಣಾಮವನ್ನು ನಾವು ಕತ್ತಲೆಯ

ಪರದೆ ಬೀಳುವವರೆಗೂ, ಕಾರಿನ ಕಿಟಕಿಯಿಂದ, ನೋಡಿ ಆನಂದಿಸಿದೆವು. ಗೋಧಿಯ ಹೊಲಗಳು, ವಾಟ್ಲ್ ಮರದ ತೋಪುಗಳು! ಪುಷ್ಟಿತುಷ್ಟಿಗಳಿಂದ ತುಳುಕುವ ಮುಖಗಳು! ಕುಣಿದು ಕುಪ್ಪಳಿಸುತ್ತ, ಹಸುರು ಕೊಂಬೆಗಳನ್ನು ಹಿಡಿದು ಜೈಜೈಕಾರ ಹಾಕಿದರು. ದಾರಿ ಉದ್ದಕ್ಕೂ ಯಾವ ಪ್ರಯಾಣಿಕನೂ ಕಾರಿಗಡ್ಡ ಬರಲಿಲ್ಲ. ನಾಯಿಗಳು ಯಾವುವೂ ನಡು ರಸ್ತೆಯಲ್ಲಿ ನಿದ್ರಿಸುತ್ತಿರಲಿಲ್ಲ; ಎಮ್ಮೆಗಳೂ ಅದೃಶ್ಯ. ಸೊಗಸಾಗಿ ಬೆಳೆಸಿದ ಸಾಲು ಮರಗಳ ನಡುವೆ ಸಾರಿಸಿ ಗುಡಿಸಿಧ ರಸ್ತೆ! ರೂಯ್ ರೂಯ್ ಅಂತ ಕಾರುಗಳು ಮೈಲುಗಳನ್ನು ನುಂಗುತ್ತ ಮುಂದೋಡಿದವು. ಇಲ್ಲಿ ಎಲ್ಲ ತಿಂಗಳುಗಳಲ್ಲೂ ಮಳೆ ಬೀಳುವುದರಿಂದ, ರಸ್ತೆ ಕೆಳಗಿನ ಮೋರಿಗಳೆಲ್ಲ ಕಿಲಕಿಲ ನಗುತ್ತಿದ್ದವು.

ಮೈಸೂರಲ್ಲಿ ಬಿ.ಎ., ಎಂ.ಎ. ತರಗತಿಗಳಿಗೆ "ಮಾನವಶಾಸ್ತ್ರ" ಬೋಧಿಸುತ್ತಿದ್ದಾಗ, "ರಿಫ್ಟ್ ವ್ಯಾಲಿ" ಎಂಬ ಆಫ್ರಿಕಾ ಖಂಡದಲ್ಲಿನ, ೧೫೦೦ ಮೈಲಿ ಉದ್ದದ, ೨೦೦ ಮೈಲಿ ಅಗಲದ, ೨೦೦೦ ಅಡಿ ಆಳದ ಭಾರೀ ಅಗಳ ಪ್ರಾಂತವನ್ನು ಕುರಿತೂ, ಅಲ್ಲಿ ದೊರಕುತ್ತಿರುವ ಬಹು ಪ್ರಾಚೀನ ಮಾನವರ ಅಸ್ಥಿಪಂಜರಗಳ ಅವಶೇಷಗಳನ್ನು ಕುರಿತೂ, ನಾನು ಆವೇಶ ಪೂರ್ಣವಾಗಿ ವಿವರಿಸಿದ್ದುಂಟು. ನಮ್ಮ ಕಾರುಗಳು ಆ ಪ್ರದೇಶವನ್ನು ದಾಟಿದಾಗ, ಚಿತ್ರಗಳಿಂದಲೇ ತೃಪ್ತರಾದ ಆ ನನ್ನ ವಿದ್ಯಾರ್ಥಿಗಳನ್ನು ಸ್ಮರಿಸಿ ಮರುಗಿದೆ. ಅಗ್ನಿ ಪರ್ವತ ಭೂಗರ್ಭದಿಂದ ಹೊರತೆಗೆದು ಉಗುಳಿದ, ಸೋಡಾ ಉಪ್ಪು ತುಂಬಿದ "ನೌರು" ತಟಾಕದ ಅಂಚಿನಿಂದಲೇ ಕಾರುಗಳು ಮುಂದುವರಿದುವು. ನೌರು ಎಂಬ ಒಂದು ನಗರ ಆ ಉಪ್ಪು ವ್ಯಾಪಾರದಿಂದಲೇ ಸಂಪತ್ಸಮೃದ್ಧಿ ಹೊಂದಿತ್ತು. ಅಲ್ಲಿಯ ಜನರು ಬಾಬಾ ಬರವಿಗಾಗಿ ಕಾದಿದ್ದರು. ಅವರ ಮಧ್ಯೆ ನಿಧಾನವಾಗಿ ನಡೆದು ಬಾಬಾ ಎಲ್ಲರಿಗೂ ಸಮೀಪ ದರ್ಶನವಿತ್ತರು. ಹಲ ಕೆಲವು ಆರ್ತರಿಗೆ ದಿವ್ಯ ವಿಭೂತಿಯನ್ನು ಸೃಷ್ಟಿಸಿ ಕೊಟ್ಟರು.

ಉಗಾಂಡಾ ರಾಷ್ಟ್ರದ ಗಡಿ ಸೇರುತ್ತಲೂ, ಪ್ರಭುತ್ವದವರ ಸ್ವಾಗತದ ಗುರುತಾಗಿ, ಬಾಬಾ ಕಾರಿನ ಮುಂದೆ ಹಸುರು ದೀಪಾಲಂಕೃತವಾದ ಸರ್ಕಾರೀ ಕಾರೊಂದು ದಾರಿ ತೋರಿಸುತ್ತ ಹೊರಟಿತು. ಜಿಂಜಾ ಎಂಬ ನಗರದಾಚೆ, ನಾವು ಬೃಹದಾಕಾರದ ಒಂದು ಜಲಪಾತವನ್ನೂ, ವಿದ್ಯುದುತ್ಪತ್ತಿ ಕೇಂದ್ರವನ್ನು ನೋಡಿ ಬೆರಗಾದೆವು. ವಿಕ್ಟೋರಿಯಾ ಸರೋವರದಿಂದ ಹೊರ ಬೀಳುವ ಮಹಾನದಿ ನೈಲಿನ ಉದ್ಭವ ಸ್ಥಾನವೇ ಅದು. ಅಲ್ಲಿಂದ ೩೫೦೦ ಮೈಲಿ ದೂರ ಪ್ರಯಾಣ ಮಾಡಿ ಆ ನೈಲ್ ನದಿ, ಭೂಮಧ್ಯ ಸಾಗರವನ್ನು ಸೇರಿ ಸಾರ್ಥಕತೆಯನ್ನು ಪಡೆಯುತ್ತದೆ.

ರಾತ್ರಿ ೧-೩೦ಕ್ಕೆ ನಾವು ಕಂಪಾಲಾ ನಗರವನ್ನು ಪ್ರವೇಶಿಸಿದೆವು. ಊರೆಲ್ಲ ಗಾಢ ನಿದ್ರೆಯಲ್ಲಿ ಗೊರಕೆ ಹೊಡೆಯುತ್ತಿತ್ತು. ಅಂತಿರೇನು?" B ಎಂದರೆ BEING (ಸತ್), A ಎಂದರೆ (AWARENESS) (ಚಿತ್), B ಎಂದರೆ BLISS (ಆನಂದ) A, ಎಂದರೆ ATMA (ಆತ್ಮ). ನಾನು ಸಚ್ಚಿದಾನಂದಾತ್ಮ ಎಂದು ಘೋಷಿಸಿ ನಿರೂಪಿಸುವ ಬಾಬಾ ಊರಿಗೆ

ಬಂದರೆ, ಯಾವ ಪ್ರಾಣಿ ತಾನೆ ತಾಮಸದಲ್ಲಿ ತೊಳಲುತ್ತದೆ? ಬೀದಿ ಉದ್ದಕ್ಕೂ ಜನಸ್ತೋಮ, ತಳಿರು ತೋರಣಗಳು, ರಸ್ತೆ ಮೇಲೆ ಸ್ವಾಗತಾಕ್ಷರಗಳು, ರಸ್ತೆಗೆ ಅಡ್ಡವಾಗಿ, ಅಲಂಕೃತ ಕಮಾನುಗಳು! ನಮ್ಮಲ್ಲೊಬ್ಬರು ೧೦೮ ಕಮಾನುಗಳನ್ನೆಣಿಸಿದರು!

ಡಾ| ಪಟೇಲರ ಮನೆ ಮುಂದಿನ ಚಪ್ಪರದಲ್ಲಿ, ೩೦೦೦ ಜನರ ನಾಮ ಸಂಕೀರ್ತನೆ ಉತ್ಸಾಹದಿಂದ ನಡೆಯುತ್ತಿತ್ತು. ಬಾಬಾ ತಮಗೆ ದರ್ಶನ ಕೊಡುತ್ತಾರೆ ಎಂಬ ನಂಬಿಕೆ ಅವರಿಗೆ. ಸ್ವಾಮಿ ಅವರನ್ನು ನಿರಾಶೆಗೊಳಿಸಲಿಲ್ಲ! ಕಾರಿಂದಿಳಿದು ಗುಂಪಿನ ನಡುವಣ ಸಂದುಗಳ ಮೂಲಕ ಅವರಿಗೆಲ್ಲ ಸಂತೋಷ ಸಂತೃಪ್ತಿಗಳನ್ನು ಹಂಚಿದರು.

ರಾತ್ರಿ ಪೂರಾ, ಕಂಪಾಲಾ ನಗರ ಸೂರ್ಯ ದೇವನನ್ನು ಒಲಿಸಿಕೊಳ್ಳಲು ತವಕಗೊಂಡಿತ್ತು. ತಡವೇಕಿನ್ನು? ಪೂರ್ವ ಸಮುದ್ರದಾಚೆಯಿಂದ ಪುರುಷೋತ್ತಮನು ಆಗಮಿಸಾಯಿತು. ನೀವು ಬೇಗಲುದಿಸಿ ಬನ್ನಿ, ಎಂದು ಪ್ರಾರ್ಥಿಸಿತು! ಮರುದಿನ ಪ್ರಾತಃ ಕಾಲದಲ್ಲಿ, ಅಲ್ಲಿ ನೆರೆದಿದ್ದ ೭೫೦೦ ಆಫ್ರಿಕನರು, "ಇದು ಬರಿ ಬೆಳಗಲ್ಲೋ, ಅಣ್ಣಾ! ಅದು ಒಳ ಹೊರಗೆ ಬೆಳಗಿಸುವಂಥ ಬಾಳ ಭಾಸ್ಕರ!" - ಎಂದು ತಮ್ಮ ತಮ್ಮೊಳಗೆ ಹಿಗ್ಗಿದರು.

ಬಂಗಲೆಯಿಂದ ಬಾಬಾ ಹೊರಬರುತ್ತಲೂ, ಜನರ ದೃಷ್ಟಿ ಆ ಸುಂದರ ರೂಪದಲ್ಲೇ ಕೇಂದ್ರೀಕೃತವಾಯಿತು. ವಿದ್ಯುಲ್ಲತೆಯಂತೆ ತೊಳಗುತ್ತ ಬಾಬಾ ಅವರ ನಡುವೆ ನಡೆದರು. ಕೊರಗು ಕಂಡೆಡೆ ನಿಂತು, ನೋವು ಕಂಡೆಡೆ ವಿಭೂತಿ ಸೃಷ್ಟಿಸಿ, ದುಃಖಿದೆದುರು ಕನಿಕರಿಸಿ ಸಂತೈಸಿ, ಬಾಬಾ ಎಲ್ಲರನ್ನೂ ಅನುಗ್ರಹಿಸಿದರು. ಸ್ಥಳ ಸಾಲದೆ ಸಾಲಾಗಿ ನಿಂತಿದ್ದ ನೀಗ್ರೋಗಳ ಹತ್ತಿರಕ್ಕೆ ತಾವೇಹೋಗಿ, ಬಿಸಿಲಲ್ಲಿ ಬೆವರುತ್ತಿದ್ದವರನ್ನು ನೆರಳಿಗೆ ಕರೆದು ಬಾಬಾ ತಮ್ಮ ಅಪಾರ ಕೃಪೆಯನ್ನು ಬೀರಿದರು. ಭಜನ ಗಾನವನ್ನು ಎಲ್ಲರೂ ಕೇಳಿ ಆನಂದಿಸುವಂತೆ, ಧ್ವನಿವಾಹಕ ಯಂತ್ರಗಳನ್ನು ಆಳವಡಿಸಲು ಡಾ| ಪಟೇಲರಿಗೆ ಸಲಹೆ ಇತ್ತರು. ಆ ನೀಗ್ರೋ ಭಕ್ತರಿಗಾಗಿಯೇ, ದೀನ ದಲಿತರಾಗಿಯೂ, ಭಯಗ್ರಸ್ತರಾಗಿಯೂ, ಕಷ್ಟಜೀವಿಗಳಾಗಿದ್ದ ಆಫ್ರಿಕನರಿಗಾಗಿಯೇ, ಬಾಬಾ ಸಾಗರವನ್ನು ದಾಟಿ ಬಂದಿರಬೇಕೆಂದು ನಾವು ಊಹಿಸಿದೆವು.

"ನನಗೆ ಈ ಪ್ರದೇಶ ಚಿರಪರಿಚಿತ! ನೀವು ಹೊಸಬರು. ಕಂಪಾಲಾ ನಗರದ ಬೆಡಗು ಬಿನ್ನಾಣವನ್ನು ನೋಡಿ ಬನ್ನಿ! ನನ್ನ ಕೆಲಸ ನನಗೆ! ನಾನು ಬಂದ ಕೆಲಸ" - ಎನ್ನುತ್ತ ಬಾಬಾ ನೊಂದವರಿಗೆ ಒಲವನ್ನೂ ಬೆಂದವರಿಗೆ ತಂಪನ್ನೂ, ಎದೆಗುಂದಿದವರಿಗೆ ಬಲವನ್ನೂ ಕೊಡುತ್ತಾ ಬಂಗಲೆಯಲ್ಲೇ ಉಳಿದರು. ಆದರೂ, ಅಲ್ಲಿಯ ಹಿಂದೂ ದೇಗುಲಕ್ಕೂ ಟೆಲಿವಿಷನ್ ಟವರ್ ಬೆಟ್ಟಕ್ಕೂ, ಬಾಹಾಯಿ ಮಂದಿರಕ್ಕೂ ಡಾ| ಪಟೇಲ್‌ರವರ ಒತ್ತಾಯದ ಮೇರೆಗೆ ಭೇಟಿ ಇತ್ತರು. ಟವರ್ ಬೆಟ್ಟದಿಂದ ಹಿಂದಿರುಗುತ್ತಿದ್ದಾಗ, 'ತಮ್ಮ ಕಾರಿನ ಮುಂದೆ ಮೋಟಾರ್ ಸೈಕಲ್‌ನಲ್ಲಿ ಸವಾರಿ ಮಾಡುತ್ತಿದ್ದ ಅಂಗರಕ್ಷಕ ಅಜಾನುಬಾಹು ಪೋಲೀಸ್ ಅಧಿಕಾರಿಯನ್ನು ಬಳಿಗೆ ಕರೆದು, ಏಸುಕ್ರಿಸ್ತನ ರೂಪ ಕೆತ್ತಿದ್ದ ಒಂದು ಸುವರ್ಣ

ಪದಕವನ್ನವರಿಗೆ ಸೃಷ್ಟಿಸಿ ಕೊಟ್ಟರು. ಆತ ಕ್ರೈಸ್ತಮತಾನುಯಾಯಿ ಎಂಬುದನ್ನವರು ಬಲ್ಲರು. ನಡೆದು ಬಂದ ದಾರಿಯನ್ನು ತಪ್ಪಿಸಲು ಬಂದಿಲ್ಲ ಬಾಬಾ; ಇಷ್ಟವನ್ನು ಪುಷ್ಟೀಕರಿಸಿ, ಪುಟವಿರಿಸಿ, ಪರಿಶುದ್ಧ ಮಾಡಿ, ಪುನೀತ ಮಾಡಲು ಬಂದಿದ್ದಾರೆ. ಎಲ್ಲ ಮತಗಳ ಎಲ್ಲೆಯನ್ನೂ ಅತಿಕ್ರಮಿಸಿದ್ದು ಅವರ ಕೃಪಾವಾಹಿನಿ!

ಬೆಳಿಗ್ಗೆ ಸಂಜೆ ಸಾವಿರಾರು ಜನ ಸೇರಿ ಭಜನೆ ಮಾಡುತ್ತಿದ್ದಾಗ ಬಾಬಾ, ಅವರ ಮಧ್ಯೆ ನಡೆದು, ಮೂಗರು, ಕಿವುಡರು, ಕುರುಡರು, ಕುಂಟರು, ದುಃಖಿಗಳು, ತೀರಾ ಮುದುಕರು, ಬಡವರು ಮುಂತಾದವರನ್ನು ಆರಿಸಿ, ಪ್ರತ್ಯೇಕ ಕೋಣೆಯೊಳಗೆ ಕರೆದು ಕನಿಕರಿಸಿ, ಧೈರ್ಯ ಧಾರೆಯನ್ನೆರೆದು ಕಳುಹಿಸಿದರು. ಆಂಗ್ಲದಲ್ಲೂ ಹಿಂದಿಯಲ್ಲೂ - ಏಕೆ? ನೀಗ್ರೋ ಜನ ನುಡಿ - 'ಸ್ವಾಹಿಲಿ'ಯಲ್ಲೂ ಅವರೊಂದಿಗೆ ಸರಸ ಸಂಭಾಷಣೆ ನಡೆಸಿದರು. ಆ ಕೋಣೆಯಿಂದ ಹೊರಬಂದ ಜನರ ಮನಸ್ಸಿನಲ್ಲಿ ಹೊಸ ಶಕ್ತಿ, ದೇಹದಲ್ಲಿ ಹೊಸ ಚೈತನ್ಯ, ಕಣ್ಣಲ್ಲಿ ಹೊಸ ಬೆಳಕು, ಮಾತಲ್ಲಿ ಹೊಸ ಮಾಧುರ್ಯ ಕಂಡು ಬಂತು! ಹುಟ್ಟು ಕಿವುಡನೊಬ್ಬನಿಗೆ ಆಲಾಪ - ಸಲ್ಲಾಪಗಳು, ರೋದನ ಕೂಜನಗಳು, ತೊದಲು ತುತ್ತೂರಿಗಳು ಕೇಳಿ ಬಂದುವು! ಪೋಲಿಯೋ ಪೀಡಿತ ಬಾಲಕನೊಬ್ಬ ಚಕ್ರದ ಕುರ್ಚಿಯಿಂದಿಳಿದು ನಡೆದ!

ಜುಲೈ ೩ನೆ ತಾ||ನ್ನು ನಾನೆಂದೂ ಮರೆಯುವಂತಿಲ್ಲ. ಪ್ರಥಮತಃ "ಂಗೊರೊಂ ಗೊರೊ" ಅಭಯಾರಣ್ಯಕ್ಕೆ ವಿಮಾನ ಯಾತ್ರೆ! ಕಂಪಾಲಾದಿಂದ ೩೦ ಮೈಲಿ ದೂರದಲ್ಲಿದ್ದ ಎಂಟೆಬ್ಬೆ ನಿಲ್ದಾಣಕ್ಕೆ ಕಾರು ಪ್ರಯಾಣ. ಅಲ್ಲಿಂದ ಜೋಡಿ ಎಂಜಿನ್ ಟ್ಯಾಕ್ಸಿ ವಿಮಾನದಲ್ಲಿ ಐದು ಭಕ್ತರೊಂದಿಗೆ ಬಾಬಾ ಅವರು, ಒಂಟಿ ಎಂಜಿನ್ ಟ್ಯಾಕ್ಸಿ ವಿಮಾನದಲ್ಲಿ ನಾನೂ ರಾಜಾ ರೆಡ್ಡಿಯವರೂ ಇಂದೂಲಾಲ್ ಷಾ ಅವರೂ, ಗಗನಮಾರ್ಗವನ್ನು ಹಿಡಿದೆವು. ಸ್ವತಃ ನುರಿತ ವಿಮಾನ ಚಾಲಕನಾಗಿ, ಸ್ವಂತ ವಿಮಾನದಲ್ಲೇ ಅಮೇರಿಕಾದಲ್ಲಿ ಮೋಜು ಮಾಡುತ್ತಿದ್ದ ಬಾಬ್ ರೇಮರ್ ಎಂಬ ಭಕ್ತನೂ ನಮ್ಮ ಪಾರ್ಟಿಯಲ್ಲಿದ್ದ. "ಒಂಟಿ ಎಂಜಿನ್ ವಿಮಾನ ತೀರಾ ಅಪಾಯ ಜೋಡಿಯಾದರೆ, ಒಂದು ಎಂಜಿನ್ ಹಾಳಾದರೂ, ಇನ್ನೊಂದರ ಬಲದಿಂದ ಉಳಿಯಬಹುದು" - ಎಂದು ಬಾಬ್ ನನಗೆ ಹಿಂದಿನ ರಾತ್ರಿ ಉಪದೇಶ ಮಾಡಿದ್ದ. ಬೆಳಗಾಗುತ್ತಲೂ, ನಿಲ್ದಾಣ ಸೇರುತ್ತಲೂ, ಬಾಬಾ ನನ್ನನ್ನು ಒಂಟಿ ಎಂಜಿನ್ ವಿಮಾನಕ್ಕೇ ಕಳುಹಿಸಿದರು! ಒಲ್ಲೆ ಎನಲು ಬಾಯಿ ಇರಲಿಲ್ಲ. ಬಂದದ್ದೆಲ್ಲ ಬರಲಿ, ಸಾಯಿ ದಯೆ ಇರಲಿ, ಎಂದು ದೃಢ ಮಾಡಿಕೊಂಡು, ಬಲಗಾಲು ಮುಂದಾಗಿ ವಿಮಾನ ಹತ್ತಿ, ಜಪ ಮಾಡುತ್ತ ಕುಳಿತೆ. ಬಾಬಾ ವಿಮಾನವನ್ನೇ ನಮ್ಮ "ದುಂಬಿ" ವಿಮಾನ ಅನುಸರಿಸಿತು. ನಮ್ಮ ಚಾಲಕನ ಮೈಕಟ್ಟು, ಕಣ್ಣಿನ ಹೊಳಪು, ಸಂಭಾಷಣೆಯ ಠೀವಿ, ತೊಗಲಿನ ಬಿಳುಪು ಇವೆಲ್ಲ ಬಾಬ್ ಬಿತ್ತಿದ್ದ ಭಯವನ್ನು ಕಿತ್ತೆಸೆಯಿತು.

ವಿಕ್ಟೋರಿಯಾ ಸರೋವರದ ಮೇಲಿಂದ ಒಂದುವರೆ ಗಂಟೆ ಕಾಲ ವಿಮಾನಗಳು ಹಾರುತ್ತ ಹೋದುವು! ಅಷ್ಟು ವಿಶಾಲ ಆ ಶುದ್ಧ ... ಪ್ರಪಂಚದಲ್ಲೇ ಅಷ್ಟು

ವಿಸ್ತಾರವಾದ ತಟಾಕ ಬೇರೊಂದಿಲ್ಲ. ಹತ್ತಾರು ನದಿಗಳು ಅದರ ನೀರನ್ನು ಸಮುದ್ರಕ್ಕೆ ಸಾಗಿಸುತ್ತಿದ್ದರೂ, ಲಕ್ಷಾಂತರ ವರ್ಷಗಳಿಂದ ತುಂಬಿ ತುಳುಕುತ್ತಿರುವ ಜಲಾಶಯ ಅದು.

ಅದರಾಚೆ ಅರಣ್ಯ; ಅಂದರೆ, ಅಲ್ಲಲ್ಲಿ ಕುರುಚಲು ಗಿಡದ ಪೊದರುಗಳು ಬಂಡೆಗಳನ್ನು ಭಗವಂತ ಜೋಡಿಸಿರಿದ ಗುಟ್ಟಗಳು, ಈಚಲು ತೋಪುಗಳು, ಮಿಂಚಿನಂತೆ ಧಾವಿಸುವ ಜಿಂಕೆ ಜಾತಿಯ ಪ್ರಾಣಿಗಳು! ಪಟ್ಟೆ ಗೆರೆಗಳ ಜಮಖಾನೆಗಳನ್ನು ಹೊದ್ದ ಜೀಬ್ರಾಗಳ ಗುಂಪುಗಳು! "ಕೆಳಗೆ ಕಾಣುವುದು ಸೆರಂಗೆಟಿ ರಾಷ್ಟ್ರೀಯೋದ್ಯಾನ" - ಎಂದ ನಮ್ಮ ಬ್ರಿಟಿಷ್ ಚಾಲಕ! ವಿಮಾನ ಕೆಳಗೆ ಬಿದ್ದರೆ, ಈ ದೇಹ ಯಾವ ಕ್ಷುದ್ರ ಪ್ರಾಣಿಗೆ ಆಹಾರವಾಗುತ್ತದೆಯೋ ಎಂದು ಹೆದರಿ, "ಸಿಂಹಗಳಿವೆಯೋ" - ಎಂದು ಕೇಳಿದೆ, ಕೇಳಬಾರದಾಗಿತ್ತು. ಚಾಲಕ ಕೂಡಲೇ ವಿಮಾನಗಳನ್ನು ತೀರ ಕೆಳಗೆ ಇಳಿಸಿ ಹುಡುಕಲಾರಂಭಿಸಿದ. ಅಗೊ ಅಗೊ, ಎಂದು ಎಲ್ಲೋ ತೋರಿಸಿದ. ಸತ್ತರೂ ಸಿಂಹದ ಹೊಟ್ಟೆ ಸೇರಿದ, ಎಂಬ ಕೀರ್ತಿ ಪಡೆಯಲು ಆಸೇ - ನನಗೆ !

"ಂಗೊರೊಂಗೊರೊ" ಎಂಬುದು ಒಂದು ಭಾರಿ ಬಟ್ಟಲು ಪ್ರದೇಶ. ೧೨೭ ಚದರ ಮೈಲಿ ವಿಸ್ತಾರದ ಕಣಿವೆ; ಚಕ್ರಕಾರ, ಸುತ್ತಲೂ, ಎತ್ತರದ ಬೆಟ್ಟ. ಅದೊಂದು ಹಳೆಯ ಅಗ್ನಿ ಪರ್ವತದ ಬಾಯಿ; ಏಕೋ ಎಂದೋ ಮೂಕವಾದ ಬಾಯಿ. ದಟ್ಟವಾದ ಹುಲ್ಲುಗಾವಲು. ಪೊದರು, ಕಾಡು, ಕೊಳಗಳು, ಇವೆಲ್ಲ ತುಂಬಿದ ಪ್ರದೇಶ. ಅದರ ಮಧ್ಯೆ "ಮನಾಯಿ" ಎಂಬ ಹೆಸರಿನ ಕಾಡುಗೊಲ್ಲರ ಗುಡಿಸಲುಗಳು ಹಲವು!

ವಿಮಾನಗಳಿಂದ ಇಳಿದು, ರೋವರ್ ಜೀಪುಗಳಲ್ಲಿ ನಾವು ಕ್ರೇಬಲ್ ಲಾಡ್ಜಿಗೆ ಹೋದಾಗ, ದಾರಿಯ ಮಗ್ಗುಲಲ್ಲೇ ನಿಂತು ಕಿವಿಯಾಡಿಸುತ್ತಿದ್ದ ಕಾಡಾನೆ ಸಂಸಾರವೊಂದು ನಮಗೆ ಸ್ವಾಗತ ನೀಡಿತು. ಉದ್ದನೆಯ ದಂತ, ಬಿಸಿಲಿಗೆ ಫಳಫಳ ಹೊಳೆಯಿತು. ಲಾಡ್ಜಿಂದ ಹಿಂದಿರುಗಿದ ನಂತರ, ನಾವು ರೋವರುಗಳಲ್ಲಿ ಹತ್ತಾರು ಮೈಲಿ ಸುತ್ತಿದೆವು. ಅಬ್ಬ! ಅವುಗಳ ಸಂಖ್ಯೆಯನ್ನೆಣಿಸುವವರಾರು? ನೂರಿರಬಹುದು ಸಾವಿರ ಇರಬಹುದು. ಕಾಡು ಕೋಣಗಳು, ಜೀಬ್ರಾಗಳು, ಜಿರಾಫೆಗಳು, ಗ್ನು ಎಂಬ ಒಂದು ಬಗೆಯ ಮಹಾ ಸಪ್ಪೆ ಮೂರ್ತಿಯ ಕತ್ತೆಗಳು, ಹಯನಾ ಎಂಬ ಒಂದು ಬಗೆ ವಿಕಾರ ರೂಪದ ನರಿಗಳು, ಉಷ್ಟ್ರ ಪಕ್ಷಿಗಳು, ತರತರದ ಜಿಂಕೆಗಳು! ಸಿಂಹಗಳು! ಹೌದು, ಹುಲ್ಲಿನ ಹಾಸಿಗೆಯ ಮೇಲೆ ಮಲಗಿ ಬಿಸಿಲು ಕಾಯಿಸುತ್ತಿದ್ದ ಎರಡು ಸಿಂಹಿಣಿಗಳು ಜೀಪುಗಳ ಚಕ್ರಕ್ಕೆ ಸಿಕ್ಕದೆ ಸರಿದು ಪಾರಾದವು; ನಾವೂ ಪಾರಾದೆವು. ಅವರ ಗಂಡ ಹತ್ತಿರದಲ್ಲೇ ಒಂದು ಬಂಡೆಯ ಮೇಲೆ ಕುಳಿತು ಆಕಳಿಸುತ್ತಿದ್ದ. ಇಂಥ ಸಿಂಹ ಸಂಸಾರಗಳು ಹತ್ತಾರರ ನಡುವೆ ನಮ್ಮ ಜೀಪುಗಳು ತೂರಿದವು. ಅವರನ್ನೆಲ್ಲ ಅನುಗ್ರಹಿಸುವುದಕ್ಕಾಗಿಯೇ ಆ ಅರಣ್ಯಕ್ಕೆ ಬಾಬಾ ಬಂದರೆಂಬುದು ಅವರ ಕರುಣಾಪೂರಿತ ಕಟಾಕ್ಷದಿಂದಲೂ ಸಹತಾಪಭರಿತ ಮಾತುಗಳಿಂದಲೂ ನಾವು ಊಹಿಸಿದೆವು.

ಇದ್ದಕ್ಕಿದ್ದಂತೆ, ವನರಾಜನ ಪಟ್ಟ ಮಹಿಷಿಯೊಬ್ಬಳು ಕಾಣಿಸಿಕೊಂಡಳು. ಫಲಹಾರದ ಬಯಕೆ ತೋರಿರಬೇಕು. ಕೊಬ್ಬಿದ ಜಿಂಕೆಗಳು ತುಂಬಿದ ಒಂದು ಗುಂಪಿನ ಕಡೆ ಸದ್ದಿಲ್ಲದೆ ಸಾಗಿದಳು. ಮರದ ಮೇಲಿ ಪಕ್ಷಿಗಳು ಎಚ್ಚರಿಕೆ ಎಂದು ಕೂಗಿದುವು. ಉದ್ದ ಕತ್ತಿನ ಜಿರಾಫೆಗಳು ತಲೆ ಎತ್ತಿ ಗಾಳಿಯನ್ನು ಮೂಸಿ ಮೈಯೆಲ್ಲಾ ಕಣ್ಣಾಗಿ ಸೆಟೆದು ನಿಂತುವು. ಇದನ್ನು ಗಮನಿಸಿದ ಕೋಣಗಳು ಕೊಂಬು ಕೊಸರಿ, ಬಾಲ ಎತ್ತಿ, ಕಾಲಿಗೆ ಬುದ್ಧಿ ಹೇಳಿದುವು. ಜಿಂಕೆಗಳು ಎಲ್ಲೋ ಕಣ್ಮರೆಯಾದುವು. ಈ ನಾಟಕವನ್ನು ಗಮನಿಸಿದ ಬಾಬಾ ನಮಗೆ ಹೇಳಿದರು: "ನೋಡಿದಿರಾ! ಮನುಷ್ಯ ಜಾತಿಯಲ್ಲಿ ತಾಂಡವ ಆಡುತ್ತಿರುವ ದ್ವೇಷ ವೈರ, ಅಸಹನೆ, ಅಸೂಯೆ, ಈ ವನ್ಯ ಮೃಗಗಳಲ್ಲಿಲ್ಲ. ಐಕಮತ್ಯದಿಂದಲೇ ರಕ್ಷೆ ಎಂದು ಇವು ತಿಳಿದು ಆಚರಿಸುತ್ತಿವೆ".

ಸಂಜೆ ೪ ಗಂಟೆಗೆ ಮತ್ತೆ ವಿಮಾನ ಹತ್ತಿದೆವು. ನಾಟ್ರನ್ ಸರೋವರನ್ನು ಸಮೀಪಿಸಿದಾಗ, ಇತ್ತೀಚೆಗೆ ಪ್ರಕಟವಾಗಿ ಬಿಸಿಬಿಸಿ ಲೋಹ ಜಲವನ್ನು ಪ್ರವಾಹ ಪ್ರಮಾಣದಲ್ಲಿ ಆಕಾಶಕ್ಕೆ ಉಗುಳುತ್ತಿದ್ದ ಒಂದು ಅಗ್ನಿ ಪರ್ವತದ ಹೊಗೆಯೊಳಗಿಂದ ವಿಮಾನ ಹಾರಿದಾಗ, ಅದರ ಬಿಸಿ ನಮಗೂ ತಾಕಿತು. ಅದೊಂದು ಅತ್ಯಂತ ಅಪೂರ್ವ ಭಯಂಕರಾನುಭವ ! ನೈರೋಬಿ ಎಂಬ ಕಾಸಿ ನಿಲ್ದಾಣದಲ್ಲಿ ಇಳಿಯಬೇಕಾದ ನಮ್ಮ ವಿಮಾನಗಳು, ಅನುಮತಿ ಸಿಗುವುದು ತಡವಾದ ಕಾರಣ, ಆ ನಗರದ ಹೊರಗಣ ಅಭಯಾರಣ್ಯದ ಮೇಲೆ ಕೊಂಚ ಹೊತ್ತ ಹಾರಬೇಕಾಗಿ ಬಂತು.

ಅನಂತರ ಬಾಬಾ, ನೈರೋಬಿ ನಾಗರಿಕರನ್ನುದ್ದೇಶಿಸಿ ತಮ್ಮ ಪ್ರಪ್ರಥಮ ದಿವ್ಯೋಪ ನ್ಯಾಸವನ್ನು ಅನುಗ್ರಹಿಸಿದರು. ಸಭಾ ಮಂಟಪದ ಸುತ್ತ ಸ್ತ್ರೀ ಪುರುಷರು ಸೂಜಿ ಮೊನೆಯಷ್ಟು ಜಾಗ ಕೂಡ ಬಿಡದೆ ಕಿಕ್ಕಿರಿದು ಸೇರಿದ್ದರು. ಇಂಥ ಜನ ಸಮೂಹ ಈ ಪ್ರಾಂತದಲ್ಲೆಂದೂ ಸೇರಿಲ್ಲವೆಂದು ಆಫ್ರಿಕನ್ ನಾಯಕರು ಅಚ್ಚರಿಗೊಂಡರು. ಎಲ್ಲರಿಗೂ ಬೇಕಾದ ಯಾರನ್ನೂ ಬಿಡದ ಬಂಧು, ಬಾಬಾ ಒಬ್ಬರೇ! ಸತ್ಯವೆಂಬ ಇಟ್ಟಿಗೆಯಿಂದ, ಪ್ರೇಮವೆಂಬ ಗಾರೆ ಉಪಯೋಗಿಸಿ, ಪ್ರತಿಯೊಂದು ಹೃದಯದಲ್ಲೂ ತಮ್ಮ ಮಂದಿರವನ್ನು ನಿರ್ಮಿಸಿಕೊಳ್ಳುವರು ಬಾಬಾ. ನೈರೋಬಿಯವರು ಎಂದೂ ಅಂಥ ಮಧುರ ಭಾಷಣವನ್ನು ಕೇಳಿರಲಿಲ್ಲ. ಕೇಳುತ್ತ ಕೇಳುತ್ತ ಹೃದಯಗಳರಳಿದುವು; ಚಿತ್ರಗಳು ಪರಿಶುದ್ಧವಾದುವು; ಪ್ರೇಮ ಉಕ್ಕಿತು". ಮಾಂಸದ ಮುದ್ದೆಯೊಳಗೆ, ಎಲುಬಿನ ಗೂಡೊಳಗೆ, ಸರ್ವಾಂತರ್ಯಾಮಿ ಭಗವಂತ ವಾಸವಾಗಿದ್ದಾನೆ. ಚರ್ಮದ ಅಡಿಯಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದ ಮಯ ಕೋಶಗಳ ಓಜಸ್ಸಾಗಿ ಎಲ್ಲರಲ್ಲೂ ಇರುವುದೊಂದೇ ಶಕ್ತಿ" - ಎಂದರು. "ಸಮಾನವಾಗಿ ಬಾಳಿರಿ, ಸಮರಸದಿಂದ ದುಡಿಯಿರಿ, ಸೌಹಾರ್ದದಿಂದ ಸಾಗಿರಿ" - ಎಂದು ಬೋಧಿಸಿದರು.

ತಮ್ಮ ಬಿಡದಿಗೆ ಬಂದಾಗ, ನೆರದಿದ್ದ ಸಾವಿರಾರು ಮಂದಿಗೆ ಬಾಬಾ ದರ್ಶನ ಭಾಗ್ಯವನ್ನಿತ್ತರು. ತಮ್ಮೊಂದಿಗೆ ಬಂದವರ ಸಂಗಡ ಕೊಂಚ ಹೊತ್ತು ಟೆಲಿವಿಷನ್ ಸೆಟ್ ಮುಂದೆ ಕುಳಿತರು. ಅದರ ಮೂಲಕ ಪ್ರದರ್ಶಿತವಾದ ಅಶ್ಲೀಲ ಅಭಾಸಗಳನ್ನು ಕಂಡು ಅಸಹ್ಯ ಪಟ್ಟು, ಇದು ನಿಜಕ್ಕೂ "ಟೆಲಿವಿಷಂ" - ಎಂದು ಹೇಳುತ್ತ ಎದ್ದರು! "ಇದೂ ಒಂದು ಜಾಹೀರಾತು ತಂತ್ರ! ಹೊಲಸನ್ನೇ ಬಯಸುವ ಹೀನ ಮನಸ್ಕರಿಗಾಗಿ ಮೀಸಲಾಗಿರುವಂತಿದೆ", ಎಂದರು. "ಅತಿಯಾಸೆ, ಸುಖಲೋಲುಪತೆ, ಇಂದ್ರಿಯ ಭೋಗ, ದ್ವೇಷಾಸೂಯೆಗಳು, ಹಿಂಸಾಭಿಲಾಷೆ, ಇವುಗಳ ವಿಷ ಬೀಜಗಳನ್ನು ನಿರ್ಮಲ ಮನದಲ್ಲಿ ಬಿತ್ತಿ, ಅಶಾಂತಿ, ಯುದ್ಧ, ರಕ್ತಪಾತ, ಕ್ರಾಂತಿಗಳ ಸುಗ್ಗಿಯಲ್ಲಿ ಹಿಗ್ಗುವ ಅವಿವೇಕಿಗಳ ಕೈಗೆ ಈ ಯಂತ್ರ ಸಿಕ್ಕಿದಂತಿದೆ" - ಎಂದರು.

ನೈರೋಬಿಯರ ಅಲಾರಂ ಗಡಿಯಾರ ಯಾವುದೆಂದರೆ, ಅಭಯಾರಣ್ಯದ ಸಿಂಹ ಗರ್ಜನೆ! ಸ್ವತಂತ್ರ ಸಿಂಹಗಳು ಸಂಸಾರ ಹೂಡುವ ಉದ್ಯಾನವೇ ಅವರ ನೆರೆ! ಜುಲೈ ೫ನೇ ತಾ|| ಬಾಬಾ ಆ ಉದ್ಯಾನವನ್ನು ಪ್ರವೇಶಿಸಿ, " ಹಿಪ್ಪೊ ಪುಷ್ಕರಿಣಿ"ಯನ್ನು ಸಂದರ್ಶಿಸಿದರು. ಅಲ್ಲಿ ನೂರಾರು ನೀರು ಕುದುರೆಗಳು, ಹತ್ತಾರು ಮೊಸಳೆಯೊಂದಿಗೆ ಸುಖ ಸಂಕಥಾ ವಿನೋದದಿಂದ ಸಹಜೀವನ ನಡೆಸುತ್ತಿದ್ದವು. "ತನ್ನಂತಹ ನರ ಪ್ರಾಣಿಗಳನ್ನು ಮನ ಬಂದಂತೆ ಕೊಂದು ಕೀರ್ತಿಗಳಿಸುವ ಪ್ರಾಣಿ ಮನುಷ್ಯನೊಬ್ಬನೇ ಈ ನೆಲದ ಮೇಲೆ" ಎಂದು ವ್ಯಕ್ತಪಡಿಸಿದರು. ಬಾಬಾ. ಪುಷ್ಕರಿಣಿಯಿಂದ ಹಿಂದಿರುಗುತ್ತ, ಇಬ್ಬರು ಪುರುಷ ಸಿಂಹಗಳೂ, ಮೂವರು ಸ್ತ್ರೀ ಸಿಂಹಿಣಿಯರೂ ಎಳೆ ಬಿಸಿಲನ್ನು ಸವಿಯುತ್ತಾ ಶಿಲಾ ಮಂಚಗಳ ಮೇಲೆ ಪವಡಿಸಿರುವುದನ್ನು ಕಂಡೆವು. ನಮ್ಮನ್ನು ಕಂಡಾಗ ಅವು ಮರ್ಯಾದೆಯಾಗಿ ಎದ್ದು ನಿಂತವು! ಸಿನಿಮಾ ನಟನಟಿಯರು ಫೋಟೋ ತೆಗೆಯುವ ತಂಡವನ್ನು ಕಂಡಾಗ ಹೇಗೆ ಆನಂದಿಸುವರೋ, ತಮಗೆ ತಾವು ಸಿದ್ಧಪಡಿಸಿಕೊಂಡು ವಿವಿಧ ಭಂಗಿಯಲ್ಲಿ ನಿಲ್ಲುವರೋ, ಹಾಗೆಯೇ ಆ ಮಹಾ ಮರ್ಜಾಲಗಳೂ ನಿಂತು ನಮಗೆ ಅಮಿತಾನಂದವನ್ನುಂಟು ಮಾಡಿದವು.

ಭೋಜನಾ ನಂತರ, ಡಾ|| ಪಟೇಲ್ ಅವರು ನಮ್ಮನ್ನು ಕೀನ್ಯಾ ಪರ್ವತದ ತಪ್ಪಲಿನ "ನನ್ಯೂಕಿ" ಎಂಬ ನಗರಕ್ಕೆ ಕರೆದೊಯ್ದರು. ಸಮುದ್ರ ಮಟ್ಟದಿಂದ ೬೪೦೦ ಅಡಿ ಎತ್ತರದಲ್ಲಿದೆ. ಆ ಊರು, ಭೂಮಧ್ಯ ರೇಖೆ ಆ ಊರಿನ ನಡುವೆ ಹಾದು ಹೋಗುತ್ತದೆ. ಅಲ್ಲಿಯ ಶ್ರೀಮಂತ ಹೋಟೆಲೊಂದರ ಹಜಾರದಲ್ಲಿ, ಆ ರೇಖೆಯನ್ನನುಸರಿಸಿ ಬಣ್ಣದ ಗೆರೆ ಎಳೆದಿದ್ದಾರೆ. ಅದರ ಈಚೆ ಒಂದು ಕಾಲು, ಆಚೆ ಒಂದು ಕಾಲು ಇರಿಸಿ ನಿಂತು ಜನ "ಆಹಾ! ಏಕಕಾಲದಲ್ಲಿ ಉತ್ತರಾರ್ಧ ಭೂಮಿಯನ್ನೂ-ದಕ್ಷಿಣಾರ್ಧ ಭೂಮಿಯನ್ನೂ ತುಳಿದು ನಿಂತಿದ್ದೇನೆ" ಎಂದು ಹರ್ಷಿಸಬಹುದು. ಇಂಥ ಅಮೂಲ್ಯ ಅನುಭವಕ್ಕಾಗಿ ಪ್ರತಿ ದಿನ ಹೋಟೆಲಿಗೆ ನೂರಾರು "ಟೂರಿಸ್ಟು" ಜನರು ಬರುವರಂತೆ! ಹದಿನಾಲ್ಕು ಲೋಕಗಳನ್ನೂ ಉದರದಲ್ಲಿ ಧರಿಸಿರುವ ಅವತಾರ ಮೂರ್ತಿಯ ಸನ್ನಿಧಿಯಲ್ಲಿ ನಮ್ಮನ್ನು ಈ ತುಚ್ಛ ವಾಂಛೆ ಬಾಧಿಸಲಿಲ್ಲ.

"ಗುಪ್ತಾರಣ್ಯ"ವೇ ನಮ್ಮ ಗುರಿಯಾಗಿತ್ತು. ಅಲ್ಲಿ ೩೦ ಅಡಿ ಎತ್ತರದಲ್ಲಿ, ಮರದ ದಿಮ್ಮಿಗಳೇ ಕಂಬವಾಗಿ ಕಟ್ಟಿದ್ದ ಒಂದು ಎಲೆಮನೆ, ನಮ್ಮ ಆ ರಾತ್ರಿಯ ಆವಾಸ ಸ್ಥಾನ. ಆ ಪರ್ಣ ಶಾಲೆಯಲ್ಲಿ ಒಂದು ರಾತ್ರಿ ತಂಗಬೇಕಾದರೆ ೧೫೦ ರೂಪಾಯಿ ಬಾಡಿಗೆ. ೬ ತಿಂಗಳ ಮೊದಲೇ ತಾರೀಖು ನಿರ್ಧರಿಸಿ ಅದನ್ನು ರಿಸರ್ವ್ ಮಾಡಿಸಿಕೊಳ್ಳಬೇಕು. ಅಷ್ಟು ಜನಪ್ರಿಯವಾದದ್ದು ಆ ಸ್ಥಳ!

ಏಕೆಂದರೆ, ಅದರ ಮುಂದಿದ್ದ ಸರೋವರದ ನೀರು ಕುಡಿಯುವುದಕ್ಕಾಗಿಯೂ, ಅರಣ್ಯ ಶಾಖೆಯವರು ಅಲ್ಲಿ ನಿಕ್ಷೇಪಿಸುವ ಉಪ್ಪು ಹಲಿಗೆಗಳನ್ನು ನೆಕ್ಕುವುದಕ್ಕಾಗಿಯೂ, ಮಾಂಸಾಹಾರಕ್ಕಾಗಿಯೂ, ಸುತ್ತು ಹತ್ತು ಮೈಲಿ ಪ್ರದೇಶಗಳಿಂದ ರಾತ್ರಿ ಪೂರಾ, ಬಗೆಬಗೆಯ ಮೃಗಗಳು ಸಾಲಾಗಿ ಗುಂಪಾಗಿ ಬಂದು ಹೋಗುವುವು. ಅವುಗಳನ್ನು ತೀರಾ ಹತ್ತಿರ ನೋಡುವ ಸಲುವಾಗಿ ಮರಗಳ ಮೇಲೆ ಅಲ್ಲಲ್ಲಿ ವಿದ್ಯುದ್ದೀಪಗಳು ನಿತ್ಯವೂ ಹಾಗೂ ಬೆಳದಿಂಗಳುಂಟು ಮಾಡುವುವು. ನೋಡನೋಡುತ್ತ ಆನೆಗಳು ಬಂದು ದಾಹ ಶಮನ ಮಾಡಿಕೊಂಡವು. ಜಿಂಕೆಗಳು ಉಪ್ಪು ತಿಂದು ನೀರು ಕುಡಿದುವು. ಮರದ ಮೇಲೆ ಅಟ್ಟದಲ್ಲಿರಿಸಿದ್ದ ಕುರಿ ಮಾಂಸವನ್ನು ಚಿರತೆಯೊಂದು ಛಂಗ್ ಅಂತ ನೆಗೆದು, ಅಲ್ಲೆ ಕುಳಿತು ತಿಂದಿತು. ಅಷ್ಟರಲ್ಲೇ ಬಾಬಾ ನಮ್ಮನ್ನೆಲ್ಲ ತಮ್ಮ ಕೋಣೆಗೆ ಕರೆಯಿಸಿ, "ಇವತ್ತು ಗುರುವಾರ! ಆಧ್ಯಾತ್ಮಿಕ ಚಿಂತನೆ ಮಾಡಿ" - ಎಂದು ಬೋಧಿಸಿದರು. ಎರಡು ಮೂರು ಭಜನೆ ಹಾಡಿಸಿದರು. ನಿಮ್ಮ ಮನೋವನದಲ್ಲಿರುವ ಮೃಗ ಸ್ವಭಾವವನ್ನು ದೂರ ಮಾಡಿರಿ ಎಂದರು. ವಕ್ರ ಬುದ್ಧಿಯೇ ನರಿ, ದ್ವೇಷವೇ ಹುಲಿ, ಅಹಂಕಾರವೇ ಕಾಡುಕೋಣ, ಕಾಮವೇ ಹಿಪ್ಪೊ, ಕ್ರೋಧವೇ ಮೊಸಳೆ, ಎಂದರು. ಕೈ ಆಡಿಸಿ ತಮ್ಮ ರೂಪ ಕೆತ್ತಿರುವ ಒಂದು ಚಿನ್ನದ ಪದಕವನ್ನು ತಯಾರಿಸಿ, "ತೆಗೆದುಕೋ! ಎಷ್ಟೋ ವರ್ಷಗಳಿಂದ ಇದಕ್ಕಾಗಿ ಪರಿತಪಿಸುತ್ತಿದ್ದಿ" - ಎಂದು ಕೇಳುತ್ತ ಒಬ್ಬರ ಕೈಯಲ್ಲಿರಿಸಿದರು. "ಏನು? ಎಲ್ಲರಿಗೂ ಏನಾದರೂ ಬೇಕೇನು?" ಎಂದು ಕೇಳುತ್ತ, ಬಲಗೈಯನ್ನು ಒಂದೆರಡು ಸಲ ತಿರುಗಿಸಿದರು. ಚಿನ್ನದ ಕೂಜ, ತಿರುಪು ಮುಚ್ಚಳ! ತಾವೇ ಕರೆದು ನಮ್ಮ ಮೂಗಿಗೆ ಹಿಡಿದರು. ಸ್ವರ್ಗೀಯ ಪರಿಮಳ ನಾಲಿಗೆ ಮೇಲೆ ಹುಯ್ದರು, ಸ್ವರ್ಗೀಯ ಮಾಧುರ್ಯ.

ಮೂರನೆಯ ದಿನ ನೈರೋಬಿಗೆ ಹಿಂದಿರುಗುವಾಗ, ನನ್ಯೂಕಿ ನಗರದ ರಸ್ತೆ ಉದ್ದಕ್ಕೂ ಸಾವಿರಾರು ಆಫ್ರಿಕನರು! "ಈ ಮಾರ್ಗ ನಾನು ಬರುತ್ತೇನೆ ಅಂತ ಇವರಿಗೆಲ್ಲ ಯಾರು ತಿಳಿಸಿದರು?" - ಎಂದು ಬಾಬಾ ಆಶ್ಚರ್ಯಪಟ್ಟರು. ಅವರ ಕರುಣೆಯೇ ತಿಳಿಸಿರಬೇಕು. ಅದಿಲ್ಲದೆ ಯಾರಿಗೂ ಅವರ ದರ್ಶನ ದೊರಕದಲ್ಲವೆ?

ಮಧ್ಯಾಹ್ನ ಬಾಬಾ ಮತ್ತು ಅವರೊಂದಿಗೆ ಬಂದ ನಾವು, ವಿಮಾನ ಹತ್ತಿ ವಿಕ್ಟೋರಿಯಾ ತಟಾಕದ ಅಂಚಿನಲ್ಲಿರುವ ಪ್ರಧಾನ ಪಟ್ಟಣ ಕಿಸೂಮುವನ್ನು ಹಾದು, ಎಂಟೆಬ್ಬೆಯಲ್ಲಿಳಿದು, ಕಂಪಾಲಾ ಸೇರಿಕೊಂಡೆವು.

ಕಂಪಾಲಾದಲ್ಲಿ ಬಾಬಾ ಅವರಿಗೆ ಒಂದು ನಿಮಿಷದ ವಿಶ್ರಾಂತಿ ಕೂಡ ಇರಲಿಲ್ಲ. ಉಗಾಂಡಾ ಸೈನ್ಯದ ಮಹಾ ದಂಡನಾಯಕ ಇದ್ಲಿ ಅಮೀನ್, ವಾರ್ತಾ ಶಾಖೆಯ ಮಂತ್ರಿ ಒನಾಮ, ಗೃಹ ಮಂತ್ರಿ ಒಜಿರಾ, ಪೋಲೀಸ್ ಮುಖ್ಯಾಧಿಕಾರಿ ಒರ್ಯೆಮ, ಇತರ ಪ್ರಮುಖ ಆಫ್ರಿಕನರು ಎಲ್ಲರೂ ಸ್ವಾಮಿಯ ಸಂದರ್ಶನ ಪಡೆದರು. ನಮ್ಮ ಅಂಬಾಸಡರ್ ಶ್ರೀ ಸಿಂಗ್ ಅವರು ದೀರ್ಘಕಾಲ ಬಾಬಾರವರೊಂದಿಗೆ ಮಾತನಾಡಿದರು. ವಿದೇಶದಲ್ಲಿ ಉದರಂಭರಣಕ್ಕಾಗಿ ಬಂದು ನೆಲೆಸಿದ್ದ ಭಾರತೀಯರಿಗೆ ಹೆಚ್ಚು ಹೆಚ್ಚು ಅನಾನುಕೂಲಗಳನ್ನು ಭಯ ಭ್ರಾಂತಿಗಳನ್ನು ತಂದೊಡ್ಡುತ್ತಾರಾದ್ದರಿಂದ, ಭಾರತೀಯರೆಲ್ಲರೂ ತಮ್ಮ ತಮ್ಮ ಆಸ್ತಿ ಪಾಸ್ತಿಗಳನ್ನು ಸುರಕ್ಷಿತವಾಗಿರಿಸಿಕೊಳ್ಳಬೇಕೆಂದು, ಬಾಬಾ ಸಮಿತಿ ಸದಸ್ಯರೆಲ್ಲರಿಗೂ ತಿಳಿಸಿದರು.

ಲಯನ್ಸ್‌ನವರು, ರೋಟರಿ ಕ್ಲಬ್ಬಿನವರು, ಡಾಕ್ಟರುಗಳು, ವಾಣಿಜ್ಯದಲ್ಲಿ ತೊಡಗಿರುವವರು, ಸೇವಾ ಸಂಘಗಳ ಸದಸ್ಯರುಗಳು, ವಿವಿಧ ಮತಸ್ಥಾಪನೆಗಳನ್ನು ನಡೆಸುವವರು - ಇವರನ್ನು ಪ್ರತ್ಯೇಕವಾಗಿ ಬೇರೆ ಬೇರೆ ದಿನಗಳಲ್ಲಿ ಸಮಾವೇಶಗೊಳಿಸಿ, ಅವರೊಂದಿಗೆ ಮೃದು ಮಧುರವಾಗಿ, ಹಾಸ್ಯ ಪೂರ್ಣವಾಗಿ, ಮನೆ ಯಜಮಾನನಂತೆ, ಮಾತನಾಡಿದರು. ಕೇಳಿದ ಪ್ರಶ್ನೆಗಳಿಗೆ ಅವು ಎಷ್ಟು ಅಸಂಬಂದ್ಧವಾಗಿರಲಿ, ಅಲ್ಪ ವಿಷಯದ್ದಾಗಿರಲಿ - ಸಹನೆಯಿಂದ ಸರಸವಾಗಿ ಉತ್ತರವಿತ್ತು, ಎಲ್ಲರ ಹೃದಯಗಳನ್ನು ಸೂರೆಗೊಂಡರು. ಕ್ರಿಶ್ಚಿಯನರಿಗೆ ಏಸು ಕ್ರಿಸ್ತುವಿನ, ಸಿಕ್ಖರಿಗೆ ನಾನಕ್ ಗುರುವಿನ, ಪಾರ್ಸಿಗಳಿಗೆ ಜರತುಷ್ಟ್ರನ, ಒಳಗೊಳಗೆ ತನಗಾಗಿ ಕುದಿಯುತ್ತಿದ್ದವರಿಗೆ ತನ್ನ ಪ್ರತಿಮೆಗಳನ್ನು, ಬಾಯಿ ತೆರೆದು ಕೇಳುವ ಮುನ್ನವೇ ಸೃಷ್ಟಿಸಿ ಹಂಚಿದರು. ಕಂಪಾಲಾನಗರದ ಮಕ್ರೆರೆ ವಿಶ್ವ ವಿದ್ಯಾಲಯದ ವಿದ್ಯಾರ್ಥಿ ನಾಯಕರೊಂದಿಗೆ ಬಹಳ ಹೊತ್ತು ಮಾತನಾಡಿ, ಅವರ ನಡುವೆ ನಾಯಕ ಮಣಿಯಾಗಿ ನಿಂತು ಫೋಟೊ ತೆಗೆಸಿಕೊಂಡರು.

"ದೇವರು ಇರುವುದು ನಿಜವಾದರೆ, ನಾವೇಕೆ ಕಾಣುತ್ತಿಲ್ಲ?" - ಎಂದು ಕೇಳಿದರೊಬ್ಬರು. "ಕಾಣುವುದೇಕೆ? ಅದಕ್ಕಾಗಿ ಪ್ರಯತ್ನವೇಕೆ? ನೀವೇ ದೇವರು. ದೇವರಲ್ಲದೆ ಮತ್ತೊಂದಿಲ್ಲ. ಈ ಸತ್ಯವನ್ನು ನಂಬಿ ಆನಂದಿಸು" - ಎಂದುತ್ತರವಿತ್ತರು ಬಾಬಾ. "ಆನಂದದಲ್ಲೇ ಸದಾ ಇರಬೇಕಾದರೆ ಹೇಗೆ?" - ಎಂಬ ಪ್ರಶ್ನೆಗೆ, "ಅಂಥ ಆನಂದ ಹೊರ ಪ್ರಪಂಚದಲ್ಲಿಲ್ಲ; ಒಳ ಪ್ರಪಂಚದಲ್ಲಿದೆ. ಆತ್ಮನೇ ಎಂದೂ ಬತ್ತದ ಆನಂದ, ಚಿಲುಮೆ" - ಎಂಬ ಉತ್ತರ ಬಂತು. ಅಸೂಯೆ ಅಸಹನೆ ಇವು ಡಾಕ್ಟರುಗಳನ್ನು ಲಾಯರುಗಳನ್ನು ಹಿಡಿದು ಹಿಂಸಿಸುವ ರೋಗಗಳು. ಮತ್ತೊಬ್ಬ ಕೀರ್ತಿ ಸಂಪಾದಿಸಿದರೆ, ಸಂತೋಷಪಡಿ. ಡಿಗ್ರಿಗಳನ್ನು ತೆಗೆದು ಕೊಂಡಾಗ ನೀವು ಮಾಡಿದ ವಾಗ್ದಾನದಂತೆ ಬಾಳಿ" - ಎಂದರು ಬಾಬಾ.

ಜುಲೈ ೭ನೆ ತಾ|| ಬಾಬಾ ಅವರು ಕಂಪಾಲಾ ನಾಗರಿಕರನ್ನುದ್ದೇಶಿಸಿ ತಮ್ಮ ಪ್ರಥಮೋಪನ್ಯಾಸವನ್ನಿತ್ತರು. ಮುಸಲ್ಮಾನರೂ ಕ್ರೈಸ್ತರೂ ಹಿಂದೂಗಳೂ ಬಹಾಯಿ ಮತಸ್ಥರೂ

ಪಾರ್ಸಿ ಜನರೂ ಬಹು ಸಂಖ್ಯೆಯಲ್ಲಿ ಹಾಜರಿದ್ದರು. ಮಿರಿ ಮಿರಿ ಹೊಳೆಯುವ ಕಲ್ಲಿದ್ದಲು ಬಣ್ಣದ ಗುಂಗುರು ಕೂದಲಿನ ನೀಗ್ರೋಗಳೂ, ಎಣ್ಣೆ ಕೆಂಪು ಭಾರತೀಯರೂ, ಹಳದಿ ಚೀನಿಯರೂ, ಬಿಳಿಯ ಫರಂಗೀಯರೂ ನೆರೆದಿದ್ದರು. ಎಲ್ಲರೂ ಕಿವಿತೆರೆದು, ಮನತೆರೆದು ಬಾಬಾ ಭಾಷಣವನ್ನಾಲಿಸಿದರು. ಅವರ ತೆಲುಗನ್ನು ಆಂಗ್ಲಕ್ಕೆ ತರ್ಜಮೆ ಮಾಡಿ ಹೇಳುವ ಪುಣ್ಯ ನನ್ನ ಪಾಲಿನದಾಯಿತು. "ನಿಮ್ಮ ದೇಹದ ಅಂಗಾಂಶಗಳಿಗೆಲ್ಲ ಒಂದೇ ರಕ್ತ ಚೇತನ ನೀಡುತ್ತಿದೆ. ಬ್ರಹ್ಮಾಂಡಕ್ಕೆ ಚೇತನ ನೀಡುವವನೊಬ್ಬನೇ ಇದನ್ನು ನೆನೆದು ನಂಬಿ, ವೈರ - ವಿದ್ವೇಷಗಳಿಂದ ಪಾರಾಗಬೇಕು" - ಎಂದರು. ಆಗಿನ ಪರಿಸ್ಥಿತಿಯಲ್ಲಿ ಇಂಥ ಸ್ನೇಹ ಸಂದೇಶ ಅತ್ಯವಶ್ಯಕವೆಂದು ಎಲ್ಲರೂ ಮನಗಂಡರು.

ಲನೆ ತಾ | ನಡೆದ ಮಹಾಸಭೆಯಲ್ಲೂ ಬಾಬಾ ಈ ಸಂದೇಶವನ್ನೇ ವಿಪುಲೀಕರಿಸಿದರು. "ಧ್ಯಾನದಿಂದ ಚಿತ್ತ ಶುದ್ಧಿ; ಪ್ರೇಮದಿಂದ ಆನಂದ ಪ್ರಾಪ್ತಿ, ಏಕತ್ವ ಜ್ಞಾನ" - ಎನ್ನುತ್ತ "ಪ್ರೇಮವೇ ಜೀವನ ಜ್ಯೋತಿ, ಪ್ರೇಮವೇ ಪರಮಾನಂದ, ಪ್ರೇಮವೇ ಸುಲಭ ಸಾಧನೆ, ಪ್ರೇಮವೇ ಪರಮೇಶ್ವರ" - ಎಂದು ಘೋಷಿಸಿದರು.

ಇಂಥ ಉಪದೇಶದಿಂದಲೂ, ತಮ್ಮ ಪ್ರೇಮ ಪೂರ್ಣ ನಡೆ ನುಡಿಗಳಿಂದಲೂ ಬಾಬಾ, ಕಂಪಾಲದ ಕಣ್ಮಣಿಯಾಗಿ ಕಂಗೊಳಿಸಿದರು. ಅವರನ್ನು ಗೆಳೆಯನಂತೆ, ಗೈಡಿನಂತೆ, ಗುರುವಿನಂತೆ, ಸಾವಿರಾರು ಜನ ಆದರಿಸಿದರು. ಆರಾಧಿಸಿದರು.

೧೦ನೆ ತಾ| ಗುರು ಪೌರ್ಣಮಿ. ಆ ದಿನ ಬೆಳಿಗ್ಗೆ ಕಂಪಾಲಾದವರನ್ನನುಗ್ರಹಿಸಿ, ವಿಮಾನರೋಹಣ ಮಾಡಿ, ರಾತ್ರಿ ಬೊಂಬಾಯಿ ಸೇರಿ, ಧರ್ಮ ಕ್ಷೇತ್ರದಲ್ಲಿ ಭಕ್ತರಿಗೆ ದರ್ಶನವಿತ್ತು, ಎರಡು ಖಂಡವನ್ನೂ ತೃಪ್ತಿಪಡಿಸುವ ಕಾರ್ಯಕ್ರಮವನ್ನು ಆಗಲೇ ಸಿದ್ಧಪಡಿಸಲಾಗಿತ್ತು. ಈ ಸುದ್ದಿ ತಿಳಿದ ಕೂಡಲೆ, ೯ನೆಯ ತಾ|ನ ಭಜನೆ ಸಮಾವೇಶದಲ್ಲಿ ಆಫ್ರಿಕಾ ಜನರು ಬಾಬಾ ಅವರನ್ನು ಬಗೆಬಗೆಯಾಗಿ ಬೇಡಿಕೊಂಡರು. "ತಂದೆ! ನಮ್ಮನ್ನು ಬಿಟ್ಟು ಹೋಗಬೇಡಿ" - "ಬಾಬಾ! ಇಲ್ಲೇ ಇರಿ" - ಎಂಬ ಆರ್ತನಾದ ಎಲ್ಲರ ಕಂಠವನ್ನು ಬಿಗಿಸಿತು. ಕಣ್ಣೀನ ಕೋಡಿ ಹರಿಯಿತು. ಬಾಬಾ ಹತ್ತಿರ ಬಂದಾಗ, ನೀಗ್ರೊ ಜನರು ಮಂಡಿಯೂರಿ ವಂದಿಸಿ, ಕೈಗೊಂದು ಗುಲಾಬಿಯನ್ನರ್ಪಿಸಿ, ತೊದಲು ನುಡಿದು, ಅವರ ಪ್ರಯಾಣವನ್ನು ತಡೆಯಲು ಯತ್ನಿಸಿದರು. ಪಟೇಲರ ಬಂಗಲೆಯ ಕಿಟಕಿಯೊಂದರ ಮೂಲಕ ಈ ದೃಶ್ಯವನ್ನು ನೋಡುತ್ತಿದ್ದ ನನಗೆ, ಆನಂದಾತಿರೇಕದಿಂದ, ಕಣ್ಣೀರು ಧಾರೆ ಧಾರೆಯಾಗಿ ಹರಿಯಿತು. ಆಹಾ! ಎಂಥ ಹಾರ್ದಿಕವಾದ ಭಾವೋನ್ಮೇಷದ ಸರಳ ಪ್ರಕಟಣೆ! ಅವತಾರ ಕಥೆಯಲ್ಲಿನ ಅಪೂರ್ವ ಸಂಘಟನೆ! ಆಗ, ಯಾರೋ (ಯಾರೋ ಏನು?, ಹಿಂದಿನಿಂದ ಮೆಲ್ಲಗೆ ಬಾಬ ಅವರೇ) ಬಂದು, ಬೆನ್ನ ಮೇಲೆ ಕೈ ಇರಿಸಿ, "ಏಕೆ ಅಳುತ್ತೀ?" - ಎಂದಾಗ, ನಾನು ಎಚ್ಚರಗೊಂಡೆ. ತಿರುಗು ಪ್ರಯಾಣವನ್ನು ಮುಂದುವರಿಸಲಾಗಿದೆ, ಎಂಬ ತಂತಿಯನ್ನು

ಒಬ್ಬ ನೀಗ್ರೋ ಮಂತ್ರಿಯ ಮೂಲಕವೇ ಬಾಬಾ ಬೊಂಬಾಯಿಗೆ ಕಳುಹಿಸಿದರು. ಆ ಮಂತ್ರಿ, "ಇದೇ ನಾನು ನಮ್ಮ ಜನಕ್ಕೆ ಮಾಡುವ ಅತ್ಯಂತ ಫಲದಾಯಕ ಸೇವಾಕಾರ್ಯ" - ಎಂದು ಹಿಗ್ಗಿದ.

ಹುಣ್ಣಿಮೆಯಂದು ಭಜನೆ ಸಮಾವೇಶದಲ್ಲಿ ೨೫ ಸಾವಿರಕ್ಕಿಂತ ಹೆಚ್ಚು ಜನ ಹಾಜರಿದ್ದರು. ಟಾನ್‌ಜಾನಿಯಾದಿಂದ ಬಂದ ಜೂಪೂ ಎಂಬ ನೀಗ್ರೋ ಯುವಕ, ಸಾಯಿ ಭಜನೆ ಹಾಡುಗಳನ್ನು ಮನೋಹರವಾಗಿ ಹಾಡಿದ. ಎರಡು ಗಂಟೆಗಳ ಕಾಲ ಆ ಜನಸ್ತೋಮದ ನಡುವೆ ಬಾಬಾ ನಡೆದು, ಅವರಲ್ಲಿ ಆ ಬಾಲಗೋಪಾಲ ಪ್ರತಿ ಒಬ್ಬರಿಗೂ ಲಡ್ಡುಗಳನ್ನು ವಿಭೂತಿ ಪೊಟ್ಟಣಗಳನ್ನೂ ಹಂಚಿದರು. ವಿಶೇಷವೇನೆಂದರೆ, ವಿಭೂತಿಯನ್ನು ತೆಗೆಯಲು ಹೊರಟಾಗ, ಅವರವರ ಮತ ಸಂಪ್ರದಾಯದಂತೆ ಅವರವರಿಗೆ ಏಸು, ನಾನಕ್, ಜಾರತೂಷ್ಟ್ರ ಅಥವಾ ಸಾಯಿ ಇವರ ರೂಪವಿದ್ದ ವಸ್ತುಗಳು ಕಂಡು ಬಂದುವು.

ಸಂಜೆ ಸ್ವಯಂ ಸೇವಕರನ್ನು ಬಾಬಾ ಆಶೀರ್ವದಿಸಿದರು. ಸರ್ಕಾರಿ ಕಾರ್ ಡ್ರೈವರುಗಳನ್ನೂ, ಪಟೇಲರ ಬಂಗಲೆ ಸುತ್ತ ಕೆಲಸ ಮಾಡಿದ ಪೋಲೀಸಿನವರನ್ನೂ ಅವರೊಂದಿಗೆ ಕರೆದಿದ್ದರು. ಇಂಥ ಭಾರೀ ಸಮೂಹವನ್ನು ಎಂದೂ ಈ ಊರು ಕಂಡಿಲ್ಲ. ನಿಮಗೆ ಅಂಥ ಶಿಕ್ಷಣ ಕೂಡ ಯಾರೂ ಒದಗಿಸಿಲ್ಲ. ನನ್ನ ವಿಷಯ ಕೂಡ ನಿಮಗೆ ತೀರ ಹೊಸದು. ಆದರೂ ನೀವು ನೀವೇ ಯೋಚಿಸಿ ತೀರ್ಮಾನಿಸಿ, ಪರಿಷ್ಕರಿಸಿ, ಉತ್ತಮ ಸೇವೆ ಮಾಡಿದ್ದೀರಿ' - ಎಂದು ಮೆಚ್ಚಿದರು.

೧೧ನೆ ತಾ| ದೂರ ಪ್ರಾಂತಗಳಿಂದ, ಅನೇಕರು ಕಂಪಾಲಾ ನಗರಕ್ಕಾಗಮಿಸಿ, ತಮ್ಮ ತಮ್ಮ ಊರುಗಳಿಗೆ ಬರುವಂತೆ ಬಾಬಾ ಅವರನ್ನು ಅಂಗಲಾಚಿದರು.

೧೨ನೆ ತಾ| ಬಾಬಾ ಮುರ್ಚಿಸನ್ ಜಲಪಾತ ಪ್ರದೇಶದ ಅಭಯಾರಣ್ಯಕ್ಕೆ ಹೊರಟರು. ನಾನೂ ರಾಜಾರೆಡ್ಡಿಯವರೂ ವೆಂಕಟೇಶ್ವರ ರಾವು ಎಂಬ ಮತ್ತೊಬ್ಬರೂ, ಎರಡನೆಯ ಕಾರಲ್ಲಿ ಕುಳಿತೆವು. ನಾವು ಕೊಂಚ ತಡವಾಗಿ ಹೊರಟೆವಾದ್ದರಿಂದ, ನಮ್ಮ ವಾಹನದ ಡ್ರೈವರ್ ಮಹಾಶಯ ೭೦-೭೫ ಮೈಲಿ ವೇಗದಲ್ಲಿ ಕಾರೋಡಿಸಿದ. ನೇರವಾದ ನಯವಾದ ರೋಡು! ಯೌವನದ ಬಿಸಿರಕ್ತ! ಅದೇ ಮಾರ್ಗ ಹೋಗುವ ಕಾರುಗಳನ್ನೆಲ್ಲವನ್ನೂ ವೇಗದಲ್ಲಿ ಸೋಲಿಸಬೇಕೆಂಬ ಹಠ ಅವನಿಗೆ ಬಲು ಉತ್ಸಾಹ! ರಾಮ ಬಾಣದಂತೆ ನಮ್ಮ ಕಾರು ದಾರಿಗರನ್ನೆಲ್ಲ ಅಚ್ಚರಿಗೊಳಿಸುತ್ತ. ಅಮಿತ ವೇಗದಿಂದ ಅಮಲು ಹತ್ತಿ ತಾರಾಡುತ್ತ ತೂರಾಡುತ್ತ, ಒಂದು ತಿರುವಿನಲ್ಲಿ ಸಾರಥಿಯ ಹತೋಟಿಯಿಂದ ತಪ್ಪಿಸಿಕೊಂಡು, ಪಕ್ಕಕ್ಕೆ ಸರಿದು, ಬಂಡೆಗೆ ಬಡಿದು, ಮೂರು ಸಲ ಉರುಳಿ ಬಿದ್ದು ಎದ್ದು ಮುದ್ದೆಯಾಗಿ, ಚಕ್ರಚಾಚಿ, ಸದ್ದಿಲ್ಲದೆ ಮಲಗಿತು!

ಹಿಂದಿನ ಸಾಲಿನಲ್ಲಿದ್ದ ನಾನು, ರಾಜಾ ರೆಡ್ಡಿಯವರ ಎದೆಯ ಮೇಲೆ ಕುಳಿತಿದ್ದೆ, ನನ್ನ ತಲೆಯ ಮೇಲೆ ಡನ್‌ಲೊಪಿಲ್ಲೊದಿಂಬು, ಉದ್ದನೆಯದು, ಸೀಟ್ ಮೇಲೆ ಇರಿಸಿದ್ದು, ಕಾರಿನ ಸೂರು ಜಜ್ಜಿ ಹಳ್ಳ ಬಿದ್ದುದರಿಂದ, ಅದಕ್ಕೂ ತಳಕ್ಕೂ ನಡುವೆ ಸಿಕ್ಕಿಕೊಂಡ ನನ್ನ ತಲೆಬುರುಡೆಯನ್ನುಳಿಸಲು ಆ ದಿಂಬು ಸಹಾಯ ಮಾಡಿತು. ನನ್ನ ಕನ್ನಡಕ ಪುಡಿ ಪುಡಿಯಾಗಿ ಹಣೆಗೆ ತಗುಲಿ ಗಾಯ. ರಾಜಾರೆಡ್ಡಿ ಎದೆಯ ಮೇಲೆ ರಕ್ತ ಬಿಂದುಗಳ ವರ್ಷ! ಮೂರನೆಯ ಕಾರಿನಲ್ಲಿ ಬಂದ ಇಂದೂಲಾಲ್‌ಷಾ ಮುಂತಾದವರು, ಕಾರಿನ ಸ್ಥಿತಿಕಂಡು, ಗಾಬರಿಗೊಂಡು, ಆಯಿತಿವರೆಲ್ಲರ ಗತಿ ಎಂದು ನಿಶ್ಚಯಿಸಿ. ಹೆಣಗಳನ್ನು ಹೊರಗೆಳೆಯಲು ಸಿದ್ಧವಾದಾಗ ರಾಜಾರೆಡ್ಡಿ "ಕಸ್ತೂರಿಗಾರು! ಕೊಂಚಂ ನಾ ಪೈನುಂಚಿ ದಿಗಂಡಿ" ಅಂತ ನನ್ನನ್ನು ಪ್ರಾರ್ಥಿಸುತ್ತಿದ್ದ. ಬಂಡೆ ಹೊಡೆದ ರಭಸಕ್ಕೆ ಬಾಗಿಲು ತಾನಾಗಿಯೇ ತೆರೆದು, ಡ್ರೈವರ್ ಹೊರ ಬಿದ್ದಿದ್ದ. ಅವನಿಗೆ ವಿಪರೀತ ಮೈನಡುಕ! ಷಾಕ್. 'ನನ್ನಿಂದ ಇವರ ಅಂತ್ಯ ಸಂಭವಿಸಿತಲ್ಲಾ' ಎಂಬ ಹೆದರಿಕೆ! ವೆಂಕಟೇಶ್ವರ ರಾವ್ ಹೇಗೋ ಬಾಗಿಲು ನೂಕಿ ಹೊರಬಂದು, ತನ್ನ ಕಾಲ ಸ್ಥಿತಿಯನ್ನು ಪರೀಕ್ಷಿಸಿದರು. ನನ್ನನ್ನೂ ಇಂದೂಲಾಲ್ ಷಾ ಹೇಗೋ ಉಪಾಯವಾಗಿ ಎಳೆದು ಇಳಿಸಿ ಕೂರಿಸಿ ಬೋಳೈಸಿದ! ರಾಜಾ ರೆಡ್ಡಿ ಕಾಲು ಮುಂದಾಗಿ, ಸ್ವಶಕ್ತಿಯಿಂದಲೇ ಸರಿದು ಸರಿದು ತನ್ನ ಉದ್ದನೆಯ ದೇಹವನ್ನು ನಿಧಾನವಾಗಿ ನೆಲಕ್ಕಿಳಿಸಿದ.

ಜೈ ಸಾಯಿರಾಂ! ಎಲ್ಲರೂ ಪಾರಾದೆವು! - "ಮೋಟಾರ್ ಅನಾಹುತ" - ಎಂದು ಪೇಪರಲ್ಲಿ ಓದುವಾಗ, ಅದನ್ನನುಭವಿಸಿದವರ ಪಾಡು ಎಂಥದ್ದು ಎಂದು ಊಹಿಸುತ್ತಿದ್ದ ನನಗೆ, ಹೀಗೆ ಎಂಬುದು ತಿಳಿಯಿತು. ಹಣೆ ಉದ್ದಕ್ಕೂ ಪುಡಿಗಾಯ. ಎಡಗಣ್ಣು ಸುತ್ತ ಕಪ್ಪಗೆ ಊದಿತ್ತು. ಎಡಗಾಲು ಮೊಣಕಾಲಿನ ಕೆಳಗೆ ಗಾಯ. ಬಲಗಾಲಿಗೆ ಏನೋ ತಗುಲಿ ಎಂಥದ್ದೋ ಪೆಟ್ಟು ಬಿದ್ದು, ಚೆಂಡಿನಂತೆ ಊತ ಮೊಳಕಾಲಿನ ಕೆಳಗೆ! ಇಷ್ಟು ನನ್ನ ಸಂಪಾದನೆ. ಸ್ವಾಮಿ ದಯೆಯಿಂದ, ಉಳಿದವರಿಗೆ ಸಿಕ್ಕಿದ್ದು ಇದಕ್ಕಿಂತ ಕಡಿಮೆ! (ಬಾಬಾ ಅವರ ಕಾರು ೩೦ ಮೈಲಿ ದೂರದಲ್ಲಿತ್ತಂತೆ". ಎರಡನೆಯ ಕಾರು ಕಷ್ಟದಲ್ಲಿದೆ; ಅದನ್ನಲ್ಲೇ ಬಿಟ್ಟು, ಅವರೆಲ್ಲ ಟ್ಯಾಕ್ಸಿಯಲ್ಲಿ ಬರುತ್ತಾರೆ!" - ಎಂದರಂತೆ, ಅವರು ಅದೇ ಕ್ಷಣದಲ್ಲಿ)

ಬಾಬಾ ದಯೆ! ವಾಹನಘಾತ ನಡೆದ ಚೌಕದಲ್ಲೇ ಒಂದು ಆಸ್ಪತ್ರೆ ಇತ್ತು! ಅವರು ಸೃಷ್ಟಿಸಿ ತಂದಿರಿಸಿದ್ದೋ ಏನೋ ಅಂದು ಕೊಂಡೆ! ನೀಗ್ರೋ ಡಾಕ್ಟರೊಬ್ಬರು ಅಲ್ಲಿ ಪ್ರತ್ಯಕ್ಷ! ನನ್ನನ್ನು ಅವರು ನಡೆಯಿಸಿಕೊಂಡು ಹೋದರು. ಓ.ಪಿ.ಯಾಗಿಯೇ ಪರಿಗಣಿಸಿ ಸೂಜಿ ಚುಚ್ಚಿ ಒಂದೆರಡು ಕಡೆ ಮಂದು ಬಳಿದು ನನ್ನನ್ನವರು ಹೊರಕ್ಕೆ ಕಳುಹಿಸಿದರು. ಒಂದು ಚೀಟಿಯನ್ನು ಬರೆದುಕೊಟ್ಟರು. "೧೨-೭-೯೧೮. ಹೆಸರು ಕಸ್ತೂರಿ ಓ.ಪಿ.ನಂ., ೧೧೧೧/ ೭೮ (ಅನಾಹುತ ಹತ್ತು ನಿಮಿಷ ಹಿಂದಕ್ಕೆಯೇ ಸಂಭವಿಸಿದ್ದರೆ, ನನ್ನ ನಂಬರು ೧೧ ೧೧ ೧ ಎಂದಾಗುತ್ತಿತ್ತಲ್ಲಾ, ಎಂದು ನಾನು ಮರುಗಿದೆ). ಚಿಕಿತ್ಸೆ: ಸರ್ಜಿಕಲ್ ಟಾಯಿಲೆಟ್. ಇಂಜ್ ಆಂಟಿಟಾಕ್ಸಾಯಿಡ್ ೧೫೦೦"! ಸದ್ಯ ಇಷ್ಟರಿಂದಲೇ ಪಾರಾದೆ.

ವೇಗೋನ್ಮತ್ತವಾದ ಕಾರೊಂದರೊಳಗೆ ತಬ್ಬಲಿ ಮೂಟೆಯಂತೆ ಮೇಲಕ್ಕೂ ಕೆಳಕ್ಕೂ ನೆಗೆದು, ಗೆಳೆಯನ ಎದೆ ಮೇಲೆ ಬಿದ್ದು, ನೀಗ್ರೋ ಕೈಲಿ ಚುಚ್ಚಿಸಿಕೊಂಡ ನನ್ನನ್ನು ನೆನೆದು ನಾನೇ ನಕ್ಕೆ! ಆ ಚೌಕವನ್ನೆಂದಿಗೂ ಮರೆಯಲಾರೆ. ಆ ಸ್ಥಳದ ಹೆಸರು ಕೂಡ ಮಧುರತಮ. ನನ್ನನು ಯಮನ ಹೆಬ್ಬಾಗಿಲವರೆಗೂ ಎಳೆದು ಅಲ್ಲಿಂದ ಹಿಂದಕ್ಕೆ ತಂದ ಊರಲ್ಲವೆ ಅದು? ಇನ್ನು ಮೇಲೆ ಕಾರು ಪ್ರಯಾಣ ಮಾಡುವಾಗಲೆಲ್ಲ ಆ ಊರಿನ ಹೆಸರನ್ನೇ ಜಪ ಮಾಡುತ್ತಿದ್ದರೆ, ಪ್ರಾಣ ಸಹಿತ ಉಳಿಯಬಹುದೆಂದು ಯೋಚಿಸಿದೆ. "ನಕ್ಕ ಸಂಗೋಲ" - ಎಂಥ ಮನೋಹರ ನಾಮ ಧೇಯ.

ಎಂದಾದರೊಂದು ದಿನ ಆ ಜಾಗದಲ್ಲಿ ಒಂದು ಶಿಲೆಯನ್ನು ಪ್ರತಿಷ್ಠೆ ಮಾಡಿ, ಅದರ ಮೇಲೆ, "ಇಲ್ಲಿ ನಾಲ್ಕು ಭಾರತೀಯರು 'ಸಾಯಿರಾಂ' ಎಂದರು; ಯಮಲೋಕದಿಂದ ಬದುಕಿ ಬಂದರು" - ಎಂದು ಕೊರೆಯಿಸಬೇಕೆಂದು ನಿರ್ಧರಿಸಿದೆ.

ಮೂರನೆಯ ಕಾರಲ್ಲೇ ಒತ್ತರಿಸಿ ಕುಳಿತು, ಮಸಿಂಡಿ ಸೇರಿ, ಟ್ಯಾಕ್ಸಿ, ಗೊತ್ತು ಮಾಡಿ ಕೊಂಡು ಬಾಬಾ ಅವರ ಸಮೀಪಕ್ಕೆ ಧಾವಿಸಿದೆವು. ನೈಲ್ ನದಿಯನ್ನು ಕಾರುಗಳಲ್ಲಿ ಕುಳಿತೇ ದಾಟಿದೆವು, ತೆಪ್ಪದ ಸಹಾಯದಿಂದ. ಆಚೆ ದಡದಲ್ಲೇ "ಪ್ಯಾರಾಫಾರಿ ಲಾಡ್ಜ್", ಬಾಬಾ ಅವರ ಬಿಡದಿ.

ರಸ್ತೆ ಗಡ್ಡವಾಗಿ ಒಂದು ಬೋರ್ಡು ನೇತಾಡುತ್ತಿತ್ತು; "ಆನೆಗಳ ಸಂಚಾರಕ್ಕೆ ಅಡ್ಡಿ ಮಾಡಕೂಡದು"? ಒಂದೆರಡು ನಿಮಿಷಗಳಲ್ಲೇ ೫-೬ ಅಡಿ ಉದ್ದದ ಹೊರ ಹಲ್ಲುಗಳನ್ನು ಹೊತ್ತ ಎರಡು ಬೃಹದ್ಗಜಗಳು ಬಲಗಡೆಯಿಂದ ಎಡಕ್ಕೆ ನಡೆದು ಹೋದುವು. ಕಾಡು ಕೋಣಗಳ ಗುಂಪೊಂದು, ಅಲ್ಲೇ ತೀರ ಹತ್ತಿರ, ಹುಲ್ಲು ತಿನ್ನುತ್ತಿದ್ದುವು.

ನಮಗಾದ ಗಾಯಗಳ ಸಂಗತಿ ಬಾಬಾ ಅವರಿಗೆ ಆಗಲೇ ಗೊತ್ತಿತ್ತು. ನಾವು ಕಾರಿಂದ ಇಳಿಯುವ ಮೊದಲೇ ಅವರು ಹತ್ತಿರ ಬಂದು, ನಮ್ಮ ಕೈ ಹಿಡಿದಿಳಿಸಿ, ಮೈದಡವಿ, ಕಣ್ಣೊರಸಿ, ಕುರ್ಚಿಗಳಲ್ಲಿ ಕೂಡಿಸಿ, ವಿಭೂತಿ ಸೃಷ್ಟಿಸಿ, ಕಾಫಿ ಕುಡಿಸಿದರು. ಎಷ್ಟು ಪುಣ್ಯ ಮಾಡಿದ್ದೇನೋ ಆ ಉರುಳಿದ ಕಾರಲ್ಲಿ ಉಪಸ್ಥಿತನಾದದ್ದಕ್ಕೆ! ಯಾವ ತಾಯ್ಗೂ ಇಲ್ಲದ ವಾತ್ಸಲ್ಯದಿಂದ ಬಾಬಾ ನನ್ನನ್ನು ಸಮಾಧಾನಪಡಿಸಿ ಸಂತೈಸಿದರು. ತಮ್ಮ ಕರವಸ್ತ್ರವನ್ನೇ ಮಡಿಸಿ ನನ್ನ ಹಣೆಗೆ ಕಟ್ಟಿದರು. ಕೈ ಬೀಸಿ, ಗುಳಿಗೆಗಳನ್ನು ತರಿಸಿ ತಿನಿಸಿದರು; ಮುಲಾಮು ತರಿಸಿ ಸವರಿದರು. ತಾವೇ ತಮ್ಮ ಸುಮಕೋಮಲ ಬೆರಳುಗಳಿಂದ ಒತ್ತಿದರು. ನೋವಾಯಿತೆ? - ಎಂದು ಪ್ರೀತಿಯಿಂದ ಕೇಳಿದರು. ನಕ್ಕ ಸಂಗೋಲಕ್ಕೆ ನಾನು ಕೃತಜ್ಞತಾ ಪೂರ್ವಕನಾದ ನಮಸ್ಕಾರವನ್ನು ಮನದಲ್ಲೇ ಅರ್ಪಿಸಿದೆ. ವೇಗದ ಅಮಲು ಹಿಡಿದ ನಮ್ಮ ಹುಚ್ಚು ಡ್ರೈವರಿಗೂ ಒಂದು ನಮಸ್ಕಾರವಿತ್ತೆ.

ನಾವೆಲ್ಲ ಒಂದು ಮೋಟಾರ್ ಬೋಟ್‌ನಲ್ಲಿ ೧೫ ಮೈಲಿಯಷ್ಟು ನೈಲ್ ನದಿಯ ಮೇಲೆ ಹೋಗಿ ಬಂದೆವು. ಉದ್ದಕ್ಕೂ ನೀರಲ್ಲಿ ಮುಳುಗಿದ್ದ ಹಿಪ್ಪೋಗಳ ತಂಡಗಳು! ನೀರಿನ

ಮೇಲೆ ಅವುಗಳ ಕಿವಿ, ಕಣ್ಣು, ಮೂಗು! ಅಷ್ಟೇ ಕಾಣುವುದು. ದಡದ ಮೇಲೂ ನೂರಾರು ಹಿಪ್ಪೋಗಳು ಸಂಚರಿಸುತ್ತಿದ್ದುವು. ಕೆಂಚಗೆ ಕಾದಿದ್ದ ಪೀಪಾಯಿ ದೇಹಗಳು! ಅಗಲ ಬಾಯಿ ತೆರೆದಾಗ, ಭಯಂಕರ ಕೋರೆ ಹಲ್ಲುಗಳು!

ಮೊಸಳೆಗಳು ಬೇರೆ! ಗಜೇಂದ್ರನ ಕಾಲು ಹಿಡಿದ ದುಷ್ಟರು, ಜಲದಲ್ಲೂ ನೆಲದಲ್ಲೂ! ದಡದ ಮೇಲಂತೂ, ಹತ್ತಲ್ಲ ನೂರಲ್ಲ, ಸಾವಿರ ಕೂಡ ಅಲ್ಲವೋ ಏನೋ? ನೆಲವೇ ಕಾಣಿಸದು. ಬ್ರಿಟಿಷ್ ಪ್ರಧಾನಿ ಚರ್ಚಿಲ್ ಮಹಾಶಯ ತುಂಬು ಪ್ರಾಯದಲ್ಲಿ ಒಮ್ಮೆ ಇಲ್ಲಿ ಬಂದು, ನಮ್ಮ ಹಾಗೆಯೇ, ದೋಣಿ ಸಂಚಾರ ಮಾಡಿದ್ದನಂತೆ. ಅವನ ಕೈಯಲ್ಲಿ ಬಂದೂಕವಿತ್ತು. ಮೊಸಳೆಯೊಂದನ್ನು ಕೊಲ್ಲಬೇಕೆಂಬ ಕುತೂಹಲ ಕೆರಳಿ "ಢಂ" ಎನಿಸಿದನಂತೆ. ಅವನು ಬರೆಯುತ್ತಾನೆ: "ಆ ಶಬ್ದ ಕೇಳುತ್ತಲೂ, ಮಾಸಿದ ಕಪ್ಪು ಬಣ್ಣದ ಇಡೀ ದಡ, ನದಿಯ ನೀರಿನ ಕಡೆ ಜಾರಿತು. ನನಗೆ ಆಶ್ಚರ್ಯವಾಯಿತು. ಆ ಮೇಲೆ ತಿಳಿಯಿತು. ದಡದಲ್ಲಿ ದಟ್ಟವಾಗಿ ಮಲಗಿದ್ದ ಸಾವಿರಾರು ಮೊಸಳೆಗಳು, ಆ ಶಬ್ದಕ್ಕೆ ಹೆದರಿ, ಪ್ರಾಣ ರಕ್ಷಣೆಗಾಗಿ ನೀರೊಳಕ್ಕೆ ಜಾರಿದ್ದೇ ನಾನು ಕಂಡ ದೃಶ್ಯ, ಎಂಬುದು "ಮೊಸಳೆಗಳ ತೆರೆದ ಬಾಯೊಳಗೆ ಕುಳಿತು ಹಲ್ಲು ಸಂದಿನಿಂದ ಚೂರು ಮೀನುಗಳನ್ನು ತೆಗೆದು ತಿನ್ನುತ್ತಿದ್ದ ಸಣ್ಣ ಹಕ್ಕಿಗಳನ್ನು ನಮಗೆ ತೋರಿಸಿದರು ಬಾಬಾ". ಪರಸ್ಪರ ಸಹಕಾರದಿಂದ, ಸೇವೆ ಎಷ್ಟು ಸರಾಗ!" - ಎಂದು ಅವರು ಬೋಧಿಸಿದರು.

ಬೋಟ್ ಇಳಿದು ಕಾರುಗಳಲ್ಲಿ ಕುಳಿತು, ಮುರ್ಚಿಸನ್ ಜಲಪಾತದ ಕಡೆ, ಕಾಡು ದಾರಿ ಹಿಡಿದೆವು. ದೂರದಲ್ಲಿ ಕಾಡಾನೆ ಹಿಂಡುಗಳು ಕುರಿ ಮಂದೆಗಳಂತೆ ಕಾಣಿಸಿದುವು. ಹತ್ತಿರ ಬಂದಾಗಲೂ ಅವು ಕದಲಲಿಲ್ಲ. ಆಫ್ರಿಕಾ ಖಂಡದ ಆನೆಗಳ ಆಕಾರವೇ ಬೇರೆ. ಹೊಟ್ಟೆ ಸಣ್ಣ, ಕಿವಿ ಇನ್ನೂ ಅಗಲ, ಕುಂಭ ಸ್ಥಳ ಇನ್ನೂ ಹೆಚ್ಚು ಉಬ್ಬು. ಒಂದೊಂದು ಹಿಂಡಿನಲ್ಲೂ ೩೦, ೪೦ - ಆ ಬಾಲ ವೃದ್ಧ ಸಂಸಾರ. ಅವು ಓಡಾಡುವ ಕಡೆ ಒಂದು ಮರವೂ ಉಳಿಯುವಂತಿಲ್ಲ. ಕೊಂಬೆ ಮುರಿದು, ಒರಗಿ ಒರೆಸಿ ಉರುಳಿಸಿ; ಸರ್ವನಾಶ.

ನೋಡನೋಡುತ್ತ ಒಬ್ಬ ಗಜೇಂದ್ರ, ಭಗವಾನ್ ಅವರೇ ಪ್ರತ್ಯಕ್ಷ ಬಂದಿರುವುದನ್ನು ಅರಿತೋ ಏನೋ - ೫೦, ೬೦ ಅಡಿ ಹತ್ತಿರಕ್ಕೆ ಒಬ್ಬನೇ ಮುಂದೆ ಬಂದು, ಕಾರುಗಳ ಸಾಲು ಎದುರು ನಿಂತ. ನಾವೆಲ್ಲ ತಡೆದರೂ, ಬಾಬಾ ತಮ್ಮ ಕಾರಿನ ಬಾಗಿಲು ತೆರೆದು, ಹೊರಗಿಳಿದು ಭಕ್ತನಿಗೆ ದರ್ಶನವಿತ್ತರು. ಅಭಯ ಹಸ್ತವನ್ನೆತ್ತಿ ಬೀಸಿದರು. ಕೆಂಪು ಗೌನನ್ನು ಕಂಡು ರೇಗಿ ಅದು ಮುನ್ನುಗ್ಗಿದರೆ ಗತಿ ಏನು ಎಂದು ಹಲವರು ಹೆದರಿದರು. ಆದರೆ ಕಣ್ಣು ತುಂಬ ಮನ ತುಂಬ ಆ ಮೋಹನ ರೂಪವನ್ನು ಆರೋಗಣೆ ಮಾಡಿ ಆ ಗಜೇಂದ್ರ ಮೆಲ್ಲಗೆ ಹಿಂದಿರುಗಿ, ಹಿಂಡನ್ನು ಸೇರಿದ.

ರಸ್ತೆಯ ಪ್ರತಿ ತಿರುವಿನಲ್ಲೂ ನಮಗೆ ಜಲಪಾತದ "ಭೋರ್" ಕೇಳಿಸುತ್ತಿತ್ತು. ಹೋಗುತ್ತ ಹೋಗುತ್ತ ಅದರ ಅರ್ಭಟ ಹೆಚ್ಚಿತು. ಇದ್ದಕ್ಕಿದ್ದಂತೆ ಎದುರಿಗೇ ಬಂತು. ರಸ್ತೆ

ಪಕ್ಕದಲ್ಲಿ ಆಫ್ರಿಕನರು ಆನಂದಾತಿರೇಕದಿಂದ ಕುಣಿಯುತ್ತಿದ್ದರು. ಒಟ್ಟು ನಾಲ್ಕು ನಿಮಿಷ ಎರಡು ಕಾಲಲ್ಲಿ ನಿಲ್ಲುವ ಆಫ್ರಿಕನ್ ಪ್ರಜೆಯೇ ಇಲ್ಲವೆನ್ನಬಹುದು. ಕುಣಿತವೇ ಅವರ ಕಾಲ ಕ್ರಮ!

ಮುರ್ಚಿಸನ್ ಜಲಪಾತ ಅತೀ ಭಯಂಕರ, ಅತೀ ಮನೋಹರ. ನೈಲ್ ನದಿ ನಾಲ್ಕಾರು ಮೈಲಿ ದೂರ, ಸೋಪಾನಗಳನ್ನಿಳಿದು ಹರಿದು ಬರುತ್ತದೆ! ಬರಬರುತ್ತ, ಸೋಪಾನಗಳ ಅಗಲ ಕಡಿಮೆ ಆಗುತ್ತ, ಕಡೆಗೆ ೧೫ ಅಡಿಯಷ್ಟು ಕಿರಿದಾಗುವುದರಿಂದ, ಇಡೀ ನೈಲ್ ನದಿಯನ್ನು ಒಂದು ಪಿಚಕಾರಿಯಿಂದ ತೂರಿಸಿದ ಹಾಗೆ ಆ ಮಹಾಘೋರ ಪಾತ ಕಂಗೊಳಿಸುತ್ತದೆ. ೧೬೦ ಅಡಿ ಆಳಕ್ಕೆ ಈ ರೀತಿ ನೈಲ್ ನದಿ ಧುಮುಕುವುದರಿಂದ, ಆ ದೃಶ್ಯ ದಿವ್ಯ ಭವ್ಯವಾಗಿದೆ. ನಾವೆಲ್ಲ ಆನಂದ ಪುಲಕಿತರಾದದ್ದನ್ನು ನೋಡಿ ಬಾಬಾ ತುಂಬಾ ಸಂತೋಷಿಸಿದರು. ಜಲಪಾತದ ಹಿನ್ನೆಲೆಯಲ್ಲಿ ಬಾಬಾ ಅವರ ಛಾಯಾ ಚಿತ್ರಗಳು ಹಲವಾರನ್ನು ಡಾ| ಪಟೇಲರೂ ಇತರರೂ ತೆಗೆದು ತೃಪ್ತಿ ಹೊಂದಿದರು. ಬಾಬ್ ರೇಮರ್‌ಗಂತೂ ಎಷ್ಟು ತೆಗೆದರೂ ತೃಪ್ತಿಯೇ ಇಲ್ಲ.

ಅಲ್ಲಿಂದ ಮಸಿಂಡಿಗೆ ಕಾರುಗಳು ನಿಧಾನವಾಗಿ ಬರಬೇಕಾಯಿತು. ಏಕೆಂದರೆ, ಮಳೆಯಿಂದ ರಸ್ತೆಗೆ ಜಿಗುಟು ಬಂದಿತ್ತು. ಆನೆ ಹಿಂಡುಗಳು ಆಗಾಗ ಅಡ್ಡ ಬಂದು ತಡ ಮಾಡಿದವು. ನಾವು ಕಿಕೊಂಡೋ ಗ್ರಾಮ ಸೇರಿದೆವು. ಅಲ್ಲಿ ಭಾರತೀಯರೊಬ್ಬರು ನೀಗ್ರೋ ಶಿಲ್ಪವನ್ನನುಕರಿಸಿ ಸುಂದರವಾದ ಒಂದು ಭಜನೆ ಮಂದಿರವನ್ನು ನಿರ್ಮಿಸಿದರು. ಅದರ ಪ್ರಾರಂಭೋತ್ಸವಕ್ಕಾಗಿ ಬಾಬಾ ಅತ್ತ ತಿರುಗಿದರು. ಭತ್ತದ ಬಯಲುಗಳು, ಬಾಳೆ ತೋಟಗಳು, ಕಬ್ಬಿನ ಗದ್ದೆಗಳನ್ನು ಹಾದು ಕಾರುಗಳು ಧಾವಿಸಿದುವು. ಮಂದಿರದ ತುಂಬ ನೀಗ್ರೋಗಳು ಆಸೀನರಾಗಿದ್ದರು. ಪೂರ್ವ ದಿಕ್ಕಿನಿಂದ ಇಳಿದು ಬಂದ ಸೂರ್ಯದೇವ ಎಂದು ಅವರು ಬಾಬಾ ಅವರನ್ನು ಕೊಂಡಾಡಿದರು. ತಮಗಾಗಿರಿಸಿದ್ದ ಕುರ್ಚಿಯಲ್ಲಿ ಕೂರದೆ, ಬಾಬಾ ಅವರು ಅವರ ಮಧ್ಯೆ ಕುಳಿತು, ಕನಿಕರದಿಂದ ಅವರಿಗೆ ವಿಭೂತಿ ಸೃಷ್ಟಿಸಿ ಕೊಟ್ಟರು; ಹಣ್ಣುಗಳನ್ನು ಹಂಚಿದರು. ಮುಂಡಿಯೂರಿ ಅವರು ಅರ್ಪಿಸಿದ ಸೂಚನೆಗಳನ್ನು ಸಂತೋಷದಿಂದ ಸ್ವೀಕರಿಸಿದರು. "ಸ್ವಧರ್ಮವನ್ನು ಮನುಷ್ಯ ಪ್ರಾಣಿ ಮಾತ್ರ ತ್ಯಜಿಸಿದೆ. ಆದ್ದರಿಂದಲೇ ಇದಕ್ ದುರ್ದಶೆ ಪ್ರಾಪ್ತವಾಗಿದೆ. ಹುಲಿ ಎಂಥ ಕಷ್ಟ ಪರಿಸ್ಥಿತಿಯಲ್ಲೂ ಹುಲ್ಲು ತಿನ್ನುವುದಿಲ್ಲ. ಆ ಎಂಥ ಕ್ಷಾಮ ಕಾಲದಲ್ಲೂ ಮೀನು - ಮಾಂಸ ತಿನ್ನದು. ಆದರೆ ಮನುಷ್ಯ ಮಾತ್ರ, ಹುಲಿಯಂತೆ, ನರಿಯಂತೆ, ತೋಳನಂತೆ ಆಹಾರ ವಿಹಾರಗಳನ್ನಳವಡಿಸಿಕೊಂಡು, ನಾಚಿಗೆ ನೀತಿ ಮರೆಯುತ್ತಿದ್ದಾನೆ" - ಎಂದು ಬಾಬಾ ಅವರಿಗೆ ಹೇಳಿದರು. ಮಾನವನು ತನ್ನಲ್ಲಿನ ದೈವಾಂಶಕ್ಕೆ ತಕ್ಕ ಜೀವನ ಮಾರ್ಗವನ್ನವಲಂಬಿಸಬೇಕೆಂದರು.

ರಾತ್ರಿ ೧ ಗಂಟೆಗೆ ಕಂಪಾಲಾ ಸೇರಿದೆವು. ಆಶ್ಚರ್ಯ! ಡಾ| ಪಟೇಲರ ಮನೆ ಮುಂದಿನ ಚಪ್ಪರದಲ್ಲಿ ಕುಳಿತು ಸಾವಿರಕ್ಕಿಂತ ಅಧಿಕ ಸಂಖ್ಯೆಯ ಆಫ್ರಿಕನರು ಉತ್ಸಾಹದಿಂದ

ಭಜನೆ ಹಾಡುತ್ತಿದ್ದರು. ಹತ್ತು ನಿಮಿಷ ಅವರಿಗೆ 'ದರ್ಶನ' ಕೊಟ್ಟು, ಅನಂತರವೇ ಬಾಬಾ ಬಂಗಲೆಯನ್ನು ಪ್ರವೇಶಿಸಿದ್ದು. ಆ ದಿನ ಆರತಿ ರಾತ್ರಿ ಒಂದೂವರೆ ಗಂಟೆಗೆ!

೧೩ನೆ ತಾ! ಎಲ್ಲರ ಮುಖಗಳೂ ಕಂದಿದ್ದುವು. "ನಾಳೆ ಭಗವಾನರು ಹಿಂತಿರುಗುತ್ತಾರಂತಲ್ಲಾ!" - ಎಂಬುದೇ ಎಲ್ಲರ ಬಾಯಿ ಮಾತು. ಮೌಸಾ, ಡರೆಸ್ಸಿಲಾಂ, ಮೊಂಬಾಸಾ. ಎಲ್‌ಡೊರೆಟ್ ಮುಂತಾದ ನಗರಗಳಿಂದ ತಂಡ ತಂಡವಾಗಿ ಜನ ಬಂದು, ಅವರನ್ನು ತಮ್ಮ ಊರುಗಳಿಗೆ ಆಹ್ವಾನಿಸಿದರು. ಕಂಪಾಲಾ ನಗರದ "ಮೇಯರ್" ಮಹಾಶಯ, ಬಹಳ ಹೊತ್ತು ತರ್ಕ ಮಾಡಿ, ಪ್ರಯಾಣವನ್ನು ಮುಂದೂಡಲು ಯತ್ನಿಸಿದ.

ಬಾಬಾ ಅವರು ಇಲ್ಲದ ಸ್ಥಳವಿಲ್ಲ. ಆದ್ದರಿಂದ ಅವರನ್ನು ಬೀಳ್ಕೊಡುವಂತಿಲ್ಲ, ಸ್ವಾಗತಿಸುವಂತಿಲ್ಲ. ಸರ್ವತಃ ಪಾಣಿ ಪಾದಂ, ಸರ್ವತೋಕ್ಷಿ ಶಿರೋ ಮುಖಂ. ನಂಬಿ ಕರೆದರೆ, ಅಲ್ಲೇ ಪ್ರತ್ಯಕ್ಷ; ಅವರಿಗಾಗಿಯೇ ಅವರ ನಡುವೆ ಅನವರತ ಅವರಿರುವರೆಂಬ ಅರಿವಿಲ್ಲದಿದ್ದರೂ , ಅನಾಥರಿಗೆ ಅವರ ನೆರವು ತಪ್ಪದೇ ಸಿಗುತ್ತದೆ. ಆದರೂ, ಅವರ ಪ್ರತ್ಯಕ್ಷ ದರ್ಶನ, ಮಧುರ ಸಂಭಾಷಣೆ, ಇವುಗಳನ್ನೊಮ್ಮೆ ಸವಿದ ಹೃದಯಕ್ಕೆ, ಮತ್ತೆ ಮತ್ತೆ ಸವಿಯಬೇಕೆಂಬ ತಲ್ಲಣ ಅನಿವಾರ್ಯ. ಅವರ ಲಾಲನೆ ಸಿಗದವರು ತಬ್ಬಲಿಗಳು ಎಂಬ ತಾಪ ನಮ್ಮನ್ನು ಕಾಡುತ್ತದೆ.

೧೪ನೆ ತಾ| ಬಂತೇ ಬಂತು. ಕಂಪಾಲಾ ಇಡೀ ಡಾ| ಪಟೇಲರ ಬಾಗಿಲ ಮುಂದೆ ಖಿನ್ನವದನ ಹೊತ್ತು ಕುಳಿತಿತ್ತು. ಕಾರುಗಳೂ ವಿಮಾನಗಳೂ ದೂರದ ಊರುಗಳಿಂದ (ಜಿಂಜಾ, ಇಂಪಾಲಾ, ಕಾಕಿನಾ, ಇಂಪರಾರೆ. ಇಕಾಮೆ, ಕಪಿಲಾ) ನೂರಾರು ಪ್ರಮುಖರನ್ನು ಸಾಗಿಸಿ ತಂದುವು. "ನನಗೆ ನಿಮ್ಮ ಸ್ತೋತ್ರ ಬೇಕಿಲ್ಲ. ನೀವು ಶರಣಾಗಬೇಕೆಂದು ನಾನು ಹೇಳುವುದಿಲ್ಲ. ಪವಾಡಗಳಿಂದ ನಿಮ್ಮನ್ನು ವಶಪಡಿಸಿಕೊಳ್ಳುವ ಇಚ್ಛೆ ನನಗಿಲ್ಲ. ಶಿಷ್ಯ ಸಂಪಾದನೆಗಾಗಿ ನಾನು ಬಂದಿಲ್ಲ. ನಿಮ್ಮ ಹೃದಯದಲ್ಲಿ ಪ್ರೇಮ ಬೀಜವನ್ನು ಬಿತ್ತಿದ್ದೇನೆ. ಅದನ್ನು ಪೋಷಿಸಿ ಬೆಳೆಸಿ ಆನಂದದಿಂದ ಸುಗ್ಗಿಯನ್ನು ಪಡೆದ ಸುಖ ಶಾಂತಿಗಳನ್ನು ಪಡೆಯಿರಿ" ಎಂದು ಅವರಿಗೆ ಬಾಬಾ ಹೇಳಿದರು.

"ಮತ್ತೊಮ್ಮೆ ಬೇಗ ಬನ್ನಿ" ಎಂದು ಸಾವಿರಾರು ಕಂಠಗಳು ಗದ್ಗದಿಸಿದುವು. ಜನರ ಒತ್ತಡವನ್ನು ನೂಕಿ ತಡೆದು ಪೋಲೀಸಿನವರು ಕೂಡ, ಉಲ್ಲನ್ ಕೋಟುಗಳ ತೋಳುಗಳಿಂದಲೇ ಕಣ್ಣೀರೊರಸಿಕೊಂಡರು. ಅವರನ್ನು ಸಮಾಧಾನ ಪಡಿಸಲು ಭಗವಾನರು ಬೆನ್ನು ತಟ್ಟಿದಾಗ, ಶೋಕ ಉಕ್ಕಿ ಬಂದು ಕೋಡಿ ಹರಿಯಿತು!

೨೦ ಮೈಲಿ ದೂರ, ಕಂಪಾಲಾದಿಂದ ಎನ್‌ಟೆಬ್ಬೆ ವಿಮಾನ ನಿಲ್ದಾಣಕ್ಕೆ, ಆ ದಿನ ಬೆಳಗ್ಗೆ, ಆ ರಸ್ತೆ ಕಂಡಷ್ಟು ಕಾರುಗಳು, ಲಾರಿಗಳು, ಸ್ಕೂಟರುಗಳು, ಸೈಕಲ್‌ಗಳು, ಅದು ಎಂದೂ ಕಂಡಿಲ್ಲ. ನೈರೋಬಿಯಲ್ಲಿ ಬಾಬಾ ಅವರ ಬರವಿಗಾಗಿ ಏರ್ ಇಂಡಿಯಾ ಇಂಟರ್

ನ್ಯಾಷನಲ್ ಬೋಯಿಂಗ್ ವಿಮಾನವೊಂದು ಕಾದಿತ್ತು. ಸಾವಿರಾರು ಜನ ಅವರ ದರ್ಶನಕ್ಕಾಗಿ ಅಲ್ಲಿಯ ನಿಲ್ದಾಣ ಭವನದ ಮೇಲೆ ಬೆಳಗಿನಿಂದಲೂ ಜಾಗ ಹಿಡಿದಿದ್ದರು.

ಆದರೂ ಕಂಪಾಲಾ ನಗರಕ್ಕೆ ಬಾಬಾ ಅವರನ್ನು ಕಳುಹಿಸಲು ಮನ ಬರಲಿಲ್ಲ ! ಕೊಂಚ ದೂರ ಭೂಪಥದ ಮೇಲೆ ಓಡಿದ ನಮ್ಮ ವಿಮಾನ ಯಥಾ ಪ್ರಕಾರ ಹಿಂದಿರುಗಿತು. ಏಕೆ? - ಎಂದು ವಿಚಾರಿಸಿದಾಗ, ಎಲ್ಲೋ ಏನೋ ಎಂಥದ್ದೋ ಒಂದು ಬಗೆಯ ಗಡಗಡ ಸದ್ದು ಚಾಲಕನಿಗೆ ಕೇಳಿ ಬಂತಂತೆ! ಕಂಪಾಲಾ ಪ್ರಜೆಗಳ ಹೃದಯಾವೇದನೆಯ ಮಿಡಿತವೋ ಏನೋ?

ಉಗಾಂಡಾ ದೇಶದ ಬಾವುಟದ ಮೇಲಿನ ಮುದ್ರಾ ವಾಕ್ಯ "ದೇವರಿಗಾಗಿ, ದೇಶಕ್ಕಾಗಿ" ಎಂಬುದೇ! ಅಂಥ ಜನರ ಮೇಲೆ ಭಗವಾನರು ಕರುಣಿಸಿದ್ದರಲ್ಲಿ, ಆಶ್ಚರ್ಯವೇನು?

೨-೩೦ಕ್ಕೆ ನೈರೋಬಿಯಲ್ಲಿ ಇಳಿದೆವಾದರೂ, ಸಾವಿರಾರು ಜನ ಗಂಟೆ ಗಟ್ಟಲೆ ಕಾದಿದ್ದರಾದರೂ, ಹೆಚ್ಚು ಹೊತ್ತು ಅಲ್ಲಿ ನಿಲ್ಲದೆ, ನಾವು ಬೋಯಿಂಗನ್ನು ಆರೋಹಣ ಮಾಡಬೇಕಾಯಿತು. ಇಥಿಯೋಪಿಯಾ ದೇಶವನ್ನು ಹಾದು, ಸೋಮಾಲಿ ರಾಷ್ಟ್ರ ಸುತ್ತಿ, ವಿಮಾನ ಕೆಂಪು ಸಮುದ್ರದ ಕಡೆ ಹಾರಿತು. ನಮ್ಮ ಕಣ್ಣಿಗದೊಂದು ಚಿಕ್ಕ ಕಾಲುವೆ! ಚರಿತ್ರೆಯ ಪ್ರಾಧ್ಯಾಪಕನಾಗಿ ಕಾಲೇಜಲ್ಲಿ ಈ ಪ್ರದೇಶದ ಆಗುಹೋಗುಗಳನ್ನೆಲ್ಲ, ಏರುಬೀಳುಗಳನ್ನೆಲ್ಲ ನಾನು ಬೋಧಿಸಿದ್ದೆನಾದರೂ, ಅಂದೇ ಪ್ರತ್ಯಕ್ಷ ಆ ನೆಲವನ್ನು ಎರಡೂವರೆ ಮೈಲಿ ಎತ್ತರದಿಂದ ಕಂಡದ್ದು. ಶತ ಶತಮಾನಗಳಿಂದಲೂ ಆ ನೆಲವನ್ನು ತೋಯಿಸಿದ ಬೆವರು, ರಕ್ತ, ಕಣ್ಣೀರು, ಇವುಗಳನ್ನು ಲೆಕ್ಕ ಮಾಡುವವರಾರು? ನಾನು ಓದಿ ಓದಿಸಿದ ಚರಿತ್ರೆ, ನರಾಕಾರ ಧರಿಸಿ ಬಂದಿರುವ ಬಾಬಾ ಅವರ ವಿನೋದದ ಲೀಲೆ, ಎಂದು ತೀರ್ಮಾನಿಸಿ ನೆಮ್ಮದಿ ತಾಳಿದೆ.

೫-೧೫ ಏಡನ್‌ನಲ್ಲಿ ವಿಮಾನ ಇಳಿಯಿತು. ಬಾಬಾ ವಿಮಾನದಲ್ಲೇ ಕುಳಿತಿದ್ದರು; ನಿಲ್ದಾಣಕ್ಕೆ ಹೋಗಲಿಲ್ಲ. ಅವರ ಪ್ರಯಾಣದ ವಿಷಯ ಅಲ್ಲಿ ಅಷ್ಟು ಪ್ರಚಾರವಾಗಿರಲಿಲ್ಲ. ಆದರೂ ಅರಬೀ ಜನರೂ, ಹಲವರು ಭಾರತೀಯರೂ ಏಣಿ ಹತ್ತಿ, ಒಳಕ್ಕೆ ತೂರಿ, ಬಾಬಾ ಅವರ ಪಾದಕ್ಕೆ ನಮಸ್ಕರಿಸಿ, ವಿಭೂತಿ ಸ್ವೀಕರಿಸಿ ಕೃತಾರ್ಥರಾದರು.

ಬೊಂಬಾಯಿಗೆ ಇನ್ನೂ ೧೯೦೦ ಮೈಲಿ! ಎರಡು ಗಂಟೆ ೪೦ ನಿಮಿಷಗಳ ಗಗನ ಸಂಚಾರ! ಆದರೂ ನಾವು ಬೊಂಬಾಯಲ್ಲಿಳಿದಾಗ, ಇಂಡಿಯಾ ಗಡಿಯಾರದಂತೆ, ಸಮಯ ೧೨-೧೫! ಯಾವ ವಿಮಾನವೂ ಅಂದಿನವರೆಗೆ ಭಾರತಕ್ಕೆ ತಂದೊಪ್ಪಿಸಿರದ ಅತ್ಯಮೂಲ್ಯ ವಸ್ತುವಾದ ಭಗವದವತಾರವನ್ನು ಹೊತ್ತು ಆ ಬೋಯಿಂಗ್ ಸಂತಾ ಕ್ರೂಜ್ ನಿಲ್ದಾಣ ಸೇರಿ ನಿಂತಾಗ, ಹತ್ತು ಸಾವಿರ ಭಕ್ತರು ಜೈ ಜೈ ಕಾರದಿಂದ ತಮ್ಮ ಆನಂದವನ್ನು ವ್ಯಕ್ತಪಡಿಸಿದರು.

೧೯೫೫ನೆ ತಾ। ಧರ್ಮಕ್ಷೇತ್ರದ ಆವರಣದಲ್ಲಿ ನಡೆದ ಸ್ವಾಗತ ಸಭೆಯಲ್ಲಿ, ಡಾ। ಮುನ್ಷಿ ಅವರ, ಆನಂದ ಭಾಷ್ಪ ಪೂರಿತ ನಯನಗಳೊಂದಿಗೆ ಅಧ್ಯಕ್ಷ ಭಾಷಣ ಮಾಡಿದರು. "ಭಗವಂತನ್ನಲ್ಲಿ ವಿಶ್ವಾಸ ಶೂನ್ಯವಾಗುತ್ತಿದೆ. ಧರ್ಮದ ಮೇಲೆ ಶ್ರದ್ಧೆ ಕಡಿಮೆಯಾಗುತ್ತಿದೆ. ಭಾರತ ಭೂಮಿಯ ಭವಿಷ್ಯ ಎಷ್ಟು ಭೀಕರ ಎಂದು ನಾನು ದುಃಖಿಸುತ್ತಿದ್ದೆ. ಆದರೆ, ಭಗವಾನ್ ಶ್ರೀಸತ್ಯ ಸಾಯಿ ಬಾಬಾ ಅವರನ್ನು ಸಂದರ್ಶಿಸಿದ ನಂತರ, ಲಕ್ಷೋಪಲಕ್ಷ ಜನರ ಹೃದಯಗಳನ್ನು ಅವರು ಪರಿವರ್ತನೆ ಮಾಡುತ್ತಿರುವುದನ್ನು ನೋಡಿದ ನಂತರ, ನನ್ನ ಅಧೈರ್ಯ, ನಿರಾಶೆ, ದುಃಖ ಎಲ್ಲವೂ ಮಾಯವಾಗಿ, ಸಂತೋಷಚಿತ್ತನಾಗಿದ್ದೇನೆ" - ಎಂದರು.

ತಮ್ಮ ಉಪನ್ಯಾಸದಲ್ಲಿ ಬಾಬಾ, "ಮಾನವರೆಲ್ಲರೂ ಸಹೋದರರು. ಅವರ ಮೈಬಣ್ಣ, ಮೆದುಳಿನ ಜಾಣತನ, ಸಂಪಾದನೆಯ ಮಟ್ಟ, ನಡೆ ನುಡಿ ಉಡಿಗೆ ತೊಡಿಗೆಗಳ ರೀತಿ ಎಂಥದ್ದಾದರೂ, ಅವರೆಲ್ಲರೂ ಅಣ್ಣ ತಮ್ಮಂದಿರು. ಕರ್ಣನನ್ನು ಪಾಂಡವರು ಅದೆಷ್ಟು ದ್ವೇಷಿಸಿದರು! ಅವನನ್ನು ಕೊಲ್ಲಲು ಅದೆಷ್ಟು ಹವಣಿಸಿದರು! ಅವನು ಸತ್ತಾಗ ಅದೆಷ್ಟು ಆನಂದಿಸಿದರು! ಅವನು ತಮ್ಮೆಲ್ಲರಿಗೂ ಹಿರಿಯ ಸೋದರ ಎಂದು ತಿಳಿದಾಗ, ತಿಳಿಯದೆ ಮಾಡಿದ ಮಹಾ ಪಾಪಕ್ಕಾಗಿ ಎಷ್ಟು ಮನ ನೊಂದರು!" - ಎಂದು ವಿವರಿಸಿ, ನಿಜಕ್ಕೂ ಎಲ್ಲರೂ ನಿಮ್ಮ ಸೋದರರೇ. ನಿಮಗೆ ಇನ್ನೂ ತಿಳಿಯದು ಅಷ್ಟೆ, ಎಂದು ಉಪದೇಶಿಸಿದರು. "ಮತ್ತೊಬ್ಬನನ್ನು ಸೋಲಿಸಿ ಮೆರೆಯುವುದೆಂದರೆ, ತನ್ನ ಪರಾಜಯವನ್ನು ಕೊಂಡಾಡುವುದೇ!" - ಎಂದು ತಿಳಿಸಿದರು.

"ಆಫ್ರಿಕಾದಲ್ಲಿರುವ ವಿವಿಧ ವಿರೋಧ ಪಂಗಡಗಳಿಗೂ ಬುಡಕಟ್ಟುಗಳಿಗೂ ನಾನು ಇದನ್ನೇ ಹೇಳಿದೆ. ಏಕವೇ ಬಹುವಾಗಿ ತೋರುತ್ತದೆ; ಬಹುವೆಂಬುದು ಬರೀ ತೋರಿಕೆ. ಅದನ್ನು ನಿಜವೆಂದು ನಂಬಿದರೆ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ತಲೆಯೆತ್ತಿ ಜೀವಿತವು ವಿಷಮವಾಗುತ್ತದೆ" - ಎಂದರು.

"ಈ ಪ್ರೇಮ ಸಂದೇಶವನ್ನು ದೇಶದಿಂದ ದೇಶಕ್ಕೆ, ಭೂಖಂಡದಿಂದ ಭೂಖಂಡಕ್ಕೆ ಹರಡುವುದೇ ನನ್ನ ಸಂಕಲ್ಪ, ನನ್ನ ಅವತಾರೋದ್ದೇಶ" - ಎಂದರು ಬಾಬಾ.

ನಾಲ್ಕಾರು ತಿಂಗಳುಗಳ ನಂತರ, ಆಫ್ರಿಕಾದ ಮುಗುಂಡ ಜಾತಿಯವನೊಬ್ಬ ಬಾಬಾ ಅವರಿಗೆ ಪತ್ರ ಬರೆದ "ಬಾಬಾ! ನನ್ನನ್ನು ದುಃಖದಿಂದ ಪಾರು ಮಾಡಿ. ತಾವು ಇಲ್ಲಿಗೆ ಬಂದಿದ್ದಾಗ, ನನ್ನ ಆಪ್ತ ಮಿತ್ರನೊಬ್ಬನಿಗೆ, ತಮ್ಮ ನಿಲುವಂಗಿಯ ಸೆರಗನ್ನು ಮುಟ್ಟುವ ಭಾಗ್ಯವೊದಗಿಸಿದಿರಿ! ಅವನು ಈಗ ನನಗೆ ನೇರವಾಗಿ, ಅಯ್ಯಾ! ಬಾಬಾ ನಿನ್ನನ್ನು ಕಾಪಾಡುತ್ತಾರೆ, ಕೇಳಿಕೊ, ಎಂದು ಹೇಳುತ್ತಿದ್ದಾನೆ" - ಎಂದು. ಮುಕೋನೊ ಎಂಬ ಗ್ರಾಮದಿಂದ ಮತ್ತೊಬ್ಬ ನೀಗ್ರೋ ಭಕ್ತ "ಭಗವಾನ್! ಕೆಡುಕುಂಟುಮಾಡುವವರನ್ನು ಕ್ಷಮಿಸಿ, ಅವರೊಂದಿಗೆ ಬೆರೆತು ಬಾಳಲು ನನಗೆ ಮನೋಬಲವನ್ನು ಕೊಡು!" - ಎಂದು ಬರೆದ.

ಸಿಯರಾ ಲಿಯೋನಿ ಎಂಬ ರಾಜ್ಯದಿಂದ ಮತ್ತೊಬ್ಬ, "ಸ್ವಾಮಿ, ನಾನೊಬ್ಬ ರೋಮನ್ ಕ್ಯಾಥಲಿಕ್ ಪಂಥಕ್ಕೆ ಸೇರಿದ ಕ್ರಿಶ್ಚಿಯನ್. ನಿಮ್ಮ ದಿವ್ಯ ಸೂಕ್ತಿಗಳನ್ನು ನಾನು ಸಣ್ಣ ನೋಟ್ ಬುಕ್ಕೊಂದರಲ್ಲಿ ಪ್ರತ್ಯೇಕ ಬರೆದಿರಿಸಿಕೊಂಡಿದ್ದೇನೆ. ಎದೆಗುಂದಿದಾಗ, ದಿಕ್ಕು ತೋಚದಾಗ, ಆ ಬುಕ್ಕನ್ನು ಬಿಚ್ಚಿ, ಒಂದೆರಡು ಸೂಕ್ತಿಗಳನ್ನು ಮನನ ಮಾಡುತ್ತೇನೆ. ಬೆಳಕು, ಬಲ ಎರಡೂ ನಿಮ್ಮಿಂದ ದೊರೆಯುತ್ತಿದೆ. ನಿಮ್ಮ ಸಂಕಲ್ಪವಿದ್ದರೆ, ಒಮ್ಮೆ ಪ್ರಶಾಂತಿ ನಿಲಯಕ್ಕೆ ಬರಬೇಕೆಂದಿದ್ದೇನೆ. ಅಥವಾ ಬರದೆ ಇದ್ದರೂ, ಭಗವದ್ವಿಶ್ವಾಸವೂ ಭಗವತ್ ಚಿಂತನೆಯೂ ನನ್ನಲ್ಲಿ ಅಭಿವೃದ್ಧಿಯಾಗುವಂತೆ ಅನುಗ್ರಹಿಸಿ" - ಎಂದು ಬರೆದಿದ್ದಾನೆ.

ಬಾಬಾ ಅವರ ದರ್ಶನ ಸ್ಪರ್ಶನದಿಂದಲೂ, ಅವರ ಮಹಿಮೆಯನ್ನರಿತದ್ದರಿಂದಲೂ, ಅವರ ಉಪದೇಶವನ್ನಾಲಿಸಿದ್ದರಿಂದಲೂ, ಸಾಮಾನ್ಯ ಜನರ ಆಶೆ ಆಕಾಂಕ್ಷೆಗಳು ಹೇಗೆ ಪರಿಶುದ್ಧವಾದುವು, ಅವರ ಭಾವನೆಗಳು ಹೇಗೆ ಪುನೀತವಾದುವು ಎಂಬುದನ್ನು ಈ ಉದಾಹರಣೆಗಳಿಂದ ನಾವು ತಿಳಿಯಬಹುದಾಗಿದೆ. ಆ ನಿಲುವಂಗಿ ತಗುಲಿದಾಗ, ಆ ಪಾದಗಳು ಸೋಕಿದಾಗ, ಆ ಕಟಾಕ್ಷಕ್ಕೆ ಗುರಿಯಾದಾಗ, ಅವರು ರಚಿಸಿದ ಗ್ರಂಥ ಅಥವಾ ಅವರನ್ನು ಕುರಿತ ಗ್ರಂಥದಿಂದ ಒಂದು ವಾಕ್ಯವನ್ನೋದಿದಾಗ, ಮಾನವನ ಮನಸ್ಸು ಪುಟವಿರಿಸಿದ ಚಿನ್ನದಂತಾಗುವುದು ನಿಜ.

# ಶಿಕ್ಷೆ ಅಲ್ಲ ಶಿಕ್ಷಣ

ಬೊಂಬಾಯಿಯಿಂದ ಬಾಬಾ ಅನಂತಪುರದ ಮಾರ್ಗವಾಗಿ ಬೆಂಗಳೂರಿಗೆ ಹೊರಟು ಬಿಟ್ಟರು. ಏಕೆಂದರೆ ತಾವು ಕೈಗೊಂಡಿರುವ ಧರ್ಮ ಸಂಸ್ಥಾಪನೆಯ ಅಂಗವಾದ ವಿದ್ಯಾಕ್ಷೇತ್ರ ಪರಿಷ್ಕರಣ ಕಾರ್ಯಕ್ಕೆ ಜೂನ್ ೨೨ ನೆ ತಾ| ಅನಂತಪುರದಲ್ಲಿ ನಾಂದಿ!

ಹೊಸ ವಿಚಾರ ಕ್ರಾಂತಿಯೊಂದು ನೆಲೆಗೊಳ್ಳಬೇಕಾದರೆ, ಹೊಸ ವಿದ್ಯಾ ಕೇಂದ್ರವೊಂದು ಅತ್ಯಗತ್ಯ ಎಂದು ಶ್ರೀ ಅರವಿಂದರು ಹೇಳಿದ್ದುಂಟು. ಈ ಅವತಾರದಲ್ಲಿ ಭಗವಂತ ಶ್ರೀರಾಮನ ಕೋದಂಡವನ್ನು ತೊಟ್ಟು ಬರಲಿಲ್ಲ; ಶ್ರೀ ಕೃಷ್ಣನ ಸುದರ್ಶನ ಚಕ್ರವನ್ನು ಬಿಟ್ಟು ಬಂದಿದ್ದಾನೆ! ಏಕೆಂದರೆ ಶಿಕ್ಷೆಗಿಂತ ಶಿಕ್ಷಣವೇ ಸ್ವಾಮಿ ಆರಿಸಿ ಅಂಗೀಕರಿಸಿರುವ ಆಯುಧ! ಒಳ್ಳೆಯವರನ್ನು ಪ್ರೋತ್ಸಾಹಿಸಿ ಉತ್ತಮಪಡಿಸಿ, ಪುರುಷೋತ್ತಮನ ಸನ್ನಿಧಿ ಸೇರಿಸುತ್ತಾರೆ. ಕೆಟ್ಟವರ (ಅಂದರೆ ನೇರವಾದ ದಾರಿ ತಿಳಿಯದೆ ತತ್ತರಿಸುವವರ) ಬಲಹೀನತೆ, ಹೇಡಿತನ, ಸಂಶಯ ಮುಂತಾದ ಕೊರತೆಗಳನ್ನು ನಿವಾರಿಸಿ, ಅವರನ್ನುದ್ಧಾರ ಮಾಡುತ್ತಾರೆ.

ಈ ಯುಗದ ಅತೀ ದೊಡ್ಡ ಶಿಕ್ಷಕರು ಬಾಬಾ ಎಂದರೆ ತಪ್ಪಾಗಲಾರದು. ಅವರ ವಾಕ್ಕು ಮಂತ್ರ; ವಾಕ್ಯ ಉಪನಿಷದ್. ಅವರ ಉಪದೇಶ ಗೀತೆ; ಅವರ ಗಾನ, ಶ್ರುತಿ, ಅವರೊಂದಿಗೆ ಅರೆಗಳಿಗೆ ಮಾತನಾಡಿದರೆ, ಅದೇ ಒಂದು ತೀರ್ಥಯಾತ್ರೆ. ನಮ್ಮ ಅಂತರಂಗದ ಆನಂದ ತೀರ್ಥಕ್ಕೆ ನಮ್ಮನ್ನೊಯ್ಯುವ ಯಾತ್ರೆ!

ತುಂಟರನ್ನೂ ಕುಂಟರನ್ನೂ, ಶಿಶುಸ್ವಭಾವ ಪಶುಸ್ವಭಾವದವರನ್ನೂ ಬಾಬಾ ತಮ್ಮ ಬೋಧನೆಯಿಂದ ತಿದ್ದುತ್ತಾರೆ. ಆಂಗ್ಲ ಕವಿ ಮಿಲ್ಟನ್ ಪ್ರಲಾಪ ಮಾಡಿ "ಧರ್ಮ ಬೋಧಕರನ್ನು ಕುರುಬರು ಎಂದು ಗೌರವಿಸುವ ಪದ್ಧತಿ ಇದೆ. ಆದರೆ, ಕುರಿಗಳು ಪಾಪ, ತಲೆ ಎತ್ತಿ ನಿಂತಿವೆ. ಗ್ರಾಸ ಮಾತ್ರ ಶೂನ್ಯ". ಆದರೆ ಬಾಬಾ ಸನ್ನಿಧಿಯಲ್ಲಿ ನರರಿಗೆ ಆಧ್ಯಾತ್ಮಿಕ ಆಹಾರ ಅಪಾರ. ಅವು ತಲೆಯೆತ್ತಿ ನಿಲ್ಲಬೇಕಾಗಿಲ್ಲ. ಅವಕ್ಕೆ ಹಸಿವಿನ ಅರಿವೆಯೇ ಇಲ್ಲದಿರಬಹುದು! ಗ್ರಾಸವೆಂದರೇನೆಂದು ಅವಕ್ಕೆ ತಿಳಿಯದಿರಬಹುದು. ಎಲ್ಲಿ ಗ್ರಾಸ ದೊರೆಯುತ್ತದೆ ಎಂಬ ಪರಿಜ್ಞಾನವಿಲ್ಲದಿರಬಹುದು. ಆದರೂ ಬಾಬಾ, ಅವರನ್ನು ಬಳಿಗೆ ಕರೆದು, ಮೃದು ಮಧುರ ಮಾತುಗಳಿಂದ ಮುದ್ದಾಡಿ ಆರೋಗ್ಯಪ್ರದವಾದ ಆಹಾರವನ್ನು ಕೊಟ್ಟು ಸಂತುಷ್ಟಿಪಡಿಸುವರು. ಅದರಿಂದಾಗುವ ಆನಂದ ನಿರ್ಮಲ, ನಿಶ್ಚಲ!

ತಾವು ತಿದ್ದಿ ಸನ್ಮಾರ್ಗದಲ್ಲಿ ನಡೆಸಲು ನಿಶ್ಚಯಿಸಿದ ವ್ಯಕ್ತಿಗಳಿಗೆ ಬಾಬಾ ಪತ್ರ ಬರೆಯುವುದುಂಟು. ಪ್ರೇಮಧಾರೆಯನ್ನು ವರ್ಷಿಸಿ, ಗೆಳೆತನದಿಂದ ಸೆಳೆದು, ಸದ್ಗುರುವಿನಂತೆ ಸಲಹೆ ಇತ್ತು, ಮೂದಲಿಸಿ, ಖಂಡಿಸಿ, ಬಗೆ ಬಗೆಯ ರೀತಿ ನೀತಿಗಳನ್ನು ಅವಲಂಬಿಸಿ,

ಅವರು ಸಾಧಕರನ್ನು ಸಾಕ್ಷಾತ್ಕಾರದ ಕಡೆ, ನಯ ಭಯದಿಂದ ನಡೆಯಿಸುವರು. ಅವರು ಬರೆದಿರುವ ಪ್ರೇಮವಾಹಿನಿ, ಜ್ಞಾನವಾಹಿನಿ, ಪ್ರಶಾಂತಿವಾಹಿನಿ, ಧ್ಯಾನವಾಹಿನಿ, ಧರ್ಮವಾಹಿನಿ, ಸಂದೇಹ ನಿವಾರಣೆ, ಗೀತಾವಾಹಿನಿ, ಭಾಗವತವಾಹಿನಿ ಮುಂತಾದ ದಿವ್ಯ ಗ್ರಂಥಗಳು ಸಾಧಕರಿಗೆ ಕೈದೀವಿಗೆಗಳಾಗಿವೆ. ಶತ ಶತಮಾನಗಳಿಂದಲೂ ಪಾಂಡಿತ್ಯದ ಟೀಕೆಗೂ, ಪಾಮರತ್ವದ ಪೂಜೆಗೂ ಸಿಕ್ಕಿ, ಭಾಗವತ, ಭಾರತ, ರಾಮಾಯಣಗಳು ಈಗ ಜರ್ಝರಿತವಾಗಿ, ಹಲವಾರು ಅರ್ಥ ರಹಿತ ಅಸಭ್ಯ ಉಪಾಖ್ಯಾನಗಳನ್ನೂ ಒಳಗೆ ಸೇರಿಸಿಕೊಂಡು ಅಲ್ಲಲ್ಲಿ ಕಲುಷಿತವಾಗಿವೆ. ಭಾಗವತವಾಹಿನಿ, ರಾಮಕಥಾ ರಸವಾಹಿನಿ ಎಂಬ ತಮ್ಮ ಗ್ರಂಥಗಳ ಮೂಲಕ ಪ್ರಕಾಶಮಾನವಾಗಿ ಒತ್ತಿ ಹೇಳಿ, ಸ್ತ್ರೀ ಪುರುಷರಾದಿಯಾಗಿ ಭಕ್ತಿ ಶ್ರದ್ಧೆಗಳಿಂದ ಮನ ಮೈಲಿಗೆಯಾಗದೆ ಮನನ ಮಾಡಲು ಯೋಗ್ಯವಾಗಿಸಿದ್ದಾರೆ. ಬಾಬಾರವರ ದಿವ್ಯೋಪನ್ಯಾಸಗಳೆಂದರೆ ಎಂಥ ಕುಗ್ರಾಮದಲ್ಲೂ ಹತ್ತಿಪ್ಪತ್ತು ಸಹಸ್ರ ಜನ ಸೇರುತ್ತಾರೆ. ಅವುಗಳನ್ನು ಕೇಳುವ ಪ್ರತಿಯೊಬ್ಬನ ಜೀವನದಲ್ಲೂ, ಆ ಸಂದರ್ಭ ಒಂದು ಹೊಸ ಅಧ್ಯಾಯವನ್ನೇ ಮೊದಲು ಮಾಡುತ್ತದೆ. ಹೃದಯದಿಂದ ಹೃದಯಕ್ಕೆ ಪ್ರೇಮ ರಸವನ್ನು ತುಂಬುವ ಸದವಕಾಶ ಅದು!

ನಾವು ನಿದ್ದೆ ಮಾಡುವಾಗಲೂ ಬಾಬಾ ನಮಗೆ ಬುದ್ಧಿ ಹೇಳುವರು. ರಮಣಾಶ್ರಮದಲ್ಲಿ ಬಾಗಿಲಿನ ಅಗಳಿ ಹಾಕಿಕೊಂಡು ಮಲಗಿದ್ದ ಸ್ವಾಮಿ ಅಭೇದಾನಂದರ ತಲೆಗೊಂದು ಏಟು ಹೊಡೆದು ಅವರನ್ನೆಬ್ಬಿಸಿದರು! ೭೬ ವಯಸ್ಸಿನ ಆ ವೃದ್ಧ ಸನ್ಯಾಸಿ ಎದ್ದು ಕುಳಿತು, ದೀಪ ಬೆಳಗಿಸಿ, ಚಕಿತರಾಗಿ ಕಣ್ಣೊರಸಿಕೊಂಡರು. ಆಗ ಅವರೆದುರು ಭಗವಾನ್ ರಮಣ ಮಹರ್ಷಿ ಕಾಣಿಸಿದರು. ಅವರ ಪಕ್ಕದಲ್ಲೇ ಬಾಬಾ ಅವರೂ ಪ್ರತ್ಯಕ್ಷ! ಕೂಡಲೇ ಇಬ್ಬರೂ ಮರೆಯಾದರು. ಅವರಿದ್ದ ಕಡೆ ಒಂದು ಜ್ಯೋತಿಸ್ತಂಭ ಮಾತ್ರ ಪ್ರಜ್ವಲಿಸಿತು. ಆ ಸ್ತಂಭದೊಳಗಿಂದ ಬಾಬಾ ಅವರ ತೆಲುಗುವಾಣಿ ಅಭೇದಾನಂದರಿಗೆ ಐದಾರು ನಿಮಿಷಗಳ ಕಾಲ ಅಮೂಲ್ಯ ಸಂದೇಶವನ್ನಿತ್ತು, ಅವರನ್ನು ಪೀಡಿಸುತ್ತಿದ್ದ ಸಂದೇಹಗಳನ್ನೆಲ್ಲ ಪರಿಹಾರ ಮಾಡಿತು! ಇದನ್ನು ಅವರೇ ಒಂದು ಲೇಖನದಲ್ಲಿ ವಿವರಿಸಿದ್ದಾರೆ.

ಕನಸಿನಲ್ಲೂ ಕಾಣಿಸಿಕೊಳ್ಳುತ್ತಾರೆ; ಬಾಬಾ! ಧ್ಯಾನ ನಿರತರಾದ ಒಬ್ಬ ಸಾಧಕಗೆ, "ವಿಶುದ್ಧ ಚಕ್ರದಲ್ಲಿ ನಿಲ್ಲಿಸು" - ಎಂದು ಉಪದೇಶಿಸಿದರು. ದೇವೀ ಭಾಗವತ ಪಾರಾಯಣ ಮಾಡುತ್ತಿದ್ದ ಮತ್ತೊಬ್ಬರಿಗೆ, "ಮಹಾನ್ಯಾಸವನ್ನು ಓದು" - ಎಂದು ಆಜ್ಞಾಪಿಸಿದರು. ಬಾಬಾ ಸ್ಪಷ್ಟ ಪ್ರತ್ಯಕ್ಷವಾಗಿ, ಈ ರೀತಿ ಸ್ವಪ್ನ ಸಮಯದಲ್ಲಿ ಉಪದೇಶ ಕೊಡುವ ಉದಾಹರಣೆಗಳು ಬಹಳ. ಆಗ ತಮಗೆ ದೊರೆತ ವಾಗ್ರತ್ನಗಳನ್ನು ಒಬ್ಬ ಭಕ್ತ ತನಗೆ ಎಚ್ಚರವಾದ ಕೂಡಲೇ ಬರೆದಿರಿಸಿ ಕೊಂಡಿದ್ದಾನೆ. ಕೆಲವು ವಾಕ್ಯಗಳನ್ನು ಗಮನಿಸಿ: "ಭಯದಿಂದ ಬಿಡುಗಡೆಯಾದರೆ ಸಾಲದು; ಆಸೆಯಿಂದಲೂ ಬಿಡುಗಡೆ ಹೊಂದಬೇಕು; ಆಸೆಯಿಂದ ಬಿಡುಗಡೆಯಾದರೆ ಸಾಲದು; ನಿರೀಕ್ಷಣೆಯಿಂದಲೂ ಬಿಡುಗಡೆ ಪಡೆಯಬೇಕು" "ನಾನು ಸರ್ವಜ್ಞ ಎಂದು ನಂಬಿ,

ಚಿಂತೆಯಿಂದ ಪಾರಾಗು! ನಾನೆಂದೂ ದಾರಿ ತಪ್ಪಿಸುವುದಿಲ್ಲ" "ನನ್ನದು ನಿಶ್ಚಯಕ್ಕೊಳಗಾಗ್ದ ಸ್ವಭಾವ! ಅದಕ್ಕಾಗಿಯೇ ನನ್ನನ್ನು ಆಧರಿಸು! ನಾನೇನು ಮಾಡುವೆ, ಯಾವಾಗ ಎಲ್ಲಿರುವೆ ಎಂಬುದನ್ನು ನಿರ್ಣಯ ಮಾಡಲು ಸಾಧ್ಯವಿಲ್ಲ. ಅದೇ ನನ್ನ ಮನಮೋಹಕ ಗುಣ! ನನ್ನ ಸಂಕಲ್ಪವೇ ಈ ರೀತಿ". "ಸುಮ್ಮನಿರು! ತಳಮಳಗೊಳ್ಳದಿರು ! ನನ್ನನ್ನರಿತುಕೊಳ್ಳಲು ತವಕಪಡದಿರು. ತೊಳಲಬೇಡ; ಅವರಿವರನ್ನು ಪ್ರಶ್ನಿಸಬೇಡ. ತಿಳಿದುಕೊಳ್ಳುವುದೇತಕ್ಕೆ! ತಿಳಿಯುವುದೇನನ್ನು? ನೀನೇ ತಿಳಿವು". "ಜಾಗೃತ್ತಿಗೂ ಸುಷುಪ್ತಿಗೂ ನಡುವಣ ನಿಮಿಷಗಳು. ಅಹಂ ಎಂಬುದು ಉಂಟು - ಇಲ್ಲ ಎಂಬ ಸಂದಿಗ್ಧ ಭಾವ - ಅದನ್ನಳವಡಿಸಿಕೊಂಡು ಧ್ಯಾನ ಮಗ್ನನಾಗು"

ಕನಸಿನಲ್ಲಿ ದರ್ಶನ ಸ್ಪರ್ಶನ ಸಂಭಾಷಣೆಗಳ ಅವಕಾಶವನ್ನೊದಗಿಸಿ, ಬಾಬಾ ಅನೇಕರಿಗೆ ಭಜನೆ ಹಾಡುಗಳನ್ನು ಕಲಿಸಿದ್ದಾರೆ; ದುಸ್ಸಂಗವನ್ನು ಬಿಡುವಂತೆ ಅಪ್ಪಣೆ ಮಾಡಿದ್ದಾರೆ. ತಿರುನೆಲ್ವೇಲಿಯಲ್ಲಿನ ಒಬ್ಬ ಸಾಧು ಬ್ರಾಹ್ಮಣ ಆಸ್ತಿ ಪಾಸ್ತಿಗಳ ಸಂಪಾದನೆ ಸಂಗೋಪನಗಳಿಗಾಗಿ, ಸಿವಿಲ್ ಕೋರ್ಟುಗಳಲ್ಲಿ ದಾವಾ ಹಾಕಿ, ವರ್ಷಾನುಗಟ್ಟಲೆ ನ್ಯಾಯಾಲಯದ ಮೆಟ್ಟಲುಗಳನ್ನು ಸವೆಸುತ್ತಿದ್ದ. ಆತನ ಕನಸಿನಲ್ಲಿ ಬಾಬಾ ಕಾಣಿಸಿಕೊಂಡು, ಅಯ್ಯೊ! ಪ್ರಾಣೀ! ಅಧಿಕ ಕೂಡಿ ಬರುತ್ತದೆ ಅಂತ ಇದ್ದದ್ದನ್ನೆಲ್ಲ ಕಳೆದುಕೊಳ್ಳುತ್ತಾ ಇದ್ದೀಯಲ್ಲೋ! PROPERTIES ಅಂಬೋದು PROPER-TIES ಅಲ್ಲ, ನೆನಪಿರಲಿ. ಉತ್ತಮ TIES ಎಂದರೆ, ನಿನಗೂ ನನಗೂ ಇರುವ ಬಂಧ" - ಎಂದರಂತೆ; ಆತ ನನಗೆ ಪತ್ರ ಬರೆದಿದ್ದ. ಶಿಕ್ಷಕನಾಗಿ ಬೋಧಕನಾಗಿ ಬಂದಿರುವ ಭಗವಂತ ಸದಾ ಸರ್ವತ್ರ ಈ ಉದ್ಧಾರ ಕಾರ್ಯವನ್ನು ಮಾಡುತ್ತಲೇ ಇದ್ದಾನೆ.

ಎಲ್ಲಾದರೂ ಸರಿಯೆ, ಭಾಷಣ ಪ್ರಾರಂಭಿಸುವ ಮೊದಲು ಅವರು ಸಭಿಕರನ್ನು, "ದಿವ್ಯಾತ್ಮ ಸ್ವರೂಪರೇ!" ಅಥವಾ 'ಪವಿತ್ರಾತ್ಮ ಸ್ವರೂಪರೇ' ಅಥವಾ 'ಪ್ರೇಮ ಸ್ವರೂಪರೇ' ಎಂದು ಸಂಬೋಧಿಸುವರು. ನಾವೆಲ್ಲರೂ ನಮ್ಮನ್ನು ನಾವು ಅವಿನಾಶಿಯಾದ ಆತ್ಮ ಸ್ವರೂಪವೆಂದು ತಿಳಿದುಕೊಳ್ಳಬೇಕೆಂಬುದೇ ಅವರ ಗುರಿ. ಅದೇ ಅಲ್ಲವೆ ಭಕ್ತಿಯ ಲಕ್ಷಣ ಕೂಡ? ಶಂಕರಾಚಾರ್ಯರು, "ಸ್ವಸ್ವರೂಪಾನುಸಂಧಾನಂದ ಭಕ್ತಿರಿತ್ಯಭಿಧೀಯತೆ" - ಎಂದು ಹೇಳಿದ್ದಾರೆ.

"ತನ್ನ ಸತ್ಯ ಸ್ವರೂಪವನ್ನು ಪ್ರತಿ ಒಬ್ಬನೂ ತಿಳಿದುಕೊಳ್ಳಬೇಕು; ಈ ಪವಿತ್ರ ಕಾರ್ಯದಲ್ಲಿ ಎಲ್ಲರೂ ತೊಡಗಬೇಕು. ಕುರುಕ್ಷೇತ್ರದಲ್ಲಿ ಶ್ರೀಕೃಷ್ಣ ಅರ್ಜುನನಿಗೆ ತಿಳಿಸಿದಂತೆ ಗುರು ಎಂದೆನಿಸಿಕೊಂಡವರೆಲ್ಲರೂ, ಗೆಳೆಯರೆಂದೆನಿಸಿಕೊಂಡವರೆಲ್ಲರೂ, ಆತನನ್ನು ಕುರಿತು ಉಪದೇಶಿಸಬೇಕು. ಹಾಗೆ ಮಾಡಿದರೆ, "ನಷ್ಟೋ ಮೋಹಃ! ಸ್ಮೃತಿರ್ಲಬ್ಧಾ" - ಎಂದು ಪ್ರತಿಯೊಬ್ಬರೂ ಆನಂದಪಡುತ್ತಾರೆ, ಅಜೇಯರಾಗುತ್ತಾರೆ" - ಎಂದು ಹುರಿದುಂಬಿಸುತ್ತಾರೆ.

ಇಂತಹ ಪ್ರಬೋಧನಾ ಕಾರ್ಯಕ್ರಮಕ್ಕಾಗಿ, ಸಾಧಕರಲ್ಲಿ ಬಾಬಾ ವಿವಿಧ ಹಂತಗಳ ವ್ಯವಸ್ಥೆ ಮಾಡಿದ್ದಾರೆ. ೮-೧೦ ವಯಸ್ಸಿನವರೆಗೂ ಶಿಶುಗಳನ್ನು "ಬಾಲ ವಿಕಾಸ" ತರಗತಿಗಳಿಗೆ ಸೇರಿಸಿ, ತಾಯಂದಿರು, ಐತಿಹಾಸಿಕ ಕಥೆಗಳು, ಗೀತಾ ಶ್ಲೋಕಗಳು, ಸುಲಭ ಶೈಲಿಯ ಸ್ತೋತ್ರಗಳು, ಆಟಪಾಟಗಳು ಇತ್ಯಾದಿಯಿಂದ ಅವರಲ್ಲಿ ಭಗವತ್ ಪ್ರೇಮವನ್ನು ತುಂಬುತ್ತಿದ್ದಾರೆ. ಈ ಕೆಲಸದಿಂದ ಬಾಲಕರಿಗೆ ವಿಹಾರಕ್ಕಿಂತ ವಿಕಾಸವೇ ಲಭಿಸಬೇಕೆಂಬ ಗುರಿಯನ್ನು ಗುರುಗಳೆದುರು ಹಿಡಿಯುವ ಸಲುವಾಗಿ, ಬಾಲವಿಕಾಸ ಎಂಬ ನಾಮಧೇಯವನ್ನು ಹಚ್ಚಿದ್ದಾರೆ. ಆಂಗ್ಲ ಭಾಷೆಯನ್ನು ಕಲಿಯುತ್ತಾ ಕಲಿಯುತ್ತಾ, ಆಂಗ್ಲ ಸಂಸ್ಕೃತಿ, ಆಂಗ್ಲ ಸಂಪ್ರದಾಯಗಳೂ ಅಮೇರಿಕಾ ಭ್ರಮೆಯೂ ಅಂತರಂಗವನ್ನು ಪ್ರವೇಶಿಸುವುದು ಸಹಜ. ಮಾತಿನಲ್ಲಿ ಅಂಥ ಮಾಟ ಉಂಟು! A ಅಂದರೆ ಆಪ್ಪಲ್ ಎಂಬುದಕ್ಕಿಂತ, A ಅಂದರೆ ಅರ್ಜುನ, ಎಂದು ಕಲಿತ ಮಗು ಭಾರತೀಯ ಪ್ರಜೆಯಾಗಿ, ಈ ಮಣ್ಣಿನಲ್ಲೇ ಬೇರು ಬಿಟ್ಟು ಬೆಳೆಯುತ್ತದೆಯಲ್ಲವೆ?

೧೦ ರಿಂದ ೧೫ ವಯಸ್ಸಿನ ವರೆಗಿನ ಹುಡುಗ ಹುಡುಗಿಯರನ್ನು ದಳಗಳಲ್ಲಿ ದಾಖಲೆ ಮಾಡಿ, ಅವರಿಗೆ ಧ್ಯಾನ ಪದ್ಧತಿ, ಪ್ರಥಮ ಚಿಕಿತ್ಸೆ, ನಾಟಕಾಭಿನಯ, ಭಜನೆ ನಾಮ ಸಂಕೀರ್ತನ ಮುಂತಾದುವನ್ನು ಕಲಿಸಿ, ಬಾಬಾ ಅವರು ಸುರಸವಾಗಿ ಹೇಳುವ ಕಥೆಗಳನ್ನೂ, ಸುಲಭ ರೀತಿಯಲ್ಲಿ ವ್ಯಾಖ್ಯಾನಿಸುವ ಉದಾಹರಣೆಗಳನ್ನೂ ಕಲಿತು, ಹತ್ತು ಜನರೆದುರು ಹೇಳುವಂತೆ ಪ್ರೋತ್ಸಾಹಿಸಿ, ಮಾತಾಪಿತೃಸೇವೆಯಲ್ಲಿ ಆಸಕ್ತಿ, ಹಿರಿಯರಲ್ಲಿ ಪೂಜ್ಯ ಭಾವಗಳ ಅಭಿವೃದ್ಧಿ ಇತ್ಯಾದಿಯಾಗಿ ನಿಯಮಿಸುವರು.

೧೫-೧೮ ವರ್ಷದ ಯುವಕ ಯುವತಿಯರನ್ನು ಶ್ರೀ ಸತ್ಯಸಾಯಿ ಸೇವಾದಳಗಳಲ್ಲಿ ಸೇರಿಸಿ, ಅನೇಕ ಸೇವಾಕಾರ್ಯಗಳಲ್ಲಿ ದೀರ್ಘವಾದ ತರಬೇತಿ ಕೊಟ್ಟು, ಅವರಿಂದ ಕಾರಾಗೃಹಗಳಲ್ಲಿನ ಖೈದಿಗಳಿಗೂ, ರಿಮಾಂಡ್ ಹೋಂಗಳಲ್ಲಿನ ಬಾಲ ಬಾಲಿಕೆಯರಿಗೂ, ಅನಾಥ ಶಿಶು ಸಂರಕ್ಷಣಾ ಕೇಂದ್ರಗಳ ಮಕ್ಕಳಿಗೂ, ಆಸ್ಪತ್ರೆಗಳಲ್ಲಿನ ರೋಗಿಗಳಿಗೂ ಹಾರ್ದಿಕವಾದ, ಪ್ರೇಮ ಪೂರಿತವಾದ ಸೇವೆ ಸಲ್ಲಿಸುವಂತೆ ವ್ಯವಸ್ಥೆ ಮಾಡಿದ್ದಾರೆ. ಪ್ರಥಮ ಚಿಕಿತ್ಸೆಯಲ್ಲಿ ತರಬೇತಿ ಹೊಂದಿ, ರಕ್ತದಾನದಲ್ಲಿ ನಿರತರಾಗಿ, ಗೀತಾ ಶಾಸ್ತ್ರವನ್ನು ಪಠಿಸಿ, ಜಪಧ್ಯಾನಗಳನ್ನಭ್ಯಾಸ ಮಾಡಿ, ಅವರು ಆದರ್ಶ ನಾಗರಿಕರಾಗಿ ಕಂಗೊಳಿಸುತ್ತಿದ್ದಾರೆ. ಪ್ರಾಪ್ತ ವಯಸ್ಕರು ಸಾವಿರಾರು ಗ್ರಾಮಗಳಲ್ಲೂ ಪಟ್ಟಣಗಳಲ್ಲೂ ಸೇವಾ ಸಮಿತಿಗಳನ್ನು ರೂಪಿಸಿ, ಮಹಿಳಾ ವಿಭಾಗಗಳನ್ನು ನಡೆಸಿ, ವ್ಯಾಸಂಗ ಗೋಷ್ಠಿ, ಭಜನೆ ಮಂಡಲಿ ಮುಂತಾದ ಕಾರ್ಯಕ್ರಮಗಳನ್ನು ಎಡೆಬಿಡದೆ ಆಚರಿಸುತ್ತಿದ್ದಾರೆ. ಹೀಗೆ ಬಾಬಾ ಅವರ ಅವಿಶ್ರಾಂತ ನೇತೃತ್ವದಲ್ಲಿ, ಲಕ್ಷಾಂತರ ಬಾಲ ಬಾಲಿಕೆಯರೂ, ಯುವಕ ಯುವತಿಯರೂ, ವಯಸ್ಕರು ವೃದ್ಧರೂ ದೇಶದ ಪ್ರಜೆಗಳಾಗಿ, ಜಾತಿ, ಮತ, ಕುಲ, ಆರ್ಥಿಕ ಭೇದಗಳನ್ನು ಪರಿಗಣಿಸದೆ, ಪ್ರೇಮದಿಂದ ಮುನ್ನಡೆಯುತ್ತಿದ್ದಾರೆ.

ಸತ್ಯವನ್ನು ಸ್ಥಾಪಿಸಿ, ಅಸತ್ಯವನ್ನು ನಿರ್ಮೂಲ ಮಾಡಿ, ಜನಮನದಲ್ಲೂ, ಜನರ ಕೆಲಸ ಕಾರ್ಯಗಳಲ್ಲೂ ಧರ್ಮವನ್ನು ತುಂಬುವುದೇ ತಮ್ಮ ಅವತಾರೋದ್ದೇಶವೆಂದು ಬಾಬಾ ಹೇಳಿದ್ದಾರೆ. "ಸತ್ಯಸಾಯಿ ಸೇವಾ ಸಂಸ್ಥೆಗಳು ದೃಷ್ಟಿಯನ್ನು ವಿಶಾಲಗೊಳಿಸಬೇಕು. ಸರ್ವರೂ ಆತ್ಮ ಸ್ವರೂಪವೆಂಬುದನ್ನು ನಿಮಗೆ ತಿಳಿಸಿ, ಮಾನವನ ಸೇವೆಯೇ ಮಾಧವ ಪೂಜೆ ಎಂಬುದನ್ನು ನಿಮ್ಮ ಗಮನಕ್ಕೆ ಸದಾ ತರಬೇಕು. ಈ ಸಂಸ್ಥೆ ಅಹಂಕಾರ ಆಡಂಬರಗಳಿಗೆ ಆಶ್ರಯ ಕೊಡಬಾರದು. 'ಶಿಷ್ಯ ಸಂಪಾದನೆ' ಅದರ ಉದ್ದೇಶವಲ್ಲ. ಹಣ ಶೇಖರಣೆಯ ಸೋಂಕು ಅದಕ್ಕೆ ತಗುಲಬಾರದು, ಸತ್ಯಸಾಯಿ ಪಂಥ ಎಂಬ ಹೊಸದೊಂದನ್ನು ಬೆಳೆಸಬಾರದು. ಎಲ್ಲರಲ್ಲೂ ಸಾರಥಿಯಾಗಿರುವ ಪರಮಾತ್ಮನನ್ನು ತಾವೂ ಗುರುತಿಸಿ, ಇತರರಿಗೆ 'ಗುರುತಿಸುವ ಬಗೆ'ಯನ್ನು ತಿಳಿಸುವುದೇ ಸಂಸ್ಥೆಯ ಸಾರ್ಥಕತೆ" - ಎಂದರು ಬಾಬಾ.

"ವಿದ್ಯಾ ದಧಾತಿ ವಿನಯ". ಏನೂ ತಿಳಿಯದೆಂದು ಜ್ಞಾನಿ ತಲೆ ತಗ್ಗಿಸುತ್ತಾನೆ : ಎಲ್ಲ ತಿಳಿದಿದೆ ಎಂದು ಮೂರ್ಖ ತಲೆ ಎತ್ತುತ್ತಾನೆ. "ಪಂಡಿತಾಃ ಸಮದರ್ಶಿನಃ" - ಎಂದು ನಮಗೆ ನೆನಪು ಕೊಟ್ಟು, ಬಾಬಾ ಹೇಳುತ್ತಾರೆ. "ಶಾಲಾ ಕಾಲೇಜುಗಳಲ್ಲಿನ ಪಂಡಿತರನ್ನು ನೋಡಿ. ವಿಶ್ವ ವಿದ್ಯಾಲಯಗಳಲ್ಲಿನ ಪಂಡಿತರ ನಡೆನುಡಿಗಳನ್ನು ನೋಡಿ. ಸಮದೃಷ್ಟಿ ಸರ್ವಶೂನ್ಯ.".

"ಸಮರಸವೇ ಜೀವನ". ಆದರೆ, "ವಿದ್ಯಾವಂತ"ರಲ್ಲೇ "ಸಮರ ರಸ ಜೀವನ"ವಾಗಿ ಅಶಾಂತಿಯನ್ನು ಅಭಿವೃದ್ಧಿ ಮಾಡುತ್ತಿದೆ. ನಾಲ್ಕಕ್ಷರ ಓದಿದರಾಯಿತು. ಅವನು ಇತರರ ಶೋಷಣೆಗೆ ಹೊರಡುತ್ತಾನೆಯೇ ಹೊರತು, ಪೋಷಣೆಗೆ ಪ್ರಯತ್ನಿಸುವುದಿಲ್ಲ ಎನ್ನುತ್ತಾರೆ, ಬಾಬಾ. ಸರಸ್ವತೀ ಕ್ಷೇತ್ರವಾದ ಶಾಲಾ ಕಾಲೇಜುಗಳು ಲಕ್ಷ್ಮೀ ಕ್ಷೇತ್ರಗಳಾಗಿ ಮಾರ್ಪಟ್ಟು, ಸುಲಿಗೆಯ ಬೆಳವಣಿಗೆಗೆ ಆಸ್ಪದ ಕೊಡುತ್ತಿವೆ. ಸೇರಲು ಹಣ, ಕೂರಲು ಹಣ, ಏರಲು ಹಣ. ಹಣದಿಂದಲೇ ಗುಣದ ಅಳತೆ; ಹಣದಿಂದಲೇ ಗಣ್ಯತೆ, ಪದವಿ, ಮನ್ನಣೆ ಎಂಬ ಶೋಚನೀಯ ಪರಿಸ್ಥಿತಿ ದಿನ ದಿನಕ್ಕೂ ಪ್ರವರ್ಧಮಾನವಾಗುತ್ತಿರುವುದನ್ನು ಗಮನಿಸಿ, ಬಾಬಾ ಅವರು ಪ್ರತಿ ಪ್ರಾಂತದಲ್ಲೂ ಶಾಲಾ ಕಾಲೇಜುಗಳನ್ನು ತಾವೇ ಸ್ಥಾಪಿಸಿ, ತೀವ್ರ ವೇಗದಿಂದ ದೇಶದ ಯುವ ಜನಾಂಗವನ್ನು, ಅಸತ್ಯ ಅನ್ಯಾಯ ಅಕ್ರಮ ಆಡಂಬರ ಅನೀತಿಗಳ ದುರಂತ ದುರ್ಮಾರ್ಗಗಳಿಗೆ ಸೆಳೆಯುತ್ತಿರುವ ಶಿಕ್ಷಣ ಕ್ರಮದಿಂದ ಪಾರು ಮಾಡಬೇಕೆಂದು ನಿರ್ಧರಿಸಿದರು. ಧರ್ಮ ಸಂಸ್ಥಾಪನೆ ಇದೂ ಒಂದು ಸೋಪಾನ.

ಸಹನಾವತು (ಉಪಾಧ್ಯಾಯನಾದ ನಾನೂ ಶಿಷ್ಯನಾದ ನೀನೂ ಒಟ್ಟಿಗೆ ಬಾಳೋಣ). ಸಹವೀರ್ಯಂ ಕರವಾವಹೈ (ಶಿಷ್ಯನಿಗೆ ವಿದ್ಯೆ ಕಲಿಸುವುದರಿಂದ ಉಪಾಧ್ಯಾಯನ ವಿದ್ಯೆಯೂ ತೊಳಗಿ ಬೆಳಗಲಿ), ಮಾವಿದ್ವಿಷಾವ ಹೈ (ನಮ್ಮಿಬ್ಬರ ನಡುವೆ ದ್ವೇಷ ಬೆಳೆಯದಿರಲಿ. ವಿನಯ ಗೌರವ ನಮ್ರತೆ ಅದರ ಇವುಗಳು ನಮ್ಮನ್ನು ಪರಸ್ಪರ ಬಂಧಿಸಿ ಪಾವನ ಮಾಡಲಿ).

ಎಂಬುದು ಉಪನಿಷತ್ಕಾಲದ ಭಾರತದಲ್ಲಿ, ಶತ ಶತಮಾನಗಳಿಂದ ಬೆಳೆದು ಬಂದ, ಶಾಲಾ ವಾತಾವರಣದಲ್ಲಿನ ಆದರ್ಶ.

ಆದರೆ ಇಂದು ಬೋಧೆಗಿಂತ ಬಾಧೆ, ಗೌರವಕ್ಕಂತ ಕೌರವವೇ ವಿದ್ಯಾ ಕ್ಷೇತ್ರಗಳ ವಾತಾವರಣದಲ್ಲಿ! ಉಪಾಧ್ಯಾಯರನ್ನು ಆದರಿಸುವುದು ಹೋಗಿ, ಹೆದರಿಸುವುದೇ ರೂಢಿಯಾಗಿದೆ. ಉಪಾಧ್ಯಾಯರಿಗೆ ಕಲಿಸುವುದಕ್ಕಂತ ಗಳಿಸುವುದರಲ್ಲೇ ಆಸಕ್ತಿ! ಮತ್ತೆ ಅವರಿಗೆ ಎಂಥ ಪೂಜೆ ಸಲ್ಲಬೇಕು? ಮಾತೃ ದೇವೋಭವ ಎಂದರು ಹಿರಿಯರು; ಹಳೆ ಕಂದಾಚಾರದ ಮೂಟೆ ಆಕೆ ಎಂದರು ಕಿರಿಯರು. ಪಿತೃ ದೇವೋಭವ ಎಂದರು ಋಷಿಗಳು, ಅಪ್ಪನೇ ಮಗನಿಗೆ ಹೆಂಡ ಕುಡಿಸುತ್ತಿರುವಾಗ, ಸುಳ್ಳು ಕಲಿಸುತ್ತಿರುವಾಗ, ಯಾರು ದೇವರು, ಯಾವುದು ದೈವ? ಆಚಾರ್ಯ ದೇವೋಭವ ಎಂದರು ತತ್ವವೇತ್ತರು. ಆರಾಧನೆಗರ್ಹರಾದ ಆಚಾರ್ಯರೇ ಇಲ್ಲವಾಗಿದೆ ಇಂದು. ಧರ್ಮಂ ಚರ. ಎಂಬುದು ಧರ್ಮಂ ಹರ ಎಂದಾಗಿದೆ. 'ಸತ್ಯಂ ವದ' ಎಂಬ ಉಪದೇಶ ' ಸತ್ಯಂ ವಧ' ಎಂದು ಹೊಸ ರೂಪ ತಾಳಿದೆ. ಇದನ್ನು ಕಂಡು ಬಾಬಾ ಹೇಗೆ ಸುಮ್ಮನಿದ್ದಾರು?

ಎಲ್ಲಿಗೋ ಹೊರಟು ಎಲ್ಲೋ ಸೇರುತ್ತಿರುವ ಯುವಜನಾಂಗಕ್ಕೆ ಸುಗಮವಾದ ದಾರಿ ತೋರಿಸಲು ಬಾಬಾ ನಿಶ್ಚಯಿಸಿದರು. ಯುವಕರು ಬೆಳೆಯುವ ವಾತಾವರಣ ಕಲುಷಿತ! ಅವರು ಬಾಳಬೇಕಾದ ಜಗತ್ತು ಭಯಂಕರ. ಅವರಿಗೆ ಬೋಧೆ ಮಾಡುವ ಜನ ಕಪಟ ಕುಟಿಲತೆಗಳಿಂದ, ದುರಾಶೆ ದುಷ್ಟತನಗಳಿಂದ, ಸತ್ಯ ಧರ್ಮ ಶಾಂತಿ ಪ್ರೇಮಗಳಿಗೆ ದೂರಸ್ಥರು. ಅವರನ್ನು ಸೆಳೆದು ಆಕರ್ಷಿಸುತ್ತಿರುವ ಸುಖಭೋಗಗಳು ವಿಷಮಯ, ವಿನಾಶಕಾರಕ! ಭಗವಂತನಿಗೆ ಪ್ರವೇಶವಿಲ್ಲದ ಕಗ್ಗತ್ತಲೆ, ಕಾಲೇಜುಗಳಲ್ಲಿ! ಸತ್ಯ ಧರ್ಮ ಶಾಂತಿ ಪ್ರೇಮಗಳಿಗೆ ಪ್ರವೇಶವಿಲ್ಲದ ಅಂಧ ಅಧಿಕಾರ ವಲಯಗಳು ಹಿರಿಯರ ಹೃದಯಗಳು!

"ನಾನೇಕೆ ಕಾಲೇಜುಗಳನ್ನು ನಡೆಸಬಾರದು?" - ಎಂದೊಮ್ಮೆ ಬಾಬಾ ಅವರು ಹಲವರನ್ನು ಮೂದಲಿಸಿದರು. ಅವತಾರ ಪುರುಷರು ಇಂಥಿಂಥ ಕಾರ್ಯಗಳಲ್ಲೇ ತೊಡಬೇಕೆಂಬ ನಿಯಮವೇನೂ ಇಲ್ಲ. ತಾನು ಬಂದ ಕೆಲಸ ಸಾಧಿಸುವುದಕ್ಕಾಗಿ, ಶ್ರೀ ರಾಮಚಂದ್ರ ಸೇತುವೆ ಕಟ್ಟಿದ; ಶ್ರೀಕೃಷ್ಣ ತೇರೋಡಿಸಿದ. ನನ್ನ ಅವತಾರೋದ್ದೇಶವೇ ಸತ್ಯ ಬೋಧೆ, ಧರ್ಮ ಬೋಧೆ! ನಾನೂ ಒಬ್ಬ ಶಿಕ್ಷಕ! ದಿವ್ಯಾತ್ಮ ಸ್ವರೂಪರೇ ಎಂದು ನಾನು ನಿಮ್ಮನ್ನು ಸಂಬೋಧಿಸುವುದು, ಉತ್ತಿಷ್ಠತ, ಜಾಗ್ರತ ಎಂದು ನಿಮ್ಮನ್ನು ಎಚ್ಚರಿಸುವುದಕ್ಕಾಗಿಯೇ. ತಮಸೋಮಾ ಜ್ಯೋತಿರ್ಗಮಯ ಎಂದು ನೀವು ಬೇಡುತ್ತಿರುವಾಗ, ನಾನು ಕಿವುಡು ಕುಳಿತಿರಲೆ?" ಎಂದರು ಬಾಬಾ.

ಮೊಟ್ಟ ಮೊದಲು ಮಹಿಳೆಯರ ಕಾಲೇಜೊಂದನ್ನು ಸ್ಥಾಪಿಸಿದರು, ಬಾಬಾ! 'ಧರ್ಮವಾಹಿನಿ' ಎಂಬ ಅವರ ಗ್ರಂಥದಲ್ಲಿ ಬಾಬಾ, ಸ್ತ್ರೀ ವಿದ್ಯಾಭ್ಯಾಸದ ಅವಶ್ಯಕತೆಯನ್ನು

ಆಗಲೇ ವಿವರಿಸಿದ್ದರು. "ಮಕ್ಕಳಲ್ಲಿ ಪ್ರೇಮ, ಸೇವಾತತ್ಪರತೆ, ದೇಶಾಭಿಮಾನ, ಭಾಷಾಭಿಮಾನ ಇವನ್ನು ಬೆಳೆಸಲು ತಾಯಂದಿರಿಗೆ ಪುರುಷರು ಸಂಪೂರ್ಣ ಅವಕಾಶ ಕೊಡದಿರುವುದರಿಂದಲೇ ದೇಶಕ್ಕೆ ಇಂದಿನ ದುರ್ಗತಿ! ಆದರೆ, ಅದದ್ದು ಆಗಿ ಹೋಯಿತು. ಭವಿಷ್ಯವನ್ನಾದರೂ ಭವ್ಯವಾಗಿಸೋಣ!"

೧೯೬೬ ಜೂನ್ ತಿಂಗಳಲ್ಲಿ ಬಾಬಾ, ಅನಂತಪುರದ ಹೆಣ್ಣು ಮಕ್ಕಳ ಉನ್ನತ ಪಾಠ ಶಾಲೆಯ ವಾರ್ಷಿಕೋತ್ಸವವನ್ನು ವೀಕ್ಷಿಸಿದರು. ಅಲ್ಲಿ ತಮ್ಮ ಓದು ಮುಗಿಸಿ ಹೆಣ್ಣು ಮಕ್ಕಳು, ದೂರದ ಊರುಗಳಿಗೆ ಹೋಗಬೇಕಾಗಿರುವುದನ್ನೂ, ಹಾಗೆ ಹೋದರೂ ಅವರಿಗೆ ಸಿಗುವ ವಿದ್ಯಾಭ್ಯಾಸ ಕುಂದು ಕೊರತೆಗಳಿಂದ ತುಂಬಿರುವುದನ್ನೂ ಬಾಬಾ ಗಮನಿಸಿದರು. ಹೊಸ ಬಗೆಯ ಮಹಿಳಾ ಕಾಲೇಜೊಂದನ್ನು ಅನಂತಪುರದಲ್ಲಿ ನೆಲೆಗೊಳಿಸಲು ಸಂಕಲ್ಪಿಸಿದರು. "ಶಿಶುಗಳಿಗೆ ತಾಯಂದಿರ ಮಡಿಲೇ ಮೊದಲ ವಿದ್ಯಾಶಾಲೆ! ಈ ಊರಲ್ಲಿ ನಿಮಗಾಗಿ ಒಂದು ಕಾಲೇಜು ತೆರೆಯುತ್ತೇನೆ" - ಎಂದು ಅಂದೇ ಆಶ್ವಾಸವಿತ್ತರು. ಮನುಜ ಕುಲಕ್ಕೆ ಅದೊಂದು ಶುಭೋದಯಯದಗಳಿಗೆ; ವಿದ್ಯಾ ವಿಧಾನಗಳಲ್ಲಿ ಮಹಾಕ್ರಾಂತಿಯನ್ನು ತಂದ ಪಾವನ ಮುಹೂರ್ತ. ಈ ಅವತಾರ ಕಾರ್ಯಾಚರಣೆಯಲ್ಲಿ ಅಮೂಲ್ಯ ಘಟ್ಟ.

೧೯೬೮ ಜುಲೈಯಲ್ಲಿ ಆ ಕಾಲೇಜು ಜನ್ಮ ತಾಳಿತು! ಸರ್ವಸಜ್ಜಿತವಾಗಿ, ಸರ್ವಾಲಂಕಾರ ಭೂಷಿತರಾಗಿ, ಸಂಪೂರ್ಣ ಸಮರ್ಪಕವಾಗಿ ಜನ್ಮ ತಾಳಿತು! ಭಗವತ್ಸಂಕಲ್ಪದ ಪ್ರಭಾವ! ಆ ದಿನದ ಸಮಾರಂಭದ ಅಧ್ಯಕ್ಷ ಸ್ಥಾನದಿಂದ, ಆಂಧ್ರ ಪ್ರದೇಶದ ವಿದ್ಯಾ ಮಂತ್ರಿ, "ಸ್ತ್ರೀ ವಿದ್ಯಾಭ್ಯಾಸ ಚರಿತ್ರೆಯಲ್ಲಿ ಇಂದು ನಾವು ಒಂದು ಹೊಸ ಅಧ್ಯಾಯವನ್ನು ಪ್ರಾರಂಭಿಸುತ್ತಿದ್ದೇವೆ" - ಎಂದರು. "ವೇದ-ಶಾಸ್ತ್ರ, ಪುರಾಣೇತಿಹಾಸಗಳಲ್ಲಿ, ಪ್ರತಿಪಾದಿತವಾಗಿರುವ ಉತ್ತಮ ಆದರ್ಶಗಳನ್ನು ಆಧುನಿಕ ವಿದ್ಯಾ ಸಂಸ್ಥೆಗಳ ಮೂಲಕವೂ ನೆಲೆಗೊಳಿಸಿ, ಅಭಿವೃದ್ಧಿ ಪಡಿಸಬಹುದು ಎಂಬುದನ್ನು, ಈ ಕಾಲೇಜಿನ ಮೂಲಕ ದೇಶಕ್ಕೆ, ಪ್ರಪಂಚಕ್ಕೆ ತಿಳಿಸಲಾಗುವುದು" - ಎಂದರು ಬಾಬಾ. "ಆದರ್ಶಗಳನ್ನು ತಿಳಿದು ಆಚರಿಸುವುದು ಭಾರತೀಯರೆಲ್ಲರ ಆಜನ್ಮ ಹಕ್ಕು; ಅದನ್ನು ಯಾರೂ ತಪ್ಪಿಸುವಂತಿಲ್ಲ" - ಎಂದರು. "ಥಳಕು ಬಳಕುಗಳಿಗೆ ಮನ ಸೋತು, ಅಶ್ಲೀಲ ಕಥೆಗಳಿಂದ ಮರೋರೋಗ ಮಳಿತು ಹೊಲಸು ಚಿತ್ರಗಳನ್ನು ಚಿತ್ರಕ್ಕಂಟಿಸಿ, ಭಾರತ ಮಹಿಳೆಯರು, ಇತರ ದೇಶದ ಮಹಿಳೆಯಂತೆ, ಪುರುಷ ಪತ್ನಿಯರಾಗಲು ಪ್ರಯತ್ನಿಸುತ್ತಿದ್ದಾರೆಯೇ ಹೊರತು, ನಾಳೆ ನಾಡನ್ನು ನಲಿಸಿ, ಪಾಲಿಸಿ, ಉಳಿಸಬೇಕಾದ ಬಾಲಬಾಲಿಕೆಯರ ತಾಯಂದಿರಾಗಲು ಶ್ರಮಿಸುತ್ತಿಲ್ಲವೆಂಬುದು ಬಾಬಾ ಅವರ ಟೀಕೆ".

"ದೇಹ ಮಾತಾ, ಗೋಮಾತಾ, ದೇಶಮಾತಾ, ಭೂಮಾತಾ, ವೇದಮಾತಾ ಎಂಬ ತಾಯಂದಿರೈವರನ್ನು ಆದರಿಸಬೇಕಾದ್ದು. ಮೊದಲ ತಾಯಿ ಆದ ದೇಹ ಮಾತಾ ತನ್ನ ಮಕ್ಕಳಿಗೆ, ಉಳಿದ ನಾಲ್ವರನ್ನೂ ಪೂಜಿಸಲು ಕಲಿಸಬೇಕಾಗಿದೆ. ಆದ್ದರಿಂದಲೇ ನಾನು ಈ

ಕಾಲೇಜನ್ನು ಸ್ಥಾಪಿಸುವುದು. ಸನಾತನ ಧರ್ಮವನ್ನು ಉಳಿಸಿ ಬೆಳೆಸಲು ಈ ಕಾಲೇಜು ಒಂದು ಉತ್ತಮ ಉಪಕರಣ" - ಎಂದು ಬಾಬಾ ಹೇಳಿದರು.

ಮನಸ್ಸು ಆತ್ಮ ವಿದ್ಯೆ ಇಲ್ಲದೆ ಪಕ್ವವಾಗುವುದಿಲ್ಲವೆಂಬುದು ಬಾಬಾ ಅವರ ಬೋಧೆ. ಪ್ರಾಚೀನ ಭಾರತದ ಆತ್ಮ ಸಂಶೋಧಕರು ಈ ಮಾನಸ ಸರೋವರದ ಆಳವನ್ನೂ, ಅದರಲ್ಲಿ ಎದ್ದು ಬೀಳುವ ಅಲೆಗಳ ಪರಂಪರೆಯನ್ನೂ ಪರೀಕ್ಷಿಸಿ, ಈ ವಿದ್ಯೆಯನ್ನು ವಿಶದೀಕರಿಸಿದ್ದಾರೆ. ಅದನ್ನು ಕಲಿತ ಮಂದಿ ಕೆಲವರನ್ನು ತಯಾರು ಮಾಡುವ ಸಲುವಾಗಿ ಬಾಬಾ, ಒಂದು ವೇದಶಾಸ್ತ್ರ ಪಾಠಶಾಲೆಯನ್ನು ಪುಟ್ಟಪರ್ತಿಯಲ್ಲಿ ನಡೆಸುತ್ತಿದ್ದಾರೆ. ಅಲ್ಲಿ ಹತ್ತಾರು ಹುಡುಗರು ಪ್ರಶಾಂತಿ ಸಂದೇಶವನ್ನೂ ಅಭ್ಯಾಸ ಮಾಡುತ್ತಾರೆ. ಸ್ವತಂತ್ರ ಚಿಂತನೆ, ಶುಭ್ರ ಮನಸ್ಸು, ಆಧ್ಯಾತ್ಮಿ ಕಾವೇದನೆ ಇವುಗಳ ಕುರುಹಾದ ಸಂಯಮ ಅವರಲ್ಲಿ ಎದ್ದು ಕಾಣುತ್ತದೆ.

ಅಲ್ಲದೆ, ಸುಮಾರು ನೂರು ವೇದ ವಿದ್ವಾಂಸರಿಗೆ ಅಭಯವನ್ನೂ, ಆಶ್ರಯವನ್ನೂ ಕೊಡುತ್ತಿರುವ ಅಖಿಲ ಭಾರತ ಪ್ರಶಾಂತಿ ವಿದ್ವನ್ ಮಹಾಸಭೆಯನ್ನು ಸ್ಥಾಪಿಸಿ, ವೇದ ವಿದ್ಯೆಗೆ ಬಾಬಾ ಪ್ರೋತ್ಸಾಹ ನೀಡುತ್ತಿದ್ದಾರೆ. ಪಂಡಿತರಿಗೆ ಮಾತ್ರ ಸೇರಿದ ಸ್ವತ್ತಲ್ಲ ಆತ್ಮ ವಿದ್ಯೆ. ವಿವೇಕ, ವೈರಾಗ್ಯ, ವಿಚಕ್ಷಣೆಗಳನ್ನು ಆ ವಿದ್ಯೆಯ ಮೂಲಕ ಅಭಿವೃದ್ಧಿ ಪಡಿಸಿ, ಆನಂದವನ್ನು ಪಡೆಯಲು ಎಲ್ಲರಿಗೂ ಅವಕಾಶವನ್ನೊದಗಿಸಬೇಕು ಎಂಬುದೇ ಅವರ ಸಂಕಲ್ಪ.

"ದೇಹದ ಅಸ್ತಿತ್ವಕ್ಕೆ ನೀರು ಮುಖ್ಯ. ಅದರ ಆರೋಗ್ಯಕ್ಕೆ ಹಾಲು ಮುಖ್ಯ. ಈಗ ಶಾಲೆ ಕಾಲೇಜುಗಳಲ್ಲಿ ನೀರನ್ನೊದಗಿಸಲಾಗುತ್ತಿದೆ; ಅಂದರೆ ವಿಷಯ ಜ್ಞಾನ ಹಾಗೂ ಹಲ ಕೆಲವು ಕಾರ್ಯ ಸಾಧನಾ ಕ್ರಮಗಳು, ಇಷ್ಟೇ. ಬಲ, ಓಜಸ್ಸು, ತೇಜಸ್ಸು, ಶಾಂತಿ, ಮನೋದಾರ್ಢ್ಯ ಇವಕ್ಕೆ ಅತ್ಯಗತ್ಯವಾದ ಹಾಲು (ಆತ್ಮ ವಿದ್ಯೆ) ವೇದಶಾಸ್ತ್ರ ಪಾಠಶಾಲೆಗಳಲ್ಲಿ ಅತ್ಯಲ್ಪ ಸಂಖ್ಯೆ ಬಾಲಕರಿಗೆ ಮಾತ್ರ ಕೊಡಲಾಗುತ್ತಿದೆ".

ವಿಶ್ವ ವಿದ್ಯಾಲಯಗಳ ನಿಯಮಾವಳಿಯಂತೆ, ಈ ಹೊಸ ಬಗೆಯ ಕಾಲೇಜುಗಳಲ್ಲಿ ಪಾಠ ಪ್ರವಚನವುಂಟು. ಆದರೆ ಅದರ ಜೊತೆಗೆ, ನೀರಿನ ಜೊತೆಗಿನ ಹಾಲಿನಂತೆ, ಪ್ರಾರ್ಥನೆ, ಧ್ಯಾನ, ಭಜನೆ, ಸಮಾಜಸೇವೆ, ಶ್ರಮದಾನ, ಸ್ವಾವಲಂಬನೆ, ಗೀತಾಪಠನ, ಭಾರತೀಯ ಸಂಸ್ಕೃತಿಯ ಅಭ್ಯಾಸ, ಸರಳ ಜೀವನ ಮುಂತಾದವುಗಳಿಗೂ ವಿಶೇಷ ಗಮನ ಕೊಡಲಾಗುತ್ತಿದೆ. ಉಡುಗೆ ತೊಡುಗೆಗಳಲ್ಲೂ ನಡೆನುಡಿಗಳಲ್ಲೂ ವಿಕಾರರಹಿತ, ಆಡಂಬರ ರಹಿತ ಪದ್ಧತಿಗಳಿಗೆ ಮಾತ್ರ ಪುರಸ್ಕಾರ ದೊರೆಯುತ್ತದೆ. ಒಟ್ಟಿನಲ್ಲಿ, ಎಲ್ಲೆಡೆ ಸಾತ್ವಿಕ ವಾತಾವರಣ, ಪ್ರೇಮದ ಪರಿಮಳ ಶಾಂತಿಯ ಮೆಲುಗಾಳಿ.

ಅಲ್ಲದೆ, ಸರ್ವಜ್ಞನೂ ಸರ್ವಾಂತರ್ಯಾಮಿಯೂ ಆದ ಬಾಬಾ ಅವರ ವೀಕ್ಷಣಕ್ಕೆ ವಿದ್ಯಾರ್ಥಿಗಳು ಒಬ್ಬರೂ ಹೊರತಾಗಿಲ್ಲ! ಅವರು ಮೆ[illegible]ನುಸರಿಸಿ ಪ್ರತಿ

ಒಬ್ಬರೂ ಉದ್ಧಾರವಾಗಬಹುದು. ಅವರ ಅನುಗ್ರಹ ಬಲದಿಂದಾಗದ ಸಾಹಸವಿಲ್ಲ. ಅವರ ಸಂಕಲ್ಪ, ಅವರೇ ಹೇಳಿದಂತೆ, ವಜ್ರ ಸಂಕಲ್ಪ!

ಕಾಲೇಜಿನ ಸಾರಥಿ ಅವರು. ಆದ್ದರಿಂದ ಅಲ್ಲಿ ಮೂರು ನಾಲ್ಕು ವರ್ಷಗಳು ಓದಿದವರು, ಅವರ ನೆರಳಿನಲ್ಲಿ ಬೆಳೆದವರು, ಸತ್‌ಪುತ್ರರಾಗಿಯೂ, ಸಮಾಜದ ಆದರ್ಶ ಅಂಗಗಳಾಗಿಯೂ, ಸಮಾನ ಪ್ರೇಮಿಗಳಾಗಿಯೂ, ಸಮರ್ಥ ಶ್ರಮಜೀವಿಗಳಾಗಿಯೂ, ಸಂಪೂರ್ಣರಾಗಿಯೂ, ಸಂತುಷ್ಟರಾಗಿಯೂ ತಯಾರಾಗುತ್ತಿರುವುದರಲ್ಲಿ ಆಶ್ಚರ್ಯವೇನು?

ಅಮೆರಿಕದಿಂದ ಚಾರ್ಲ್ಸ್ ಪೆನ್ ಎಂಬವನು ಬರೆಯುತ್ತಾನೆ. ಶಿಕ್ಷಣ ಕೊಡುವುದಕ್ಕಾಗಿಯೋ ಬಾಬಾ ಅವತಾರ! ಕಲಿಯುವುದಕ್ಕೋಸ್ಕರ ನಮ್ಮನ್ನವರು ತಮ್ಮ ಬಳಿ ಬರ ಮಾಡಿಕೊಳ್ಳುತ್ತಾರೆ. ತಮ್ಮ ಬಳಿ ಎಂದರೆ, ಪ್ರತ್ಯಕ್ಷ ಅವರ ದೇಹೋಪಾಧಿ ಇರುವ ಸ್ಥಳ ಮಾತ್ರ ಅಲ್ಲ! ನಾವೆಲ್ಲಿದ್ದರೂ ಅವರನ್ನು ನಾವು ಕೇಳಿ ತಿಳಿದುಕೊಳ್ಳಬಹುದು; ಉತ್ತರಿಸಿ ನಮ್ಮನ್ನುದ್ಧರಿಸುತ್ತಾರೆ.

ಇಂಥ ಶಿಕ್ಷಕರೊಬ್ಬರನ್ನು ಪಡೆದ ಯುವಕರೇ ಧನ್ಯರು. ಜೀವಿತ ಸಮರಕ್ಕಿಳಿಯುವ ಯುವಜನರಿಗೆ, ಆತ್ಮಜ್ಞಾನದ ಅಭಯ ಕವಚ ಅತ್ಯಂತ ಫಲಕಾರಿ ಎನ್ನುತ್ತಾರೆ ಬಾಬಾ. ಅದಕ್ಕಾಗಿಯೇ ಅವರು ಅನಂತಪುರದ ಮಹಿಳಾ ಕಾಲೇಜನ್ನು (ನಿರ್ದಿಷ್ಟ ಕಟ್ಟಡಗಳು ಪೂರ್ತಿಯಾಗುವ ಮೊದಲೇ), ಬಾಡಿಗೆ ಬಂಗಲೆಯಲ್ಲೇ ಪ್ರಾರಂಭ ಮಾಡಿದ್ದು.

ಹಾಗೆಯೇ ಬೆಂಗಳೂರು ಸಮೀಪದ ಕಾಡುಗೋಡಿ ಗ್ರಾಮದಲ್ಲಿರುವ ತಮ್ಮ "ಬೃಂದಾವನ"ದಲ್ಲೂ, ಹಲವು ಕೆಲವು ತಾತ್ಕಾಲಿಕ ಶೆಡ್ಡುಗಳಿಗೆ ಅಂದ ಚಂದ ಕೊಡಿಸಿ, ಅಲ್ಲೂ ಒಂದು ಕಾಲೇಜು (ಹುಡುಗರಿಗಾಗಿ) ಪ್ರಾರಂಭಿಸಿದರು. "ಇಟ್ಟಿಗೆ ಗಾರೆಗಳಿಂದ ಕಾಲೇಜು ರೂಪುಗೊಳ್ಳುವುದಿಲ್ಲ. ತರಗತಿಯೊಳಗಣ ಶ್ರದ್ಧೆ, ಆಟದ ಬಯಲಿನಲ್ಲಿಯ ಉತ್ಸಾಹ, ತಂದೆ ತಾಯಿಗಳ ಮೇಲೆ ವಿದ್ಯಾರ್ಥಿಗಳು ತೋರಿಸುವ ಭಕ್ತಿ, ದೊಡ್ಡವರಿಗೆ ಅವರು ಸಲ್ಲಿಸುವ ಗೌರವ, ಉಪಾಧ್ಯಾಯರಿಗೆ ಅವರು ಅರ್ಪಿಸುವ ವಿನಯ ವಿಧೇಯತೆ - ಇವುಗಳಿಂದಲೇ ಕಾಲೇಜಿನ ಹಿರಿಮೆ, ಕೀರ್ತಿ, ವಿಜಯಗಳನ್ನು ತೀರ್ಮಾನಿಸಬೇಕು" - ಎಂದರು ಬಾಬಾ.

೧೯೭೪ ಜೂನ್ ತಿಂಗಳಲ್ಲಿ ಲೈಬ್ರರಿ ಲಾಬೊರೇಟರಿ ಸಹಿತ, ಸರ್ವಾಂಗ ಸುಂದರವಾದ ಕಾಲೇಜು ಸಿದ್ಧವಾಯಿತು. ಮೈಸೂರಿನ ಮುಖ್ಯಮಂತ್ರಿ ಶ್ರೀ ವೀರೇಂದ್ರ ಪಾಟೀಲ ಅವರು, ಲೋಕ ಕಲ್ಯಾಣವನ್ನು ಸಾಧಿಸುವ ಪರಮೋದ್ದೇಶದಿಂದ ಬಾಬಾ ಈ ಕಾಲೇಜನ್ನು ಸ್ಥಾಪಿಸಿದ್ದಾರೆ" ಎಂದರು. ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿ ಪದ್ಮಭೂಷಣ ಡಾ| ವಿನಾಯಕ ಕೃಷ್ಣ ಗೋಕಾಕ್‌ರವರು, "ಬಾಬಾ ಅವರ ಪ್ರೇಮ ಈ ಕಾಲೇಜಿನ ಪ್ರತಿ ಇಟ್ಟಿಗೆಯೊಳಗೂ ಹಲಗೆಯೊಳಗೂ ಹರಿಯುತ್ತಿದೆ. [illegible] ಸ್ವತಃ [illegible] ಏರ್ಪಡಿಸಿದ ಸೌಧ

ಇದು. ಧಾರ್ಮಿಕ ಆಧ್ಯಾತ್ಮಿಕ ಕ್ಷೇತ್ರಗಳಲ್ಲೂ ದೇಶ ಈ ಕಾಲೇಜಿನಿಂದ ಕಲಿಯಬೇಕಾದ ಪಾಠಗಳು ಬಹಳ ಇರುತ್ತವೆ" - ಎಂದರು.

ತಮ್ಮ ಗ್ರಾಮದಲ್ಲಿ ಬಾಬಾ ಸ್ಥಾಪಿಸಿದ ಕಾಲೇಜಿನ ಮೇಲೆ ಅಮಿತ ವಾತ್ಸಲ್ಯದಿಂದ, ನೂರಾರು ಹಳ್ಳಿಗರೂ ಸಭೆಯಲ್ಲಿ ಹಾಜರಿದ್ದರು. "ನಗರ ವಾಸದಿಂದ ನಿಮ್ಮ ಮಕ್ಕಳನ್ನು ರಕ್ಷಿಸಿ, ತಲೆತಲಾಂತರದಿಂದ ನೀವು ಕಾಪಾಡುತ್ತ ಬಂದಿರುವ ಸಂಸ್ಕೃತಿಯನ್ನು ನೆಲೆಗೊಳಿಸುವುದಕ್ಕಾಗಿಯೇ ಈ ಕಾಲೇಜು!" - ಎಂದು ಅವರಿಗೆ ಬಾಬಾ ಹೇಳಿದರು. "ಕರ್ಮ ಮಾರ್ಗ, ಧರ್ಮ ಮಾರ್ಗ, ಬ್ರಹ್ಮ ಮಾರ್ಗ - ಈ ಮೂರನ್ನೂ ಬೋಧಿಸಿ, ಮೂರನ್ನೂ ಆಚರಿಸಲು ಹುರಿದುಂಬಿಸಿ, ನಿಮ್ಮ ಮಕ್ಕಳಿಗೆ ಪೂರ್ಣ ಜ್ಞಾನವನ್ನು ಅನುಗ್ರಹಿಸಲಾಗುವುದು," - ಎಂದರು.

ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡುತ್ತಾ, "ರಾಜಕೀಯ ಚಳುವಳಿಗಿಳಿದು, ದ್ವೇಷಾ ಸೂಯೆಗಳಲ್ಲಿ ಮುಳುಗಬೇಡಿ. ರಾಜಕೀಯವೆಂಬುದು ಯಾಪತ್ತೂ ಕೆಸರೇ! ಅಲ್ಲಿ ರಾಜಸಕ್ಕೆ ಮನ್ನಣೆ! ದರ್ಪ ಸಂಪಾದನೆಯೇ ಅದರ ಗುರಿ! ಪರದೂಷಣೆ, ಆತ್ಮಸ್ತುತಿ - ಇವೇ ಅದರ ಉಪಾಯಗಳು. ಕೋಪದ ಕಿಡಿಯನ್ನು, ಸುಳ್ಳೆಂಬ ತಿದಿಯೊತ್ತಿ ಮಹಾ ಜ್ವಾಲೆಯಾಗಿ ಬೆಳೆಸುವುದು ರಾಜಕೀಯ ಜಯದ ಗುಟ್ಟು. ನೀವು ಬೇರೊಂದು ಬಗೆಯ ಜನ ನಾಯಕರಾಗಬೇಕೆಂದು ನನ್ನ ಆಶೆ. ಹಿರಿಯರ ಆಶೀರ್ವಾದವೇ ನಿಮ್ಮ ಬಲ. ಸೇವೆಯೆ ನಿಮ್ಮ ಗುರಿ ಧರ್ಮವೇ ನಿಮ್ಮ ಬಾವುಟ. ಪ್ರೇಮವೇ ನಿಮ್ಮ ಆಯುಧ. ಶಾಂತಿಯೇ ನಿಮ್ಮ ಮುದ್ರಾ ವಾಕ್ಯ. ಸತ್ಯವೇ ನಿಮ್ಮ ಕಹಳೆ!" - ಎಂದು ಎಚ್ಚರಿಸಿದರು.

ಬಾಬಾ ಅವರ ಮುದ್ರೆಯಲ್ಲಿನ ಚಿತ್ರ ಎಲ್ಲ ವಿದ್ಯಾರ್ಥಿಗಳೂ ಮನನ ಮಾಡಬೇಕಾದ ಒಂದು ಮಂತ್ರವಾಗಿದೆ. ಅದರಲ್ಲಿ ಪಂಚದಳಗಳ ಒಂದು ಕಮಲವಿದೆ. ಸನಾತನ ಧರ್ಮ ಸೂಚಕವಾದ ಪ್ರಣವ, ಕ್ರೈಸ್ತರಿಗೆ ಅಚ್ಚುಮೆಚ್ಚಾದ ಸಿಲುಬೆ, ಬುದ್ಧಮತದ ಚಿನ್ಹೆಯಾದ ಚಕ್ರ, ಫಾರ್ಸಿಯರಿಗೆ ಪೂಜನೀಯವಾದ ಅಗ್ನಿ ಜ್ವಾಲೆಗಳು, ಇಸ್ಲಾಂ ಮತವನ್ನು ಗುರುತಿಸುವ ಪಂಚಮಿ ದಿನದ ಚಂದ್ರ ಬಿಂಬ, ನಕ್ಷತ್ರ - ಇವು ಆ ಕಮಲದ ಒಂದೊಂದು ದಳ ದಲ್ಲೊಂದೊಂದು ಪ್ರಕಾಶಿಸುತ್ತವೆ. ಆ "ಹೃದಯ" ಕಮಲದ ಮಧ್ಯ ಭಾಗದಲ್ಲಿ ಜ್ಞಾನ ಜ್ಯೋತಿ; ಸುತ್ತ ಧರ್ಮೋ ರಕ್ಷತಿ ರಕ್ಷಿತಃ - ಸತ್ಯನ್ನಾಸ್ತಿ ಪರೋಧರ್ಮಃ - ಎಂಬ ವೇದವಾಕ್ಯ!

ಕಾಲೇಜು ಸೇರುತ್ತಲೂ, ಅಲ್ಲಿಯ ಪಾಠಕ್ರಮಗಳ ವಿವರಗಳನ್ನೊಳಗೊಂಡ ಒಂದು ಕಿರು ಹೊತ್ತಿಗೆಯನ್ನು ವಿದ್ಯಾರ್ಥಿಗಳಿಗೆ ಕೊಡುತ್ತಾರೆ. ಅದರಲ್ಲಿ ಒಂದು ನಿಯಮಾವಳಿಯೂ ಇದೆ. ಕೆಲವು ನಿಯಮಗಳನ್ನು ಓದಿ ತಿಳಿದುಕೊಳ್ಳೋಣ: "ಭಗವಾನ್ ಶ್ರೀ ಸತ್ಯ ಸಾಯಿಬಾಬಾ ಅವರ ಪ್ರತ್ಯಕ್ಷ ಸನ್ನಿಧಿಯಲ್ಲಿ ವಿದ್ಯಾಭ್ಯಾಸ ಮಾಡುವ ಸದವಕಾಶ ನಿಮಗೆ ದೊರೆತಿದೆ. ಸತ್ ಶೀಲವೇ ವಿದ್ಯೆಯ ಗುರುತು - ಎಂಬ ಅವರ ಉಪದೇಶವನ್ನು

ಮರೆಯದಿರಿ". "ಹಿತ ಮಿತ-ಭಾಷಣ, ಸ್ನೇಹ ಸಹಕಾರಗಳು, ಸಹಿಷ್ಣುತೆ ಇವುಗಳನ್ನು ಅಜ್ಞಿ ಕೀರ್ತಿ ಗಳಿಸಿ". "ಈ ಕಾಲೇಜಲ್ಲಿ ಸೇರುವವರು ಓದಿಗೆ ಹೆಚ್ಚು ಪ್ರಾಧಾನ್ಯತೆ ಕೊಡಬೇಕು "ಕಾಲೇಜಲ್ಲಿ ಧ್ಯಾನ ಭಜನೆ ಪ್ರಾರ್ಥನೆ ಮುಂತಾದ ಸಾಧನೆಗಳಿಗೆ ತುಂಬಾ ಪ್ರೋತ್ಸಾ ಉಂಟು. ಸುತ್ತಲ ಹತ್ತಾರು ಹಳ್ಳಿಗಳಿಗೆ ಉಪಾಧ್ಯಾಯರೂ ವಿದ್ಯಾರ್ಥಿಗಳೂ ಹೋಗಿ ಹಲವಾರು ಸೇವಾ ಕಾರ್ಯಗಳನ್ನು ನೆರವೇರಿಸಿ ನಲಿಯುತ್ತಾರೆ. ಶ್ರವಣ ದೋಷ, ದೋಷ, ದೃಷ್ಟಿ ದೋಷ, ವಾಗ್ದೋಷ, ಕ್ರಿಯಾ ದೋಷ, ಮನೋ ದೋಷಗಳನ್ನೆಸಗದೆ ಬಾಳಲು, ಸದಾ ಜಾಗರೂಕರಾಗಿರಬೇಕೆಂದು ಬಾಬಾ ಉಪದೇಶಿಸುತ್ತಾರೆ.

"ಬೃಂದಾವನ"ದಲ್ಲೇ, ಬಾಬಾ ಅವರ ಬಿಡದಿಯ ಪಕ್ಕದಲ್ಲೇ ಕಾಲೇಜು ನಡೆಯುವುದರಿಂದ, ಬಾಬಾ ಆಗಾಗ ಹಾಸ್ಟೆಲೊಳಕ್ಕೂ ತರಗತಿಯ ಕೋಣೆಗೂ ಪ್ರಾರ್ಥನೆಯ ವೇಳೆಯಲ್ಲಿ ಅಂಗಳಕ್ಕೂ ಬಂದು, ವಿದ್ಯಾರ್ಥಿಗಳನ್ನು ತಿದ್ದುವರು. ಆಧ್ಯಾತ್ಮಿಕ ಉಪನ್ಯಾಸಗಳನ್ನು ತಾವೂ ಅನುಗ್ರಹಿಸುವರು. ವಾರ್ಷಿಕೋತ್ಸವಗಳಿಗೆ ತಾವೇ ನಾಟಕಗಳನ್ನು ಬರೆದು ಕಲಿಸಿ ಆಡಿಸುವರು. ಕವಿ ಸಮ್ಮೇಳನಗಳಲ್ಲಿ ತಾವೂ ಭಾಗವಹಿಸಿ, ಕಾವ್ಯ ರಚಿಸಿ ಹಾಡುವರು. ಉತ್ಸಾಹೀ ತರುಣರ ಬೆನ್ನು ತಟ್ಟುವರು; ಗಂಟೆ ಹೊಡೆದ ಮೇಲೆ ನಿಧಾನವಾಗಿ ತರಗತಿಯೊಳಕ್ಕೆ ತೂರುವ ವಿದ್ಯಾರ್ಥಿಯನ್ನೂ ಉಪಾಧ್ಯಾಯರನ್ನೂ ಖಂಡಿಸುವರು. "ಪರೀಕ್ಷೆಯಲ್ಲಿ ನಿನಗೆ ಸಿಕ್ಕಿದ ನಂಬರೆಷ್ಟು?" - ಎಂದು ಹತ್ತು ಜನರೆದುರು ಹೀಯಾಳಿಸುವರು - ಉತ್ತಮ ಗುಣಗಳಿಸುವ ಕೀರ್ತಿಗಳಿಸಿದ ವಿದ್ಯಾರ್ಥಿಗೆ, ಕೈ ಗಡಿಯಾರ ಸೃಷ್ಟಿಸಿ ಕೊಡುವರು. ಲೈಬ್ರರಿಯೊಳಕ್ಕೂ ಲ್ಯಾಬೊರೇಟರಿಯೊಳಕ್ಕೂ ಹೋಗಿ ಆಳವಾದ ಪ್ರಶ್ನೆಗಳನ್ನು ಕೇಳಿ, ಅಲ್ಲಿಯ 'ವಿದಗ್ಧ'ರನ್ನು ತಿದ್ದುವರು. ಒಟ್ಟಿನಲ್ಲಿ ಅವರೇ ಕಾಲೇಜಿನ ಉಸಿರು, ಉಲ್ಲಾಸ, ಉತ್ಸಾಹ ಆದ್ದರಿಂದ ವಿದ್ಯಾರ್ಥಿಗಳು, ಕೂಡ ತಮ್ಮಲ್ಲಡಗಿರುವ ಶಕ್ತಿ ಸಾಮರ್ಥ್ಯಗಳನ್ನೂ, ಭಕ್ತಿ ಶ್ರದ್ಧೆಗಳನ್ನೂ ದಯೆ ಅನುಕಂಪಗಳನ್ನೂ ಪ್ರವರ್ಧಮಾನಕ್ಕೆ ತಂದು, ಜಗವರಿಯೆ ಪ್ರಕಟಿಸುವರು.

# ಉತ್ತಿಷ್ಠ!

"ಹಾಸಿಗೆಯ ಸುತ್ತಿರಿಸಿ ಎದ್ದು ಬನ್ನಿ" - ಎಂದು ಬಾಬಾ ಕರೆ ಇತ್ತಾಗ, ನಗರ ಸಂಕೀರ್ತನೆ ಮಾಡಲು ಅವರಿತ್ತ ಆಹ್ವಾನ ಅದು ಎಂಬುದನ್ನು ಅರಿತರು. ಬೊಂಬಾಯಿಯ ಅಪರೂಪ! ಪ್ರಪಂಚ ಸಮ್ಮೇಳನದ ಸುಮುಹೂರ್ತದಲ್ಲಿ ಬಾಬಾ ಹೀಗೆ ಆದೇಶವಿತ್ತರು. ಸೂರ್ಯೋದಯಕ್ಕೆ ಮೊದಲೇ ಭಗವನ್ನಾಮ ಗಾನದಿಂದ ನೆರೆಹೊರೆಯ ಸೋದರ ಸಹೋದರಿಯರ ಅಂತರಂಗದ ವೇದನೆಯನ್ನು ನೀಗಿಸಿ! "ಭಜನೆ ಪದ್ಧತಿ ಶತಮಾನದ ಹಿಂದೆ ಭಾರತದ ಎಲ್ಲ ಗ್ರಾಮಗಳಲ್ಲೂ ನಡೆಯುತ್ತಿತ್ತು. ಆದರೆ ಸಂಶಯಾತ್ಮರಾದ ಸೋಮಾರಿಗಳು ಅಧಿಕರಿಸಿ, ಸಮಾಜದಲ್ಲಿ ಇಂತಹ ಉತ್ತಮ ಪದ್ಧತಿ ಕ್ಷೀಣಿಸಿ ನಾಮಾವಶೇಷವಾಗಿದೆ. ಸೂರ್ಯೋದಯದ ಸೊಬಗನ್ನು ಕಂಡು ನಲಿಯದ ಬಹುಮಂದಿ ಈಗ ಬೆಳಗಾಗುವ ಮೊದಲೇ ಎದ್ದು, ಹತ್ತಾರು ಜನರೊಂದಿಗೆ ಕಲೆತು, ಊರಿನ ಬೀದಿಗಳ ಮೂಲಕ ನಡೆದು ಆನಂದಪಡುತ್ತಿದ್ದಾರೆ. ನಾವು ಹಲವು: ದೇವನೊಬ್ಬನೆ! ಆದ್ದರಿಂದ, ಯಾವ ಒಂದು ರೂಪದ ಪಟವನ್ನೂ ತೆಗೆದುಕೊಂಡು ಹೋಗದೆ, ಹಲವಾರು ನಾಮ ರೂಪಗಳನ್ನು ಆರಾಧಿಸುವ ಹಾಡುಗಳನ್ನು ಅಳವಡಿಸಿಕೊಳ್ಳಬೇಕೆಂದು ಬಾಬಾ ಆಜ್ಞೆ ಮಾಡಿದ್ದಾರೆ. ಈಗ ಭಾರತದಲ್ಲಿ ಸುಮಾರು ೩೦ ೩೫ ಸಹಸ್ರ ಹಳ್ಳಿಗಳಲ್ಲೂ, ಎಲ್ಲ ಮುಖ್ಯ ಪಟ್ಟಣಗಳ ಬೀದಿಗಳಲ್ಲೂದ ಹಾಗೂ ಪೂ. ಆಫ್ರಿಕಾ ಮುಂತಾದ ಪರರಾಷ್ಟ್ರಗಳಲ್ಲೂ, ಪ್ರಣವ ಜಪ ಸುಪ್ರಭಾತ ಕೀರ್ತನೆಗಳಾದ ನಂತರ, ಸ್ತ್ರೀ ಪುರುಷರು ಆ ಬಾಲ ಗೋಪಾಲ, ಗುಂಪು ಗುಂಪಾಗಿ ಆಡಂಬರ, ಆರ್ಭಟಗಳಿಲ್ಲದೆ, ಹಾರ್ದಿಕವಾಗಿ ಸಂಕೀರ್ತನೆ ಮಾಡುತ್ತಿದ್ದಾರೆ, ವಾರಕ್ಕೆರಡು ಸಲ ಅಥವಾ ಕೆಲವೆಡೆ ಪ್ರತಿ ದಿನ! ಚಳಿಮಳೆಗಳನ್ನು ಲೆಕ್ಕಿಸದೆ ಮಾಡುವ ಈ ಕೈಂಕರ್ಯಕ್ಕೆ ಯಾವ ಬಗೆಯ ಅಡ್ಡಿ ಆತಂಕಗಳೂ ಬರದಂತೆ, ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗಂತಿಂ ತಾತಾ ಗಚ್ಛತಿ - ಎಂದು ಹೇಳಿದ್ದ ಸಾಯಿಕೃಷ್ಣನೇ ರಕ್ಷಣೆಯನ್ನೊದಗಿಸುತ್ತಿದ್ದಾನೆ."

ವಾದಿ ಸಿಂಹ, ಪ್ರತಿವಾದಿ ಭಯಂಕರ,. ತರ್ಕ ಚೂಡಾಮಣಿ ಮೊದಲಾದ ಬಿರುದಾಂಕಿತರು, ಶ್ರುತಿ ಸ್ಮೃತಿಗಳನ್ನು ಕಾಸು ಕೂಡಿ ಹಾಕುವುದಕ್ಕೆ, ಕೀರ್ತಿ ಗಳಿಸುವುದಕ್ಕೆ, ಎದುರಾಳಿಯ ಮೂಗು ಮುರಿಯುವುದಕ್ಕೆ ಉಪಯೋಗಿಸುತ್ತಾರೆ. ಭಗವಂತನ ಆರಾಧನೆ ಕೂಡ, ನಿಯಮ ನಿಬಂಧನೆಗಳ ಪಥ-ಪಂಚಾಂಗಗಳ ಪಂಜರದೊಳಗೆ ಸಿಕ್ಕಿ, ಕೇವಲ ಬಾಹ್ಯವನ್ನೇ ಮೆರೆಸುತ್ತಿದೆ. ಭಾವವನ್ನು ಪರಿಶುದ್ಧಗೊಳಿಸುತ್ತಿಲ್ಲ. ನಾಮದ ಬಲವೊಂದಿದ್ದರೆ ಸಾಕು. "ಯುಗ ಧರ್ಮ ವಾದ ನಾಮ ಜಪಕ್ಕೆ ಧಕ್ಕೆ ತಗುಲಿದಾಗ, ಜನರನ್ನು ನಯ ಮಾರ್ಗದಲ್ಲಿ ತಿರುಗಿಸಿ ನಡೆಸುವುದಕ್ಕಾಗಿಯೇ ಈ ಅವತಾರ," ಎಂದು ಹೇಳುತ್ತಿರುವ ಬಾಬಾ, ನಾಮಸ್ಮರಣೆಗೂ ಭಜನೆಗೂ ನಗರ ಸಂಕೀರ್ತನೆಗೂ ಬಹಳ ಪ್ರಾಧಾನ್ಯತೆಯನ್ನು ಕೊಡುತ್ತಿದ್ದಾರೆ.

ಅವತಾರದ ಮುಖ್ಯ ಲಕ್ಷಣವೇ ಇದು ನಾಮವನ್ನುಚ್ಚರಿಸಿದರೆ ಅವರು ಪ್ರತ್ಯಕ್ಷ! ಟಾನ್‌ಜಾನಿಯಾ ಎಂಬುದು ಆಫ್ರಿಕಾ ದೇಶದಲ್ಲಿನ ಒಂದು ರಾಷ್ಟ್ರ. ಅಲ್ಲಿಯ ಒಂದು ಪಟ್ಟಣ ಅರೂಷಾ. ಅಲ್ಲೊಂದು ಆಸ್ಪತ್ರೆ: ಹೆಸರು ಅಗಾಖಾನ್ ಚಿಕಿತ್ಸಾಲಯ. ಅಲ್ಲಿಯ ಡಾಕ್ಟರೊಬ್ಬರು, ಡಿ.ಜೆ. ಗಡಿಯಾ ಬರೆಯುತ್ತಾರೆ: ೭೧ ಮೇ ತಿಂಗಳಲ್ಲಿ ಯಮುನಾದಾಸ ಪಟೇಲ್ ಎಂಬುವರಿಗೆ ಸಖತ್ ಖಾಯಿಲೆ. ನಾನು ಅವರ ಹಾಸಿಗೆಯ ಬಳಿ ಹೋದಾಗ, ಹೃದಯದ ಶಬ್ದನೇ ಸಿಗಲಿಲ್ಲ; ಉಸಿರಾಡುವುದಕ್ಕೂ ಪೂರ್ಣವಿರಾಮ! ಪಲ್ಸ್ ಸಿಗಲೇ ಇಲ್ಲ. ಎದೆಗೆ ವಿಭೂತಿಯನ್ನು ಸವರುತ್ತ, ನಾನು, ಸಾಯಿರಾಮ ಸಾಯಿರಾಮ ಎಂದು ಜಪಿಸಿದೆ. ನಿಧಾನವಾಗಿ, ಉಸಿರಾಡ ತೊಡಗಿದರು, ರಕ್ತ ಚಲನೆ ಮೊದಲಾಯಿತು. ಒಂದು ತಿಂಗಳ ನಂತರ ಯಮುನಾದಾಸರು ಪುಟ್ಟಪರ್ತಿಗೆ ಹೋದಾಗ ಬಾಬಾ, "ನಾನು ನಿನಗೆ ಪುನರ್ಜನ್ಮವಿತ್ತೆ. ನಿಮ್ಮ ಡಾಕ್ಟರು ಸಕಾಲದಲ್ಲಿ ನನ್ನ ಹೆಸರು ಹಿಡಿದ ಕರೆದ" - ಎಂದರು.

ಆದ್ದರಿಂದ ನಾಮ ಸಂಕೀರ್ತನೆಯ ಮಹತ್ವವನ್ನು ಭಕ್ತರು ಬಲ್ಲರು. ಆದರೂ ಬೊಂಬಾಯಿಯಲ್ಲಿ ಸೇರಿದ್ದ ಹಲವರು ಅನುಮಾನಿಸಿದರು "ಅಷ್ಟು ಬೇಗ ಎದ್ದು ರೂಢಿ ಇಲ್ಲವಲ್ಲಾ?" "ಶ್ರೀಮಂತರು ಬೀದಿಗಿಳಿಯುತ್ತಾರೆಯೇ? ಅವರ ಅಹಂಕಾರದ ಗತಿ ಏನು? ಅಧಿಕಾರಿಗಳ ಠೀವಿ ಕಡಿಮೆಯಾದರೆ ಗತಿ? ಅಕ್ಕ ಪಕ್ಕದವರು ಎದುರು ಬಿದ್ದರೆ? ಪೋಲೀಸಿನವರು ಸುಮ್ಮನಿರುತ್ತಾರೆಯೇ? ನಾಯಿಗಳು ಬಾಯಿ ಮುಚ್ಚಿಕೊಂಡು ಮಲಗಿರಬೇಕಲ್ಲಾ? ಬೊಗಳಿದರೆ ಬೊಗಳಲಿ ಕಚ್ಚಿದರೆ. ಹೇಗೆ ಸುಧಾರಿಸಿಕೊಳ್ಳುವುದು?" - ಇತ್ಯಾದಿ. ಕೆಲವು ಊರುಗಳಲ್ಲಿ, ಜನ ೩ ಗಂಟೆಗೇ ಎದ್ದು, ಅರ್ಧ ಫರ್ಲಾಂಗ್ ಸುತ್ತಿ, ಊರಿನವರು ಏಳುವ ಮೊದಲೇ ನಗರ ಸಂಕೀರ್ತನೆ ಮುಗಿಸಿ, ಮಲಗಿ ಮತ್ತೊಂದು ಗುಟುಕು ನಿದ್ರೆ ಮಾಡಿದರು. ಆದರೆ ಬೇಗನೆ ದೇಶಾದ್ಯಂತ ವಾತಾವರಣ ಬದಲಾಯಿತು. ಪೋಲೀಸ್ ಅಧಿಕಾರಿಗಳೇ ಖಂಜಿರಾ ಹಿಡಿದು ಮುಂಚೂಣಿಯಲ್ಲಿ ನಿಂತು ಹಾಡಿದರು. ನೆರೆಹೊರೆಯವರು ಸೇರಿದರು. ನಾಯಿಗಳೆಲ್ಲ ಸುಮ್ಮನಾದವು. ನಾಡೆಲ್ಲ ಹಾಡಾಯಿತು. ಪೇಟೆಗಳೆಲ್ಲ ಪರಮಾತ್ಮನ ಸ್ತೋತ್ರದಿಂದ ಪರಿಮಳ ಪೂರಿತವಾದುವು. ಭಕ್ತರ ಗುಂಪುಗಳು ಹೆಚ್ಚಿದವು; ಕ್ರಮ ಶಿಕ್ಷಣ ಆದರ್ಶ ಪ್ರಾಯವಾಯಿತು. ಗಾನಮಾಧುರ್ಯ ಸರ್ವ ಜನಾಪೇಕ್ಷಿತವಾಯಿತು.

ಪಶ್ಚಿಮ ಗೋದಾವರಿ ಜಿಲ್ಲೆಯ ಸತ್ಯವಾಡಾ ಗ್ರಾಮದಲ್ಲಿ ಮನೆ ಮನೆಯ ಮುಂಬಾಗಿಲೂ ತಾನೇ ದಡ ದಡನೆ ಸದ್ದು ಮಾಡಿ, ಮಂದಿಯನ್ನೆಬ್ಬಿಸಿತು! ಬೊಂಬಾಯಿ ಉಪ ನಗರದವಾದ ಚೆಂಬೂರು ನಿವಾಸಿಗಳು, ತಾವು ಎಂದು ಹೊರಟರೂ, ಮುಂಗಾರು ಹಿಂಗಾರು ಮಳೆಗಳು ತಮ್ಮನ್ನು ತೋಯಿಸದೆ, ಊರು ಸುತ್ತಿ ಸ್ವಸ್ಥಾನ ಸೇರಿ ಆರತಿ ಮಾಡಿ ಮನೆಗಳಿಗೆ ಹಿಂತಿರುಗುವ ತನಕ ಸಹಾಯ ಮಾಡುತ್ತಿವೆ ಎಂದು ತಿಳಿಸುತ್ತಾರೆ. ಅಸ್ಸಾಂ ರಾಷ್ಟ್ರದ ರಾಜಧಾನಿ ಗೌಹಾತಿ ನಗರದಲ್ಲಿ ನಗರ ಸಂಕೀರ್ತನೆಗಳನ್ನು ವ್ಯವಸ್ಥೆ ಮಾಡುವ ದತ್ತ ಗುಪ್ತ

ಅವರು ಬರೆಯುತ್ತಾರೆ: "ಆನೆ ಸೊಂಡಿಲಿನಿಂದ ಹುಯ್ದ ಹಾಗಿನ ಮಳೆಯ ಸೂಚನೆ! ತಣ್ಣನೆಯ ಬಿರುಗಾಳಿ! ಗುಡುಗು ಮಿಂಚು! ನಾವು ೩೦ ಮಂದಿ ಗಂಡಸರು ಹೆಂಗಸರು ಮಕ್ಕಳು ಮೈಮರೆತು ಭಜನೆ ಹಾಡುತ್ತ ಹೋಗುತ್ತಿದ್ದೇವೆ. ರಸ್ತೆ ಪಕ್ಕದ ಖಜಾನೆ ಕಚೇರಿ ಚಪ್ರಾಸಿಗಳು ಓಡಿ ಬಂದು ಎದುರಿಗೆ ನಿಂತು, ಬನ್ನಿ! ಒಳಕ್ಕೆ ಬನ್ನಿ! ಮಳೆ ಮುಗಿದ ಮೇಲೆ ಮುಂದಕ್ಕೆ ಹೋಗಿ" - ಎಂದು ಅಂಗಲಾಚಿದರು. ನಾವು ನಮ್ಮ ಆನಂದ ಯಾತ್ರೆಯನ್ನು ಮುಂದುವರಿಸಿದೆವು. ನಾವು ನಡೆದ ರಸ್ತೆ ಉದ್ದಕ್ಕೂ ಮಾತ್ರ ಮಳೆ ಬೀಳಲಿಲ್ಲ, ಚಿಕ್ಕ ತುಂತುರು ಕೂಡ ನಮ್ಮ ಮೇಲೆ ಬೀಳುವ ಎದೆಗಾರಿಕೆ ತೋರಿಸಲಿಲ್ಲ, ನಮ್ಮವರ ಕೂದಲೆಳೆಯನ್ನು ಕೂಡ ಆ ಬಿರುಗಾಳಿ ಕದಲಿಸಲಿಲ್ಲ. ಕೋಲೂರದೆ ನಡೆಯಲಾಗದರನೇಕರು ಬರಿಯ ಕಾಲೂರಿ ನಗರ ಸಂಕೀರ್ತನೆ ಮಾಡುತ್ತ ನಡೆದಿದ್ದಾರೆ. ಚನ್ನರಾಯ ಪಟ್ಟಣದಲ್ಲೊಬ್ಬರು ಕೋಲನ್ನು ಬಿಸುಟು ಕಾಲನ್ನೇ ನಂಬಿ ನಡೆದದ್ದನ್ನು ನಾನು ಕಣ್ಣಾರೆ ಕಂಡೆ.

"ಚಲಿಸುವ ಭಾಗವತ, ಈ ನಗರ ಸಂಕೀರ್ತನೆ" - ಎಂದಿದ್ದಾರೆ ಬಾಬಾ. ನಿದ್ರೆಯಲ್ಲಿ ಪುಟಗೊಂಡು, ಜಾಗ್ರತ್ತಿನ ಜಂಜಾಟಕ್ಕೆ ಸಿಕ್ಕಿ ತತ್ತರಿಸುವ ಮೊದಲು ಶಾಂತ ವಾತಾವರಣದಲ್ಲಿ ಸತ್ಸಂಗದ ಮಧ್ಯೆ ಭಗವನ್ನಾಮವನ್ನು ತಾನೂ ಸವಿದು ಇತರರಿಗೂ ಹಂಚುವುದೆಂದರೆ, ತನುಮನಗಳೆರಡೂ ತಂಪಾದಂತೆಯೇ. ಇದು ಆತ್ಮನೋ ಮೋಕ್ಷಾರ್ಥಂ ಜಗದ್ಧಿ ತಾಯಚ. ಸ್ವಕಾರ್ಯ, ಪರರ ಸೇವೆ, ಎರಡನ್ನೂ ಸಾಧಿಸುವುದಕ್ಕೊಂದು ಉಪಾಯ. "ಇಗೋ! ಭಗವಂತ ನಿಮಗೆ ಮತ್ತೊಂದು ದಿನವನ್ನು ಅನುಗ್ರಹಿಸಿದ್ದಾನೆ. ಕೃತಜ್ಞತೆಯಿಂದ ಸ್ವೀಕರಿಸಿ ಸಾರ್ಥಕ ಮಾಡಿಕೊಳ್ಳಿ" - ಎಂಬ ಸಂದೇಶ ಆ ಸಂಗೀತದಲ್ಲಿ ಅಡಗಿದೆ, ಎನ್ನುತ್ತಾರೆ ಬಾಬಾ.

ಜುಲೈ-೨೫ನೆ ತಾ| ಬೆಂಗಳೂರಿನ ಭಜನೆ ಮಂಡಲಿಗಳೆಲ್ಲ ಸೇರಿ ಲಾಲ್‌ಬಾಗ್‌ನಲ್ಲಿ ಅಖಂಡ ಭಜನೆಯನ್ನೇರ್ಪಡಿಸಿದರು. ದೇವಾಲಯವೀ ಹೂವಿನ ತೋಟ ಎಂಬ ಆ ಉದ್ಯಾನದ ಮುದ್ರಾವಾಕ್ಯ ಆ ದಿನ ಸಾರ್ಥಕವಾಯಿತು. ಏಕೆಂದರೆ, ಬಾಬಾ ಅಲ್ಲಿ ಆ ದಿನ ಉಪಸ್ಥಿತರಿದ್ದರು. ಸಂಜೆ ಮಳೆ ಬಂದಾಗ, ಶ್ರೀಯವರು ತಾವೇ ಹೊರಗೆ ಬಂದು, ಎಲ್ಲರನ್ನೂ ಒಳಗೆ ಕರೆದು ಕೂರಿಸಿ, ವೇದಿಕೆಯ ಮೇಲಿನ ಕುರ್ಚಿಗಳನ್ನೆಲ್ಲ ತೆಗೆಸಿ ಸ್ಥಳ ದೊರಕಿಸಿ, ತಮ್ಮ ಬಳಿ, ತಮ್ಮ ಸುತ್ತ ಜನರನ್ನು ಕೂರುವಂತೆ ಒತ್ತಾಯಪಡಿಸಿ, ತಮ್ಮ ಕರುಣೆಯನ್ನು ವ್ಯಕ್ತಪಡಿಸಿದರು.

೬೮ರ ಕೃಷ್ಣ ಜಯಂತಿಯಂದು ಬಾಬಾ ಪ್ರಶಾಂತಿ ನಿಲಯದಲ್ಲೇ ಇದ್ದರು. ದೇಶದ ನೂರಾರು ಸೇವಾ ಸಮಿತಿಗಳು ಈ ಹಬ್ಬಕ್ಕೆ, "ಸಾಯಿಕೃಷ್ಣ ಜಯಂತಿ" - ಎಂದೇ

ಹೆಸರಿಸಿದ್ದಾರೆ. ಅದನ್ನು ಚಿಕ್ಕಮಕ್ಕಳ ಹಬ್ಬವಾಗಿಯೇ ಅವರು ಆಚರಿಸುತ್ತಾರೆ. ಮಕ್ಕಳಿಂದ ಭಜನೆ, ಮಕ್ಕಳಿಗೆ ಉಡುಗೆ ತೊಡುಗೆ ಕೊಡುವುದು, ಮಕ್ಕಳ ಆಟಪಾಟಗಳು! ಆ ವರ್ಷ ಬಾಬಾ ಅವರು ಶ್ರೀ ಕೃಷ್ಣಾವತಾರ ಕುರಿತು ಮೂರು ಉಪನ್ಯಾಸಗಳನ್ನಿತ್ತರು. ಕೃಷ್, ಆಕರ್ಷಣ ಇವುಗಳಿಗೆ ಸಂಬಂಧಿಸಿದ್ದು ಕೃಷ್ಣ ನಾಮ ಎಂದರು. ಮಥುರಾ ಎಂಬ ನಾಭೀಪ್ರ ದಲ್ಲುದ್ಭವಿಸಿದ ಕೃಷ್ಣ ಪರಮಾತ್ಮ, ಮುಖವೆಂಬ ಗೋಕುಲದಲ್ಲಿ ಯಶೋದೆ ಎಂಬ ನಾಲಗೆಯಿಂದ ಪೋಷಿಸಲ್ಪಡಬೇಕೆಂದರು. ಹೆಡೆಗಳ ಮೇಲೆ ಕೃಷ್ಣನ ಪಾದ ತುಳಿದಾಗ, ಸಂಸಾರ ವಾಂಛೆ ಎಂಬ ವಿಷವನ್ನು ಕಾಳಿಂಗ ಕಕ್ಕಿತು ಎಂದರು. ಹಾಗೆಯೇ ನಿಮ್ಮ ಶಿರದೊಳಗಿನ ಅಹಂಕಾರ ಮಮಕಾರಗಳನ್ನೂ ಕೃಷ್ಣನ ಪಾದಾರಾಧನೆಯಿಂದ ತೊಲಗಿಸಿಕೊಳ್ಳಿ ಎಂದು ಬೋಧಿಸಿದರು. ಯೋಗೀಶ್ವರನಾದ ಶ್ರೀಕೃಷ್ಣ ಸಕಲ ಯೋಗ ಮಾರ್ಗಗಳಿಗೂ ಅಧಿಷ್ಠಾನ ದೇವತೆ, ಉಪದೇಷ್ಟ ಗುರು ಎಂದರು.

ಬಾಬಾ ಅವರು ಸಮರಸದಿಂದ ಸಮನ್ವಯ ಮಾಡುವುದಕ್ಕಾಗಿಯೇ ಅವತಾರ ಮಾಡಿದ್ದಾರೆ. ಭಕ್ತಿ ಜ್ಞಾನ ಕರ್ಮ ಮಾರ್ಗಗಳನ್ನು ಮಾತ್ರವೇ ಅಲ್ಲ. ದ್ವೈತ ವಿಶಿಷ್ಟಾದ್ವೈತ ಅದ್ವೈತ ವಾದಸರಣಿಗಳನ್ನೂ ಅವರು ಗೌರವಿಸಿ, ಆಯಾ ಮನಃ ಪರಿಪಾಕ ಹಂತಗಳಲ್ಲಿ ಅವು ಅತ್ಯಂತ ಅರ್ಥವತ್ತಾದ ತತ್ವಗಳು ಎಂದು ಬೋಧಿಸುತ್ತಾರೆ. ಚಿತ್ತ ಶುದ್ಧಿಯಿಂದಲೇ ಜ್ಞಾನಸಿದ್ಧಿ. ಸಾತ್ವಿಕ ಗುಣದಿಂದ ಪುನೀತರಾದವರನ್ನೆಲ್ಲ ಆನಂದ ವರ್ಷದಿಂದ ಭಗವಂತನನುಗ್ರಹಿಸುತ್ತಾನೆ ಎಂಬುದು ದ್ವೈತ ಮತ. ಜೀವ-ದೇವ ಎಂಬ ಎರಡು ಕಂಬಿಗಳ ಮೇಲಿಂದ, ಮನಸ್ಸು ಎಂಬ ಎಂಜಿನ್ (ಆತ್ಮವೇ ಚಾಲಕ) ವಿಷಯ ತುಂಬಿದ ಬಂಡಿಗಳನ್ನು ಸಾಗಿಸುತ್ತದೆ. ಭಕ್ತಿ ಶ್ರದ್ಧೆಗಳೇ ಬಂಡಿಗೂ ಬಂಡಿಗೂ ನಡುವಣ ಕೊಂಡಿಗಳು. ಇದು ವಿಶಿಷ್ಟಾದ್ವೈತ ತತ್ವ. ಆಕಾಶದಲ್ಲಿ ಮೋಡಗಳ ಚಲನ ವಲನದಿಂದ ನಿರ್ಮಿತವಾಗುವ ಕೋಟೆ ಕೊತ್ತಳ ಗೋಪುರಗಳಂತೆ, ಪರಬ್ರಹ್ಮದ ಸ್ವರೂಪದಲ್ಲಿ ಜಗತ್ತು ಭ್ರಮೆಯಂತೆ ರೂಪುಗೊಳ್ಳುತ್ತದೆ. ಇದು ಅದ್ವೈತ ತತ್ವ. ಭಗವಾನ್ ಬಾಬಾರವರ ಬೋಧೆ ಏನೆಂದರೆ, 'ನೀವು ಯಾರು' ಎಂದು ನೀವೇನು ತಿಳಿದುಕೊಂಡಿದ್ದೀರೋ ಅದು ವಿಶಿಷ್ಟಾದ್ವೈತ ದರ್ಶನ. ನೀವು ನಿಜಕ್ಕೂ ಯಾವುದೋ ಅದು ಅದ್ವೈತ ದರ್ಶನ!

೧೯೬೮ ದಸರಾ ಮಹೋತ್ಸವ; ಮಹತ್ವಪೂರ್ಣ ಉತ್ಸವ! ಸ್ವಯಂ ಸೇವಕರನ್ನುದ್ದೇಶಿಸಿ ಮಾತನಾಡಿದಾಗ, ತಾನು ಪಾರ್ಥಸಾರಥಿ ಎಂದು ಬಾಬಾ ವಿಶದಪಡಿಸಿದರು. 'ಅನನ್ಯಾಶ್ಚಿಂತಯಂತೋ ಮಾಂ ಯೇಜನಾಃ ಪರ್ಯುಪಾಸತೇ, ತೇಷಾಂ ನಿತ್ಯಾಭಿ ಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ!" - ಎಂದು ಅಭಯವಿತ್ತರು. ಎಲ್ಲರಲ್ಲಿಯೂ ನನ್ನನ್ನೂ ನನ್ನನ್ನೂ ಎಲ್ಲರಲ್ಲಿ ಕಂಡು, ಶುಶ್ರೂಷಿಸಿ, ಉಪಚರಿಸಿ, ಆದರಿಸಿ, ಆನಂದಿಸಿ ಎಂಬ ಕರೆಯನ್ನಿತ್ತರು. "ಕೆಲಸ ಮಾಡಬೇಕಾದ ಅವಶ್ಯಕತೆ ನನಗಿಲ್ಲ. ಯಾರ ನಿರ್ಬಂಧವೂ

ನಾನೊಳಗಾಗುವುದಿಲ್ಲ. ನಾನು ಎಲ್ಲಕ್ಕಿಂತ ಹೊರಗು! ಆದರೂ ನಾನು ಕರ್ಮದಲ್ಲಿ ಸದಾ ನಿರತನಾಗಿದ್ದೇನೆ. ಏಕೆ? ಲೋಕ ಸಂಗ್ರಹಕ್ಕಾಗಿ, ನಿಮ್ಮ ಉತ್ತೇಜನಕ್ಕಾಗಿ; ನಾನು ನಿಶ್ಚೇಷ್ಟಿತನಾದರೆ, ಜಗತ್ ಚಕ್ರಗಳು ತಿರುಗುವುದಾದರೂ ಹೇಗೆ? ನಾನು ಒಬ್ಬ ಮ್ಯಾನೇಜರನ್ನಾಗಲಿ, ಸೆಕ್ರೆಟರಿಯನ್ನಾಗಲಿ, ಪಿ.ಎ.ಯನ್ನಾಗಲಿ, ಎ.ಡಿ.ಸಿ.ಯನ್ನಾಗಲಿ ನೇಮಿಸಿಕೊಂಡಿಲ್ಲ. ನಾನೇ ಸ್ವತಃ ಇಲ್ಲಿಯ, ಜಗತ್ತಿನ ನಾನಾ ಮೂಲೆಗಳಲ್ಲಿಯ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತೇನೆ. ನಾನು ಆನಂದ ಸ್ವರೂಪನು. ಆನಂದವೇ ನನ್ನ ಗುರುತು, ನನ್ನ ಲಕ್ಷಣ, ಗುಣ. "ಮತ್ತೊಂದು ದಿನ, ಬಾಬಾ ಹೇಳಿದರು, "ನನಗೆ ವಿಶ್ರಾಂತಿ ತೃಪ್ತಿ, ಸಂತುಷ್ಟಿ ಯಾವುದು ಎಂದು ತಿಳಿಸಲೆ? ಸೇವೆ ಎಂಬ ಸಾಧನೆಯಿಂದ ನೀವು ಆನಂದ ಪಡೆದಾಗ!" ಭಗವದ್ಗೀತೆಯನ್ನು ಕುರಿತು ಹೇಳುತ್ತ - "ಸರ್ವ ಧರ್ಮಾನ್ ಪರಿತ್ಯಜ್ಯ" - ಎಂದು ಹೇಳಿದೆ ವಿನಹ, "ಸರ್ವ ಕರ್ಮಾನ್ ಪರಿತ್ಯಜ್ಯ" ಎಂದು ಉಪದೇಶಿಸಿಲ್ಲವೆಂದರು. ಕರ್ಮ ಅನಿವಾರ್ಯ. ಜನನದಾರಭ್ಯ ಮರಣದವರೆಗೂ ಕರ್ಮಧಾರೆ ಹರಿಯುತ್ತಲೇ ಇರುತ್ತದೆ. ಕರ್ತೃತ್ವ ಬೋಧವಿಲ್ಲದೆ, ಈಶ್ವರನೇ ಈಶ್ವರನಿಗಾಗಿ ಈಶ್ವರನ ಮೂಲಕ ಕರ್ಮ ನಡೆಸುತ್ತಿದ್ದಾನೆ ಎಂದು ನಂಬಿದರೆ, ಕರ್ಮ, ಧರ್ಮವಾಗಿ ಧರ್ಮ ಧೈರ್ಯವಾಗಿ, ಧನವಾಗಿ, ಮೋಕ್ಷ ಸಾಧನವಾಗುತ್ತದೆ ಎಂದರು.

ಧರ್ಮ, ದೇವರ ಸಂದೇಶ; ಇತಿಹಾಸದ ಅಂತರ್ವಾಣಿ; ದೇಶದ ಒಳ ಮರ್ಮ; ರಾಷ್ಟ್ರದ ರಕ್ತನಾಳ. ಚಿಟ್ಟೆಯಾಗಿ ಹೊರ ಹಾರಲಿರುವ ಹುಳದ ಗೂಡು! ಬ್ರಹ್ಮವಾಗಿ ವಿಹರಿಸಲಿರುವ ಜೀವದ ಪಂಜರ! ಪೂರ್ಣಾಹುತಿಯಿಂದ ಸಪ್ತಾಹ ಯಜ್ಞವನ್ನು ಸಮಾಪ್ತಿಗೊಳಿಸಿದ ಸುಮುಹೂರ್ತದಲ್ಲಿ, "ಬ್ರಹ್ಮಾ ರ್ಪಣಂ ಬ್ರಹ್ಮ ಹವಿಃ ಬ್ರಹ್ಮಾ ಗ್ನೌ ಬ್ರಹ್ಮಣಾ ಹುತಂ, ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮ ಸಮಾಧಿನಃ" - ಎಂಬ ತಮ್ಮ ಹಿಂದಿನ ಉಕ್ತಿಯನ್ನು ವಿವರಿಸಿ ಮಹೋಪನ್ಯಾಸವನ್ನನುಗ್ರಹಿಸಿದರು. ಸರ್ವಂ ಬ್ರಹ್ಮಮಯಂ, ಬ್ರಹ್ಮವಲ್ಲದೆ ಬೇರೊಂದಿಲ್ಲವೆಂದರು. ಬೆಳ್ಳಿಯ ವಿಗ್ರಹವೊಂದರಲ್ಲಿ, ಶಿರಸ್ಸು, ಅಂಗಾಂಗ, ಕಂಕಣ ಕಿರೀಟ ಉಡುಗೆ ತೊಡುಗೆ ಎಲ್ಲವೂ ಬೆಳ್ಳಿಯಲ್ಲವೆ? - ಎಂದು ಕೇಳಿದರು. ಏಕೋಹಂ ಎಂದು ತಿಳಿದ ಬ್ರಹ್ಮ, ಬಹುಸ್ಯಾಂ ಎಂದು ಸಂಕಲ್ಪಿಸಿ, ಅಖಿಲಾಂಡ ಕೋಟಿ ಬ್ರಹ್ಮಾಂಡವೆಲ್ಲ ತಾನೇ ಆದ. ಆದ್ದರಿಂದ, ಅಹಂ ಬ್ರಹ್ಮಾಸ್ಮಿ, ಇದು ಅದು ಅವನು ಇವನು ಎಲ್ಲವೂ ಬ್ರಹ್ಮವೇ. ಎಂದು ಸ್ಪಷ್ಟ ಹೇಳಿದರು. ಸ್ವಸ್ವರೂಪವನ್ನರಿತು ಕೊಳ್ಳಲು ಸಾಧ್ಯವಾಗದ ನಮ್ಮನ್ನು ಕಾಡುತ್ತಿರುವ 'ಮಲ'ವನ್ನು ಕರ್ಮ ಮಾರ್ಗದಿಂದಲೂ, 'ವಿಕ್ಷೇಪ'ವನ್ನು ಭಕ್ತಿ ಮಾರ್ಗದಿಂದಲೂ, 'ಆವರಣ'ವನ್ನು ಜ್ಞಾನಮಾರ್ಗದಿಂದಲೂ ಗೆಲ್ಲಬಹುದೆಂದುಪದೇಶಿಸಿದರು.

ನವರಾತ್ರಿ ಹಬ್ಬದಲ್ಲಿ, ಮೂರು ದಿನಗಳು ಪರಾಶಕ್ತಿಯನ್ನು ಮಹಾಕಾಳಿ ರೂಪದಲ್ಲಿ, ಮತ್ತೆ ಮೂರು ದಿನಗಳು ಮಹಾಲಕ್ಷ್ಮಿ ರೂಪದಲ್ಲೂ, ಮಹಾ ಸರಸ್ವತಿಯ ರೂಪದಲ್ಲಿ ಕಡೆಯ ಮೂರು ದಿನಗಳಲ್ಲೂ ಆರಾಧಿಸುವುದು ವಾಡಿಕೆ. ಈ ಮೂರು ರೂಪಗಳು ತಾಮಸ, ರಾಜಸಿಕ ಸಾತ್ವಿಕ ಗುಣಗಳಿಗನುಗುಣವಾದವು. ವಿರೋಧ ಶಕ್ತಿಗಳನ್ನಡಗಿಸಿ, ಮಾನವ ಜಯಗಳಿಸುವುದೇ ವಿಜಯದಶಮಿಯ ಸಂದೇಶ. ಪ್ರಶಾಂತಿ ನಿಲಯದಲ್ಲಿ ನಡೆಯುವ ನವರಾತ್ರಿಯ ಉತ್ಸವಕ್ಕೆ, ಧರ್ಮ ದೀಕ್ಷೆಗಾಗಿ, ಶಾಸ್ತ್ರ ಶಿಕ್ಷಣಕ್ಕಾಗಿ, ಧೈರ್ಯ ಸಂಪಾದನೆಗಾಗಿ ಪ್ರಪಂಚದ ನಾನಾ ದೇಶಗಳಿಂದ ಸಾಧಕರು ತಂಡೋಪತಂಡವಾಗಿ ಸೇರುತ್ತಾರೆ. ಅಲ್ಲಿ ಜ... ದೊರಕುವ ಸತ್ಸಂಗ, ಭಕ್ತಿಯ ಪರಿಮಳದಿಂದ ಪರಿಶುದ್ಧವಾಗಿರುತ್ತದೆ. ಪ್ರತಿಯೊಬ್ಬ... ಹೃದಯದಲ್ಲೂ ಭಗವಂತನನು ಗ್ರಹಕ್ಕಾಗಿ ಕೃತಜ್ಞತೆ, ಕಾತುರತೆ ತುಂಬಿರುತ್ತದೆ. ಯಾವುದನ್ನು ತಿಳಿದರೆ ಎಲ್ಲವೂ ತಿಳಿಯಾಗುತ್ತದೋ ಅದನ್ನರಿಯಲು ಬಾಬಾ ಅವರಿಂದ ಪ್ರೇರಿತರಾ... ಪಂಡಿತವರ್ಯರು, ಅವಾಂಗ್ಮ ನೋಗೋಚರವಾದ ಆ ತತ್ವವನ್ನು ಕುರಿತು, ಸನ್ನಿಧಾನದಲ್ಲಿ ಪ್ರವಚನ ಮಾಡುತ್ತಾರೆ. ಅವರ ಅಭಿಪ್ರಾಯಗಳನ್ನು ಪುಷ್ಟೀಕರಿಸುತ್ತ ಬಾಬಾ ಅವರು ತಮ್ಮ ಸರಳ ಸರಸ ಸಂಭಾಷಣೆಯಿಂದ ಸಹಸ್ರಾರು ಜನರನ್ನು ಸಂತುಷ್ಟಿ ಪಡಿಸುತ್ತಾರೆ. ಈ ಯುಗದ ಅತ್ಯಂತ ಜನಪ್ರಿಯ ಅಧ್ಯಾಪಕರು, ಬಾಬಾ. ಪ್ರೇಮದ ಪಥ ಹಿಡಿಸಿ, ಅವರು ನಮ್ಮನ್ನು ಜ್ಞಾನ ಜ್ಯೋತಿಯೆಡೆಗೆ, ಮಾತಿನ ಚಮತ್ಕಾರ, ಕಂಠಮಾಧುರ್ಯ ಕಟಾಕ್ಷದ ಕನಿಕರ, ಹಾಸ್ಯ... ತಿವಿತ, ಟೀಕೆಯ ರೀವಿ, ಇವುಗಳಿಂದ ಸುಲಭವಾಗಿ ನಡೆಯಿಸುತ್ತಾರೆ.

ವೇದ ಪುರುಷ ಸಪ್ತಾಹ ಜ್ಞಾನ ಯಜ್ಞ ಎಂಬ ಒಂದು ಪ್ರತ್ಯೇಕ ಯಜ್ಞವನ್ನು ಶ್ರೀಯವರು ಉತ್ಸವದ ಅಂಗವಾಗಿ ಏರ್ಪಡಿಸುತ್ತಾರೆ. ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಅಜವೂ ಅವ್ಯಯವೂ ಅನಾದ್ಯನಂತವೂ ಆದ ಪರತತ್ವದ ಧ್ಯಾನದಿಂದ ಹಿಡಿದು, ಜಗದ... ಚಕ್ಷುವಾದ ಸೂರ್ಯದೇವನ ನಮಸ್ಕಾರ ಪೂರ್ವಕ ಆರಾಧನೆ, ನಿರಾಕಾರದಿಂದ ಸಾಕಾರ ರೂಪ ತಾಳುವ, ಸಾಕಾರದಿಂದ ನಿರಾಕಾರಕ್ಕೆ ಲಯವಾಗುವ ಮುಹೂರ್ತವನ್ನು ಸೂಚಿಸುವ ಲಿಂಗ ಪೂಜೆ, ಸಾಕಾರ, ಸಗುಣ, ಸರ್ವಮಂಗಳ, ಸರ್ವಕರ್ಮ, ಫಲಪ್ರದಾಯಿನಿ ರಾಜರಾಜೇಶ್ವರಿ ವಿಗ್ರಹ ಪೂಜೆ, ಮೊದಲಾದ ವೈದಿಕ ಕ್ರಮಗಳನ್ನೆಲ್ಲ ಆ ಯಜ್ಞ ಒಳಗೊಂಡಿದೆ. ಸರಸ್ವತಿ ನದೀ ತೀರದಲ್ಲಿ ಋಷಿಗಳು ವೇದ ಪಾರಾಯಣ ಮಾಡುತ್ತಿದ್ದ ವೈಭವವನ್ನು ಕಣ್ಣು ಕಿವಿಗ... ಮತ್ತೆ ತರುವಂಥ ಕಾರ್ಯ ಕ್ರಮವು ದಿನವೂ ಗಂಟೆಗಟ್ಟಲೆ ನಡೆಯುವುದು. ಶ್ರೀಮದ್ರಾಮಾಯಣ, ಶ್ರೀಮದ್ ಭಾಗವತ, ಶ್ರೀದೇವೀ ಭಾಗವತ ಮುಂತಾದ ದಿ... ಗ್ರಂಥಗಳ ಪಠನ ಬೇರೆ, ಅಖಂಡವಾಗಿ ಯಜ್ಞ ವೇದಿಕೆಯ ಮೇಲೆ ಜರುಗುತ್ತದೆ. ಆ... ಸಂಯಮನ, ಇಂದ್ರಿಯ ನಿಗ್ರಹಗಳನ್ನು ಹಲವಾರು ಉಪಕರಣಗಳ ಮೂಲಕ ನಮ... ಕಲಿಸುವುದೇ ಬಾಬಾ ಅವರ ಉದ್ದೇಶ.

ಸಾಮಾನ್ಯವಾಗಿ ಎಲ್ಲ ನವರಾತ್ರಿಗಳಲ್ಲೂ, ತಾವೇ ರಚಿಸಿ, ನಟರನ್ನು ಆರಿಸಿ, ಅವರಿಗೆ ಶಿಕ್ಷಣ ಒದಗಿಸಿ, ತಾವೇ ರಂಗಸ್ಥಳವನ್ನು ಸಜ್ಜುಗೊಳಿಸಿ, ಉಡಿಗೆ ತೊಡಿಗೆಗಳನ್ನು ನಿರ್ಣಯಿಸಿ, ಸಿದ್ಧಪಡಿಸಿ, ಒಂದು ತೆಲುಗು ನಾಟಕವನ್ನು ಪಾಠಶಾಲಾ ಬಾಲಕರಿಂದ ಆಡಿಸುವುದು ಬಾಬಾ ಅವರ ಲೀಲೆ. ಆ ವರ್ಷದ ನಾಟಕ, ಧ್ರುವ ಕುಮಾರನ ಚರಿತ್ರೆಗೆ ಸಂಬಂಧಿಸಿದ್ದಾಗಿತ್ತು. ತಂದೆಯ ಮಡಿಲಲ್ಲಿ ಕೂರುವ ಸೌಖ್ಯಕ್ಕಾಗಿ ತಪಸ್ಸು ಮಾಡಿದ ಆ ಹುಡುಗ, ಶ್ರೀಮನ್ನಾರಾಯಣನ ನಿತ್ಯ ಸಾನ್ನಿಧ್ಯವನ್ನೇ ಕಡೆಗೆ ಕೋರಿದನಲ್ಲವೆ? ಈ ಸನ್ನಿವೇಶದಲ್ಲಿ ನಾರಾಯಣ ಆ ನಾಟಕದಲ್ಲಿ, "ಜನ ಆರ್ತರಾಗಿ ಅರ್ಥಾರ್ಥಿಗಳಾಗಿ ಯಾವುದೋ ಒಂದು ತುಚ್ಛವಾದ ಆಸೆಯ ನಿವಾರಣೆಗಾಗಿ ನನ್ನ ಬಳಿ ಬರುತ್ತಾರೆ. ಆದರೆ ನಾನು ಅವರ ಮುಂದೆ ಪ್ರತ್ಯಕ್ಷವಾದಾಗ, ಅವರು ಅದನ್ನೆಲ್ಲ ಮರೆತು, "ನನ್ನ ಅನುಗ್ರಹ ಪೊಂದೇ ಸಾಕು ಎಂದು ಅಂಗಲಾಚುತ್ತಾರೆ" - ಎನ್ನುತ್ತಾರೆ. ಈ ಮಾತುಗಳು ಭಕ್ತರೆಲ್ಲರ ಅನುಭವದಿಂದ ಕಡೆದು ತೆಗೆದ ವಾಸ್ತವಾಂಶ.

ದಸರಾ ಹಬ್ಬ ಪೂರ್ತಿಯಾದ ನಂತರ, ಇಪ್ಪತ್ತು ಸಹಸ್ರ ಜನ, ಮನಸ್ಸಿಲ್ಲದ ಮನಸ್ಸಿನಿಂದ ಪ್ರಶಾಂತಿ ನಿಲಯದಿಂದ ತಮ್ಮ ತಮ್ಮ ಊರುಗಳಿಗೆ ತೆರಳಿದರು. "ತುಂಬು ಪ್ರೇಮದಿಂದ ನಾನು ನಿಮಗೆ ಕೊಟ್ಟಿರುವ ಉಪದೇಶವನ್ನು ಮನನ ಮಾಡುತ್ತಾ ಇರಿ. ಮಾಡಿದ ಅಪರಾಧಗಳಿಗಾಗಿ ನೊಂದು, ಮಾಡಬೇಕೆನಿಸುವ ಅಪರಾಧಗಳನ್ನು ದೂರಕ್ಕೆ ದೂಡಿರಿ; ನವ ಜೀವನಕ್ಕಾಗಿ ಹಾತೊರೆಯಿರಿ. ಹೃದಯ ಕ್ಷೇತ್ರದಲ್ಲಿ ಬೇರು ಬಿಟ್ಟಿರುವ ದುರಭ್ಯಾಸಗಳು, ದುರ್ವಚನಗಳು, ದುಷ್ಕೃತ್ಯಗಳು, ಇವುಗಳನ್ನು ಕಿತ್ತೊಗೆಯಿರಿ. ಕರ್ತವ್ಯ ಪಾಲನೆಯಿಂದ ದಿವ್ಯ ಸ್ಥಾನವನ್ನು ಪಡೆಯಿರಿ" - ಎಂಬ ಶ್ರೀಯವರ ಸಂದೇಶ ಅವರ ಮನದಲ್ಲಿ ಮೊಳಗಿ ಮಾರ್ದನಿ ಕೊಡುತ್ತಿತ್ತು.

# ದೀಪದ ಜಾತ್ರೆ

ದಸರಾ ಮುಗಿದ ಕೂಡಲೇ, ಅನಂತಪುರದಿಂದ ಶ್ರೀಯವರು ಧಾರವಾಡದ ಪ್ರಯಾಣ ಹೊರಟರು. ಉತ್ತರ ಕರ್ನಾಟಕದಲ್ಲಿನ ಏಳೆಂಟು ದಿನಗಳ ಪ್ರವಾಸಕ್ಕೆ ಸನ್ನದ್ಧರಾಗಿ ಮಿತ ಪರಿವಾರದೊಂದಿಗೆ ಅವರು ಕಾರಿನ ಹತ್ತಿರ ಬಂದಾಗ, ಯಾರೋ ಒಬ್ಬರು, "ಸ್ವಾಮಿ! ಇದು ತಮ್ಮ ಪ್ರಥಮ ಪ್ರವಾಸ. ಇದನ್ನೇನೆಂದು ಕರೆಯೋಣ?", ಎಂದು ಕೇಳಿದರು. ಬಾಬಾ ಅವರು ಆ ಕಡೆ ತಿರುಗಿ, "ಅಮರ ಪುರಿಯ ಆನಂದ ಯಾತ್ರೆ ಅನ್ನಿ" - ಎಂದರು. ಹೌದು, ಅವರೇ ನಿಶ್ಚಯಿಸಿ, ಅವರೇ ಸಂಚಾಲಕರಾಗಿ, ಅವರೇ ಯಜಮಾನರಾಗಿ, ಅತಿಥಿಯಾಗಿ, ಅವರೇ ರಥಿಕನಾಗಿ, ಸಾರಥಿಯಾಗಿ, ಗತಿಯಾಗಿ, ಗುರಿಯಾಗಿ ನಡೆಯಿಸಿದ ಯಾತ್ರೆ ಅದು! ಲಕ್ಷಾಂತರ ಜನರಿಗೆ ಆನಂದವನ್ನಿತ್ತ ಯಾತ್ರೆ!

ಬಳ್ಳಾರಿ ನಗರವನ್ನು ಕಾರುಗಳು ಹಾದು ಹೋದಾಗಲೇ ಹರ್ಷ ವರ್ಷದ ಸ್ಫೂರ್ತಿ ಸುತ್ತ ಹತ್ತಾರು ಊರುಗಳನ್ನು ತಣಿಸಿತು. ಫೋನ್ ಮೂಲಕವೂ ಭಕ್ತರು ತಮ್ಮ ಬಂಧು ಮಿತ್ರರನ್ನೆಬ್ಬಿಸಿ, ಅವರಿಗೆ ಉತ್ಸಾಹ ನೀಡಿದರು. ದೀಪಾವಳಿ ಹಬ್ಬದ ಹತ್ತಿರದ ದಿನಗಳಲ್ಲಿ ಬಾಬಾ ಬರುತ್ತಿದ್ದಾರೆ ಎಂಬ ವಾರ್ತೆ, ಪ್ರತಿ ಹೃದಯದಲ್ಲೂ ದೀಪವಾಗಿ ಬೆಳಗಿತು.

ಗದಗ್‌ನಲ್ಲಿ ಅವರ ಅನುಗ್ರಹಕ್ಕೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಪಾತ್ರರಾದವರ ಭಾರೀ ಗುಂಪೊಂದು, ನಗರ ದ್ವಾರದಲ್ಲೇ ಅಂಜಲಿ ಬದ್ಧ ಕಾದು ನಿಂತಿತ್ತು. ಭಕ್ತರು ಅವರ ದರ್ಶನ ಪಡೆದರು. ಹುಬ್ಬಳ್ಳಿ ನಗರಾಧ್ಯಕ್ಷರೂ, ಮುನ್ನೂರಕ್ಕೂ ಹೆಚ್ಚು ಪೌರರೂ ಊರ ಸರಹದ್ದಿನಲ್ಲಿ ಸ್ವಾಗತ ನೀಡಿದರು. "ನಮ್ಮ ನಗರ ಸುಖ ಸಂತೋಷಗಳಿಂದ ಸಂಪತ್ಸಮೃದ್ಧಿಯಿಂದ, ಆರೋಗ್ಯ ಭಾಗ್ಯದಿಂದ ಕಂಗೊಳಿಸುವಂತೆ ತಾವು ಆಶೀರ್ವದಿಸಬೇಕು" - ಎಂದು ಪ್ರಾರ್ಥಿಸಿದರು. ಧಾರವಾಡವನ್ನು ಸೇರುವ ಮೊದಲೇ, ವಿದ್ಯಾಗಿರಿಯಲ್ಲಿ ವಿರಾಜಮಾನವಾಗಿರುವ ವಿವಿಧ ಸಂಸ್ಥೆಗಳ ಪರವಾಗಿ ಪ್ರಿನ್ಸಿಪಾಲ್ ಧಾರ್ವಾಡ್ಕರ್ ಅವರು ಅಧ್ಯಾಪಕರೂ ಯುವಕರೂ ಜಯ ಘೋಷದಿಂದ ಅವರನ್ನು ಬರಮಾಡಿಕೊಂಡರು. ವಿಶ್ವವಿದ್ಯಾಲಯದ ಆವರಣದಲ್ಲಿನ ವೈಸ್ ಚಾನ್ಸಲರ್ ಅವರ ಬಂಗಲೆಯನ್ನು ಬಾಬಾ ಅವರು ರಾತ್ರಿ ಹತ್ತು ಗಂಟೆ ಸುಮಾರಿಗೆ ಸೇರಿದರು.

ಡಾ| ಅಪ್ಪಾ ಸಾಹೇಬ್ ಅಡ್ಕೆಯವರು ಆಗ ತಾನೆ ಆಸ್ಟ್ರೇಲಿಯಾ ಪ್ರವಾಸ ಮುಗಿಸಿ ಹಿಂದಿರುಗಿದ್ದರು. ಅವರಿಗೆ ಕೆಲವು ದಿನಗಳಿಂದ ತೀವ್ರ ಜ್ವರ; ಹಾಸಿಗೆ ಹಿಡಿದು ಮಲಗಿದ್ದರು. ಆದರೂ ಅವರು ನನಗೆ ಹೇಳಿದರು: "ಬಾಬಾ ಬಂದ ಕ್ಷಣವೇ ನನ್ನ ಜ್ವರ ಮಾಯವಾಯಿತು. ಎಂದೂ ಇಲ್ಲದ ದೇಹಶಕ್ತಿ, ಮನೋದಾರ್ಢ್ಯ, ಸಂತುಷ್ಟಿ ನನ್ನಲ್ಲಿ ಹರಿದುಂಬಿಸಿತು". ಅವರನ್ನು ಹಿಡಿದು ನಿಲ್ಲಿಸಿ, "ಹುಷಾರಾಗಿರಿ, ನಿಮ್ಮ ಆರೋಗ್ಯದ ಕಡೆ

ಗಮನವಿಡಿ" - ಎಂದು ಹೇಳುವವರಾರೂ ಇರಲಿಲ್ಲ. ಅದರ ಅವಶ್ಯಕತೆಯೂ ಕಂಡು ಬರಲಿಲ್ಲ. "ಬಾಬಾ ಅವರ ಉತ್ತರ ಕರ್ನಾಟಕ ಪ್ರವಾಸದ ವೇಳಾಪಟ್ಟಿಯನ್ನು ತಯಾರಿಸುವುದು ಸುಲಭ ಕಾರ್ಯ ಎಂದೆಣಿಸಿದ್ದೆ. ಆದರೆ, ನೂರಾರು ಊರುಗಳು ಅವರಿಗಾಗಿ ಪರಿತಪಿಸುತ್ತಿದ್ದುವು. ಗಂಟೆಗಟ್ಟಲೆ ತಮ್ಮಲ್ಲಿ ಉಳಿಯಬೇಕು ಎಂದು ಒತ್ತಾಯ ಪಡಿಸಿದುವು. ನನಗೆ ದಿಗ್ಭ್ರಮೆ ಹಿಡಿಯಿತು. ಆಗ ಬಾಬಾ ಅವರೇ, ನಿನಗ್ಯಾಕೆ ಈ ಕಾಳಜಿ? ನಾನೇ ಎಲ್ಲ ನಿಶ್ಚಯಿಸಿ, ಎಲ್ಲರನ್ನೂ ತೃಪ್ತಿಪಡಿಸುತ್ತೇನೆ, ಬಿಡು" - ಎಂದರು.

ಆ ರಾತ್ರಿ, ಮತ್ತೆ ಮರುದಿನ ಬೆಳಿಗ್ಗೆ, ಆ ಬಂಗಲೆಯ ಅಂಗಳದಲ್ಲಿ ಕುಳಿತು ನಾವ ಸಂಕೀರ್ತನೆ ಮಾಡಿದ ಸಹಸ್ರಾರು ಮಂದಿಗೆ ದರ್ಶನ ಕೊಟ್ಟರು. ಎಲ್ಲ ಸತ್ಯಸಾಯಿ ಸೇವಾ ಸಮಿತಿಗಳ ಅಧ್ಯಕ್ಷರುಗಳನ್ನೂ, ಕಾರ್ಯದರ್ಶಿಗಳನ್ನೂ ಸಂಜೆ ಒಂದೆಡೆ ಸೇರಿಸಿ, ಇಂತಿಂಥ ದಿನ, ಇಂತಿಂಥ ಕಡೆ ಪ್ರಯಾಣ ಹೊರಟು, ಇಂತಿಂಥ ಊರುಗಳ್ನು ಇಷ್ಟಿಷ್ಟು ಕಾಲಸಂದರ್ಶಿಸಿ, ಇಂತಿಂಥ ಕಾರ್ಯಕ್ರಮವನ್ನು ನಡೆಯಿಸಿ ಕೊಡುತ್ತೇನೆ, ಎಂದು ಬಾಬಾ ಅವರು ತೀರ್ಮಾನಿಸಿದರು. ಸುಮಾರು ಇಪ್ಪತ್ತು ಸಾವಿರ ಮಂದಿ ಸೇರಿದ್ದ ಮಹಾ ಸಭೆಯನ್ನುದ್ದೇಶಿಸಿ, ಡಾ| ಅಡ್ಕೆಯವರು ಬಾಬಾ ಅವರನ್ನು ಉತ್ತರ ಕರ್ನಾಟಕಕ್ಕೆ ಸ್ವಾಗತಿಸಿದರು. "ಬಾಬಾ ಅವರ ಕೃಪಾಕಟಾಕ್ಷ ವೀಕ್ಷಣದಿಂದ ಈ ವಿಶ್ವವಿದ್ಯಾಲಯ ಇಂದು ಪಾವನವಾಗಿದೆ. ಇಲ್ಲಿ ನಾವು ವಾಸ್ತುಗಳ ವಾಸ್ತವ ಸ್ಥಿತಿಗಳನ್ನು, ಹುಟ್ಟು, ಬದುಕು, ಕ್ಷೀಣ ಹೊಂದಿ, ಅಳಿಯುವ ವ್ಯಕ್ತಿಗಳನ್ನೂ, ಶಕ್ತಿಗಳನ್ನೂ, ಅಳೆದು ಅರಿತುಕೊಳ್ಳಲು ಪ್ರಯತ್ನಿಸುತ್ತಿದ್ದೇವೆ. ತಿಳಿವ ಬೆಳವಣಿಗೆಯಿಂದ ನಾವು ಉಳಿದ ಬಗೆ ತೋರದು. ನಮ್ಮ ಮಸ್ತಕಗಳು ಪುಸ್ತಕಗಳಾಗುತ್ತಿವೆ! ನಮ್ಮ ಎದೆಗಳು ಮಿದುವಾಗುತ್ತಿಲ್ಲ! ಕಾಮದಿಂದ ಕಲ್ಲಿಗೂ ಮಣ್ಣಿಗೂ ಕಾತರಿಸಿದ ಅಹಲ್ಯೆ, ಕಲ್ಲಾಗಿಯೇ ಉಳಿದಳು. ರಾಮ ಪಾದಸ್ಪರ್ಶದಿಂದ ಆಕೆ ಮತ್ತೆ ಚಿಗುರಿ ಚೇತನಗೊಂಡು ಚಿರಂಜೀವಿಯಾದಳು. ನಮಗೂ ಆ ಭಗವದನುಗ್ರಹ ಬೇಕಾಗಿದೆ. ಬಾಬಾ ಅವರೇ! ನಮ್ಮನ್ನು ಎಬ್ಬಿಸಿ! ನಮ್ಮನ್ನೂ 'ಸತ್ಯಂ ಶಿವಂ ಸುಂದರಂ' - ಎಂಬ ಆ ಶುಭ ಸ್ಥಾನಕ್ಕೆ ನಡೆಯಿಸಿ" - ಎಂದರು.

ಡಾ| ಗೋಕಾಕರು, ನಿಮ್ಮ ಆತಂಕಗಳು, ಅಸಂತೃಪ್ತಿಗಳು, ಕೊರತೆಗಳು, ಕುಂಠಿತಗಳು, ಎಲ್ಲವನ್ನೂ ಬಾಬಾ ಅವರಿಗೆ ಸಮರ್ಪಿಸಿ, ಅವರಿಂದ ಆನಂದದಾಯಕವಾದ ಆಶೀರ್ವಚನ ವನ್ನು ಪಡೆಯಿರಿ, ಎಂದು ಕರೆಯಿತ್ತರು.

"ಕನ್ನಡ ಕಸ್ತೂರಿ ಎನ್ನುತ್ತೀರಿ. ನನ್ನ ತೆಲುಗು ಭಾಷಣವನ್ನು ತರ್ಜುಮೆ ಮಾಡಿಕೊಳ್ಳಲು ಈಗ ಇಲ್ಲಿ ಕಸ್ತೂರಿ ಇಲ್ಲ. ಆದ್ದರಿಂದ ಪ್ರಪ್ರಥಮವಾಗಿ ನಾನು ನಿಮಗೆ ಕನ್ನಡದಲ್ಲೇ ನನ್ನ ಸಂದೇಶವನ್ನು ಕೊಡುತ್ತೇನೆ. ನಿಮ್ಮ ಭಾಷೆಯ ಮಾಧುರ್ಯಕ್ಕೆ ಅದರಿಂದ ಧಕ್ಕೆ ತಗುಲದೆಂದು ಭಾವಿಸುತ್ತೇನೆ" - ಎಂದು ಬಾಬಾ ಅವರು ಮೊದಲು ಮಾಡಿದಾಗ, ನೆರೆದಿದ್ದ ಜನಸ್ತೋಮ ಅವರ ಅಪಾರ ಪ್ರೇಮಕ್ಕೆ "ನಮೋ" ಎಂದಿತು.

ಕೇಳುವವರ ಮೇಲಿನ ಪ್ರೇಮದಿಂದ, ಅವರಿಗೆ ತಮ್ಮ ಸಂದೇಶ ಅರ್ಥವಾಗಬೇಕು ಎಂಬ ಕರುಣೆಯಿಂದ, ಬಾಬಾ ಅವರು ಅಂದು ಕನ್ನಡದಲ್ಲೇ ಮಾತನಾಡಿದರು. ಓ ಸ್ವಾಹಿಲಿಯಲ್ಲೂ ಮಾತನಾಡಿದವರು! ಆ ದಿನ ಸ್ವಾಮಿ ಒಂದೂವರೆ ಗಂಟೆ ಕಾಲ ತ ಉಪದೇಶವಾಹಿನಿಯನ್ನು ಸುಮಧುರವಾಗಿ ಹರಿಸಿದರು. ಧಾರವಾಡದ ಜನತೆ "ಆ! ಎ ಮನೋಹರ!" "ಎಂಥ ಬೆಳಕು!" "ಆ! ಏನದರ ಆನಂದ!" "ಗಂಗಾ ಪ್ರವಾಹ!" - ಎ ಪುಳಕಗೊಂಡರು. ಉಪನ್ಯಾಸದ ನಂತರ, ಬಾಬಾ ಅವರು ನಾಲ್ಕೈದು ನಾಮಾವಳಿಗಳನ್ನು ತ ಹಾಡಿ, ಸಭಿಕರಿಂದ ಹಾಡಿಸಿದರು. ಶಿವ, ರಾಮ, ಕೃಷ್ಣ, ಸುಬ್ರಹ್ಮಣ್ಯ, ಶಕ್ತಿ, ವಿ ಮುಂತಾದ ವಿವಿಧ ರೂಪ ನಾಮಗಳಿಂದ ತಿಳಿಯಲಾಗುವ ಪರಮಾತ್ಮನನ್ನು ಸಭಿಕ ಮನದಣಿಯೆ ಕೊಂಡಾಡಿದರು. ಒಂದೇ ರೂಪ, ನಾಮವನ್ನು ಭಗವಂತನಿಗೆ ತೊಡಿಸಿ ಅ ಮೇಲಿನ ನಂಬಿಕೆ ಸಡಿಲವಾಗದಿರಲು ಇತರ ರೂಪ ನಾಮಗಳನ್ನು ವರ್ಜಿಸಿದವರು ಕೂಡ ದಿನ ಆ ಭಕ್ತಿ ಲಹರಿಯಿಂದ ಉತ್ಸಾಹಗೊಂಡು, ಎಲ್ಲ ರೂಪ ನಾಮಗಳಲ್ಲೂ ಬೆಳ ಜಗದಧಿನಾಯಕನನ್ನು ಅಂತಃಕರಣಪೂರ್ವಕ ಆರಾಧಿಸಿದರು. ಎಲ್ಲರ ಅಂತಃಕರಣದಲ್ಲೂ ಅ ತಂಪು ಕೊಡುವ ಭಗವದಂಶವಾದ ಚಿಲುಮೆ, ಅವರ ಧ್ವನಿ ಕೇಳಿದ ಕೂಡಲೇ ಚಿ ಹರಿದು ಹೊರಳಿ ಹೊಳೆಯಾಗುವುದು ಸಹಜ!

ಅಂದಿನಿಂದ ನಿಶ್ಚಿತ ವೇಳಾಪಟ್ಟಿಯಂತೆ, ಬಾಬಾ ಅವರ ಪ್ರವಾಸ ಕಾರ್ಯಕ್ರ ಮುಂಬರಿಯಿತು. ವಿದ್ಯಾಗಿರಿ ಕಾಲೇಜಿನ ಅಂಗಳದಲ್ಲಿ ಮಹಾಸಭೆ ನಡೆಯಿತು. ಸ್ವಾಮಿ ಅ ಒಂದು ಗಿಡವನ್ನು ನೆಟ್ಟರು. ಪ್ರಿನ್ಸಿಪಾಲರಿಗೆ ರತ್ನದುಂಗುರವೊಂದನ್ನು ಸೃಷ್ಟಿಸಿ ತೊಡಿಸಿ "ಪ್ರೇಮ ಸ್ವರೂಪರಾಗಿ ಬೆಳೆಯಿರಿ, ಬಾಳಿರಿ. ಯಾರನ್ನೂ ದ್ವೇಷಿಸಬೇಡಿ. ಯಾರಿಗ ಹೆದರಬೇಡಿ. ಇತರರ ದುಃಖದ ಕಾರಣವನ್ನು ಕಂಡು ಹಿಡಿದು, ಅದನ್ನು ನಿವಾರಿಸಿ! ಇತ ಸುಖದ ಸೊಬಗನ್ನು ಅರಿತು, ನೀವೂ ಆನಂದದಲ್ಲಿ ಭಾಗಿಗಳಾಗಿರಿ! ಕಾಲೇಜಲ್ಲಿ ಡಿ ಸಂಪಾದನಾ ದೃಷ್ಟಿಯಿಂದ ವಿವಿಧ ವಿಷಯಗಳನ್ನು ವ್ಯಾಸಂಗ ಮಾಡುವುದರ ಜೊತೆಗೆ, ಸ ಶೀಲ, ಸತ್ ಸಂಗ, ಸತ್ ಚಿಂತನೆ, ಸತ್ ಪ್ರವರ್ತನೆಗಳನ್ನೂ ಕಲಿಯಿರಿ! ಮೌನ ಮಹಿಮೆಯನ್ನೂ, ಧ್ಯಾನದ ಪ್ರಯೋಜನವನ್ನೂ ತಿಳಿದು ಆಚರಿಸಿ. ಜೀವನದ ಜಂಜಾಟದ ಇವು ನಿಮಗೆ ಅತ್ಯಂತ ಉಪಕಾರಿಗಳಾಗಬಲ್ಲವು. ಸನಾತನ ಧರ್ಮದ ಅಮೂ ಕೊಡುಗೆಗಳಿವು. ಇವನ್ನು ನೆಲೆಗೊಳಿಸುವ ಸಲುವಾಗಿಯೇ ನಾನು ಬಂದಿರುವೆನು" - ಎಂದ ಬಾಬಾ.

ವಿದ್ಯಾಗಿರಿಯಿಂದ ಸ್ವಾಮಿ ಹುಬ್ಬಳ್ಳಿಗೆ ತೆರಳಿದರು. ಅಲ್ಲಿ ಮೆಡಿಕಲ್ ಕಾಲೇಜ್ ಸೇರಿದ ಕಟ್ಟಡಗಳೆಲ್ಲ ಆಗಲೇ ಜನಸಂದಣಿಯಿಂದ ತುಂಬಿ, ಕಿಟಕಿಗಳೆಲ್ಲ ಭರ್ತಿಯಾ ತಾರ್ಸಿಗಳೆಲ್ಲ ತಿಣಿಕಿ, ಮರದ ಕೊಂಬೆಗಳೆಲ್ಲ ದರ್ಶನಾಕಾಂಕ್ಷಿಗಳನ್ನು ಹೊತ್ತು ಶಿರಬ ನಿಂತುವು. 'ಇವತ್ತು ದೀಪಾವಳಿ! ಸಿಹಿ ತಿನಿಸುಗಳಿಂದ ನಾಲಗೆ ಚಪ್ಪರಿಸುವ ಹ

ಮಿಠಾಯಿಗಳನ್ನು ಹಂಚಿ ತಿಂದು ಸಂತೋಷಪಡುವ ದಿನ. ಆ ತಿನಿಸುಗಳಲ್ಲೆಲ್ಲ, ಮಿಠಾಯಿಗಳಲ್ಲೆಲ್ಲ, ಅತ್ಯಮೂಲ್ಯವಾದ ಪದಾರ್ಥ, ಅತ್ಯವಶ್ಯಕವಾದ ಪದಾರ್ಥ; ಸಕ್ಕರೆ! ಹಾಗೆಯೇ, ಪ್ರತಿಯೊಬ್ಬ ವ್ಯಕ್ತಿಯಲ್ಲೂ ಪ್ರತಿಯೊಂದು ವಸ್ತುವಿನಲ್ಲೂ ಇರುವುದು "ಸಚ್ಚಿದಾನಂದ" ತತ್ವ. ಆ ಸಚ್ಚಿದಾನಂದವೇ ರೂಪನಾಮದ ಉಪಾಧಿಗೊಳಗಾದರೆ ಭಗವಂತನೆಂದೆನಿಸಿಕೊಳ್ಳುತ್ತದೆ".

ಕೋಪ ತಾಪಗಳ ಬಿರುಗಾಳಿಗೆ ಸಿಕ್ಕದೆ, ನಿಮ್ಮ ಕರ್ತವ್ಯದ ಕಡೆ ಗಮನವಿಡಿ. ಹಿರಿಯರು ಕೊಡುವ ಸಲಹೆಗಳನ್ನೂ ನಿಮ್ಮ ವಿವೇಕ ವೈರಾಗ್ಯಗಳ ಮೇಲೆ ಒರೆಹಚ್ಚಿ ಪರೀಕ್ಷಿಸಿ. ಮಂತ್ರವೆಂದರೆ, ಮನನ ಮಾಡಿದರೆ ನಮ್ಮನ್ನು ರಕ್ಷಿಸುವ ಒಂದು ವಾಕ್ಯ. ರಾಜಕೀಯ 'ಕೂಗು'ಗಳನ್ನು ನಿಮ್ಮ ಗಂಟಲಿಗೆ ಸೇರಿಸುವ ಮೊದಲು ಮನನ ಮಾಡಿ ನೋಡಿ. ನಿಮ್ಮನ್ನು ರಕ್ಷಿಸುವ ಬಲ ಅವಕ್ಕೆ ಇದೆಯೇ ಎಂದು ಪರೀಕ್ಷಿಸಿ, ಅನಂತರ ಅಂಗೀಕರಿಸಿ ಅನುಸರಿಸಿ, ಎಂದು ಎಚ್ಚರಿಸಿದರು.

ನಾಲ್ಕಕ್ಷರದ ಒಂದು ಪದವಿಗಾಗಿ, ನೀವು ನಿಮ್ಮ ಆಯುಷ್ಕಾಲದ ಬಹು ಮುಖ್ಯ ಭಾಗದಲ್ಲಿನ ನಾಲ್ಕಾರು ವರ್ಷಗಳನ್ನು ವ್ಯಯ ಮಾಡುತ್ತಿದ್ದೀರಿ. ಅತ್ಯಂತ ಶ್ರೇಷ್ಠವಾದ ಅನುಗ್ರಹ ಪದವಿ ಹೊಂದಲು, ದಿನವೊಂದಕ್ಕೆ ೫ ಮಿನಿಟುಗಳನ್ನಾದರೂ ವ್ಯಯ ಮಾಡಲು ಸಂಕಲ್ಪಿಸಿ ಎಂದರು. ಭಗವತ್ ಪ್ರೇರಣೆಯಿಂದ ಪ್ರಪಂಚದ ಪ್ರತಿ ಒಂದು ಅಣುವೂ, ಜೀವ ಕಣವೂ, ಹೇಗೆ ಆಶ್ಚರ್ಯಕರವಾದ ರೀತಿಯಲ್ಲಿ ಸಮರಸದಿಂದ ಹೊಂದಿಕೊಂಡು ಬಾಳಿ ಬದಲಾಗುತ್ತಿದೆ ಎಂಬುದನ್ನು ಗಮನಿಸಿದರೆ, ಅದೇ ಒಂದು ಮಹಾ ತಪಸ್ಸು, ಮಹಾಸಾಧನೆ ಎಂದರು.

೨೩ನೆ ತಾ| ಶಿರ್ಸಿ ಮಾರ್ಗವಾಗಿ ಪಶ್ಚಿಮ ಸಮುದ್ರ ತೀರಕ್ಕೆ ಸ್ವಾಮಿ ಪ್ರಯಾಣ ಬೆಳೆಸಿದರು. ಬೆಳಗ್ಗೆ ೯ ಗಂಟೆಗೆ ಧಾರವಾಡದಿಂದ ಹೊರಟು, ಮುಕ್ಕಾಲು ಗಂಟೆಯೊಳಗೆ ಮುಂಡಗೋಡು ಸೇರಿದರು. ಅವತಾರ ಪುರುಷನ ದರ್ಶನ ಪಡೆಯಲು ಇಪ್ಪತ್ತು ಇಪ್ಪತ್ತೈದು ಮೈಲಿ ದೂರದ ಎಸ್ಟೇಟುಗಳಿಂದಲೂ, ಅರಣ್ಯ ಪ್ರದೇಶದಿಂದಲೂ, ಜನ ಕಾಲು ನಡಿಗೆಯಲ್ಲೇ ಅಲ್ಲಿಗೆ ಬಂದಿದ್ದರು. ಸುಮಾರು ೪೦೦೦ ಸ್ತ್ರೀ ಪುರುಷರು ಸಾಲಾಗಿ ಕುಳಿತು ಭಜನೆ ಮಾಡುತ್ತಿದ್ದುದನ್ನು ಕಂಡು ಬಾಬಾ ಅವರು ಕಾರಿಂದಿಳಿದು, ಅವರ ನಡುವೆ ನಡೆದು, ಎಲ್ಲರ ಮೇಲೂ ಕೃಪಾ ದೃಷ್ಟಿಯನ್ನು ಬೀರಿದರು. ದೀನದಲಿತರ ನಯನಗಳಲ್ಲಿ ಅಶ್ರುಧಾರೆ ಕಾಣಿಸಿತು. ಮೂರು ನಾಲ್ಕು ರೋಗಿಗಳಿಗೆ ಸ್ವಾಮಿ ವಿಭೂತಿ ಸೃಷ್ಟಿಸಿ ಕೊಟ್ಟರು. ವೇದಿಕೆ ಹತ್ತಿ ನಿಂತು ನಾಮಸ್ಮರಣೆಯ ಮಹತ್ವವನ್ನು ತಿಳಿಗನ್ನಡದಲ್ಲೇ ತಿಳಿಸಿದರು. ಮೂರು ಹಾಡುಗಳನ್ನು ತಾವೇ ಹಾಡಿ, ಅವರಿಂದಲೂ ಹಾಡಿಸಿ, ಸಭೆಯನ್ನು ಆನಂದಾಬ್ಧಿಯಲ್ಲಿ ಮುಳುಗಿಸಿದರು. ಅವರಿಗೆಲ್ಲ ಅದೊಂದು ಆಧ್ಯಾತ್ಮಿಕಾನುಭೂತಿ.

ಅಲ್ಲಿಂದಾಚೆಗೆ ಕಾರು ಹೋದದ್ದು ರಸ್ತೆಯ ಮೇಲಿಂದಲ್ಲ; ಭಜನೆ ಗಾನದ ಅಲೆಗಳ ಮೇಲೆ, ಭಕ್ತಿ ರಸದ ಹೊನಲನುಸರಿಸಿ ಅವು ತೇಲಿದವು ಎನ್ನಬೇಕು. ಮಳಗಿ, ಎಕ್ಕಂಬಿ, ಇಸಲೂರು, ಗೌಡಳ್ಳಿ, ಎಂಬಲ್ಲಿ ಸೇರಿದ್ದ ಸಮೂಹದ ಶ್ರದ್ಧ ಭಕ್ತಿಗಳು ಎಂಥ ಗಾಢವೆಂದರೆ ಬಾಬಾ ಅವರನ್ನು ನಿಲ್ಲಿಸಿ, ದರ್ಶನ ಕೊಡುವಂತೆ ಮಾಡಿದುವು. ಜೊತೆಗಿದ್ದವರು ಗಡಿಯಾರದ ಕಡೆ ಬೆರಳು ತೋರಿಸಿ ತಡೆದರೂ, ಸ್ವಾಮಿ ಅವರಿಗೆ ದರ್ಶನ ಕೊಡುವುದಕ್ಕಾಗಿ ತುಸು ಹೊತ್ತು ಕಾರಿನ ಕದ ತೆರೆದು, ಹೊರಕ್ಕೆ ಮೈಯೊಡ್ಡಿ, ಮಂದಹಾಸ ಬೀರಿ, ಅಭಯ ಹಸ್ತವನ್ನವರಿಗೆ ಅನುಗ್ರಹಿಸಿದರು. ಅಡ್ಕೆಯವರು ಹೇಳುತ್ತಾರೆ: "ರಸ್ತೆ ಪಕ್ಕದಲ್ಲಿ ನಿಂತಿದ್ದ ಗುಂಪನ್ನು ಕಾಣುತ್ತಲೂ ಬಾಬಾ ಕಾರನ್ನು ನಿಲ್ಲಿಸಿ, ಕದ ತೆರೆದು, ಬಾಗಿಲಲ್ಲೇ ನಿಂತು ದರ್ಶನ ಕೊಡುತ್ತಿದ್ದರು. ಜನರು ಭಕ್ತಿಯ ಆವೇಶದಲ್ಲಿ ಬಾಗಿಲ ಬಳಿ ನುಗ್ಗಿ, ಅವರ ಪಾದವನ್ನು ಮುಟ್ಟುವ ಸಲುವಾಗಿ ಆ ಬಾಗಿಲ ಮೇಲೆ ಬಿದ್ದು, ಅವರನ್ನು ಸಮೀಪಿಸಲು ಯತ್ನಿಸುತ್ತಿದ್ದರು. ನೂರಾರು ಜನ ನೂಕಿ ನುಗ್ಗಿದರೂ, ಆ ಬಾಗಿಲು ಕೊಂಚವೂ ಅಲುಗಾಡುತ್ತಿರಲಿಲ್ಲ. ಆ ಎಡಗೈಯ ಬಲವನ್ನು ನಾನಾಗ ಕಂಡೆ".

ಗೋಡೆಯ ಮೇಲಿನ ಗಡಿಯಾರ ಹನ್ನೊಂದು ಹೊಡೆದು ಮುಗಿಸಿತು. ಬಾಬಾ ಶಿರಸಿಯ ಗೋಪಾಲಕೃಷ್ಣ ಸ್ವಾಮಿ ಗುಡಿಯನ್ನು ಪ್ರವೇಶಿಸಿದರು. ಅದೇ ಸತ್ಯಸಾಯಿ ಸೇವಾ ಸಮಿತಿಯ ಕಚೇರಿ ಹಾಗೂ ಕಾರ್ಯ ಕ್ಷೇತ್ರ! ೩ ದಿನಗಳ ಹಿಂದೆ ಧಾರವಾಡದಲ್ಲಿ ಅವರು ಹೇಳಿದ್ದರು: ೧೧ ಗಂಟೆಗೆ ನಿಮ್ಮ ಊರು ಸೇರುತ್ತೇನೆ ಎಂದು. ಅವರ ಮಾತಿನಂತೆ ಮುಳ್ಳು ತಿರುಗಿತು; ಕಾಲ ಸಾಗಿತು. ಊರಾಚೆ ಬಯಲಿನಲ್ಲಿ ನಲವತ್ತು ಸಾವಿರಕ್ಕೂ ಹೆಚ್ಚು ಜನ ಸೇರಿದ್ದರು. ಅಡ್ಕೆಯವರು ಹೇಳುತ್ತಾರೆ: "ಬಿಸಿಲಿನಲ್ಲಿ ಮಂದಿ ಒಣಗುತ್ತಿದ್ದದ್ದು ಬಾಬಾರವರಿಗೆ ಸಹಿಸಲಿಲ್ಲ. ನೀವು ಭಜನೆ ಶುರು ಮಾಡಿ; ಮೋಡಗಳು ಸೇರಿ ನಿಮಗೆ ನೆರಳು ಸಿಕ್ಕಿ ಆರಾಮ ಆಗುತ್ತದೆ ಅಂದರು ಬಾಬಾ. ಹಂಗೇ ನಡೀತು, ನಾನು ಕಣ್ಣಾರ ಕಂಡೆ; ಎಲ್ಲಿಂದಲೋ ಮೋಡಗಳು ಓಡೋಡಿ ಬಂದವು. " ಬಾಬಾರವರು ಬಸವಣ್ಣನವರ ವಚನಗಳನ್ನುದಾಹರಿಸಿ ದಾಸರ ಪದಗಳನ್ನು ಹಾಡಿ, ಜನಸ್ತೋಮಕ್ಕೆ ಸಂತೋಷ ಸ್ಫೂರ್ತಿಗಳನ್ನನುಗ್ರಹಿಸಿದರು. "ಭಗವಂತ ಪ್ರೇಮ ಸ್ವರೂಪಿ. ಅವನನ್ನು ಪ್ರೇಮದಿಂದಲೇ ಹೊಂದಬಹುದು. ಪ್ರೇಮಕ್ಕಾಗಿ ಪ್ರೇಮದಿಂದ ಬಾಳಿ. ಎದ್ದಾಗ ಪ್ರೇಮ, ನಡೆವಾಗ ನುಡಿವಾಗ, ಪ್ರೇಮ, ಮಿಡಿವಾಗ ಮಡಿವಾಗ ಪ್ರೇಮ! ನನಗೂ ನಿಮಗೂ ಪ್ರೇಮವೇ ಬಂಧ, ಸಂಬಂಧ. ಸರ್ವ ಭೂತಾಂತರಾತ್ಮನಾದ ಭಗವಂತನನ್ನು ಎಲ್ಲರಲ್ಲೂ ಕಂಡು ಪ್ರೇಮಿಸಿರಿ" - ಎಂದರು. ವೇದಿಕೆಯಿಂದಿಳಿದು ಗುಡಿಗೆ ಬಾಬಾ ಮರಳಿದಾಗ, ಅವರು ಎಲ್ಲರ ಹೃದಯದಲ್ಲೂ ಪ್ರತಿಷ್ಠಿತರಾಗಿ ಕಂಗೊಳಿಸುತ್ತಿದ್ದರು. ಜೊತೆಯಲ್ಲಿದ್ದವರು ಕೊಂಚ ವಿಶ್ರಾಂತಿಗಾಗಿ ಹಾತೊರೆಯುತ್ತಿದ್ದರೂ, ಕಡಲ ತಡಿಯ ಕಾರವಾರಿಗೆ ಹೊರಟೇಬಿಟ್ಟರು.

ಉದ್ದಕ್ಕೂ ರಸ್ತೆಯ ಇಕ್ಕೆಲದಲ್ಲೂ ಜೈಕಾರಗಳು, ಭಜನೆ ಹಾಡುಗಳು; ಜೋಡಿಸಿದ ಕೈಗಳು, ಕೂಡಿಸಿದ [illegible] ಅಮ್ಮನ ಹಳೆ

ಜಾನ್ಮನೆ, ಕಸಗೆ, ಕತಗಲ, ಹಿರೇಗುತ್ತಿ - ಹಾದು ಹೋದ ಊರುಗಳು. ಅಲ್ಲೆಲ್ಲ ಬಾಬಾ ಕಾರು ನಿಲ್ಲಿಸಿ ದರ್ಶನವಿತ್ತರು. ಅವರ ವದನಾರವಿಂದದ ಮಂದಸ್ಮಿತ ಪ್ರತಿ ಒಬ್ಬರ ಮುಖದಲ್ಲೂ ಪ್ರತಿಬಿಂಬಿತವಾಗಿ ಮೊಳಗಿತು. ಅಂಕೋಲದಲ್ಲಿ ಜನರ ಉತ್ಸಾಹ ಅಂಕೆ ತಪ್ಪಿತು. ಬಾಬಾ ಅವರು ಕೈ ಬೀಸಿ ಅಭಯವಿತ್ತು ಮುಂದಕ್ಕೆ ಸಾಗಿದರು.

ಅವರ್ಸ ಎಂಬುದು ಒಂದು ಚಿಕ್ಕ ಗ್ರಾಮ. ಆದರೂ ಊರೆಲ್ಲ ತೋರಣ; ಮನೆ ಅಂಗಳಗಳಲ್ಲೆಲ್ಲ ಮಂಟಪ, ದಾರಿಗಳಲ್ಲೆಲ್ಲ ಧ್ವಜ! ಐದು ಸಹಸ್ರ ಜನ, ಸಾಲಾಗಿ ಸದ್ದಿಲ್ಲದೆ, ಸ್ವಾಮಿ ದರ್ಶನಕ್ಕಾಗಿ ಕುಳಿತಿದ್ದರು. ಸ್ವಾಮಿ ಅವರ ನಡುವೆ ಬಹಳ ಹೊತ್ತು ಅತ್ತಿತ್ತ ನಡೆದರು; ಖಾಯಿಲೆಯವರನ್ನು ಹುಡುಕಿ ಹರಸಿದರು. ಜನರಿಗೆ ಅಮಿತಾನಂದವನ್ನಿತ್ತರು. ಕೃತಜ್ಞತೆಯಿಂದ ಅವರ ನಯನಗಳು ಅಶ್ರುಪೂರ್ಣವಾದವು. ಇರುವುದೊಂದಾದರೂ ಹಲವಾಗಿ ಕಾಣುವುದು ಅಜ್ಞಾನದಿಂದ ಎಂದು ವಿವರಿಸುತ್ತಾ ಬಾಬಾ ಅವರು, 'ಈ ನಿಜವನ್ನು ತಿಳಿದವರಲ್ಲಿ ಭಯಕ್ಕೆ ಸ್ಥಾನವಲ್ಲ' - ಎಂದರು. ಅನೇಕತ್ವದಲ್ಲಿ ಏಕತ್ವವನ್ನು ಆರಾಧಿಸಿ ಆನಂದಿಸುವ ಆಧ್ಯಾತ್ಮಿಕ ಸಾಧನೆಯನ್ನುಪದೇಶಿಸಿದರು. ಮೂರು ಭಜನೆ ಹಾಡುಗಳನ್ನು ತಮ್ಮ ಸುಮಧುರ ಮುರಳಿ ಕಂಠದಿಂದ ಹಾಡಿ ಜನಮನವನ್ನು ತಣಿಸಿದರು.

ಕಾರ್ವಾರದ ಸಮುದ್ರ ತೀರದಲ್ಲಿ ತಮಗಾಗಿ ಕಾದು ಕುಳಿತಿದ್ದ ಇಪ್ಪತ್ತೇಳು ಸಾವಿರ ಜನರನ್ನು ಕಂಡು ಸ್ವಾಮಿ, "ಆ ಕಡೆ ಜಲಸಾಗರ, ಈ ಕಡೆ ಜನಸಾಗರ; ನಡುವೆ ಅನುಗ್ರಹ ಸಾಗರ" - ಎಂದಾಗ ಜೈಜೈಕಾರ ಗಗನಕ್ಕೇರಿತು! "ದಾರಿಯುದ್ದಕ್ಕೂ ನಿಂತಿದ್ದ ನಿಮ್ಮ ಸೋದರ ಸೋದರಿಯರಿಗೆ, ನಿಮಗೆ ಮೀಸಲಾಗಿದ್ದ ನಿಮಿಷಗಳಲ್ಲಿ ಕೆಲವನ್ನು ಹಂಚುತ್ತ ಬಂದದ್ದರಿಂದ, ನಾನು ತಡವಾಗಿ ಬಂದೆ; ನಿಮ್ಮನ್ನು ಇಷ್ಟು ಹೊತ್ತು ಕಾಯಿಸಿದೆ. ಅವರೆಲ್ಲರ ಕೃತಜ್ಞತೆ ನಿಮ್ಮ ಶ್ರಮಕ್ಕೆ ಪರಿಹಾರ" - ಎಂದರು ಬಾಬಾ. ಸಮುದ್ರದ ಅಲೆಗಳೂ ಶಾಂತ ರೀತಿಯಿಂದ, ತಮ್ಮ ತಮ್ಮೊಳಗೆ ಪಿಸುಮಾತಿನಲ್ಲೇ ತಮ್ಮ ಹರ್ಷವನ್ನು ವ್ಯಕ್ತಪಡಿಸಿಕೊಂಡುವು; ಸ್ವಾಮಿಯ ಗಾನಾಮೃತವನ್ನು ಸವಿದುವು.

ಆ ರಾತ್ರಿ ಕಲೆಕ್ಟರ್‌ರವರ ಬಂಗಲಾದಲ್ಲೇ ಬಾಬಾ ಅವರು ತಂಗಿದರು. ಕಿರುದೆರೆಗಳ ಸೆರಗಿನಲ್ಲಿ ತಾರೆಗಳ ಬೆಳಕು ಮಿಂಚಿದುವು. ಬಂಗಲಾದ ಸುತ್ತಣ ಉದ್ಯಾನದಲ್ಲಿ ಪಕ್ಷಿಗಳು ಆ ರಾತ್ರಿ ನಿದ್ರೆ ಮಾಡಲೇ ಇಲ್ಲ. ಗಿಡ ಮರಗಳು ನಿಂತಲ್ಲೇ ನೃತ್ಯವಾಡಿದುವು. ಆಕಾಶ ಸಾವಿರ ಕಣ್ಣುಗಳನ್ನು ತೆರೆದು, ಪಿಳಪಿಳನೆ ಉತ್ತರ ಕನ್ನಡದ ಕಲೆಕ್ಟರ್ ಬಂಗಲೆಯನ್ನೇ ವೀಕ್ಷಿಸುತ್ತಿತ್ತು.

ಮರುದಿನ ಬೆಳಿಗ್ಗೆ, ಕಾರ್ವಾರದ ಗುಂಡಿಗೆಯಾದ ಸೀತಾರಾಮೇಶ್ವರ ಗುಡಿಗೆ ಬಾಬಾ ಅವರು ಹೋದರು. ಅದರ ಶುಭ್ರತೆ, ಶಿಸ್ತು, ಪೂಜಾ ವಿಧಾನಗಳನ್ನು ಮೆಚ್ಚಿದರು. ಅಲ್ಲಿನ ಊರಾಚೆಯ ಕೋಡಿಬಾಗಿಗೆ ಹೋಗಿ, ತಮ್ಮ ಪೂರ್ವಾವತಾರ ಶ್ರೀ ಶಿರ್ಡಿ ಸಾಯಿಬಾಬಾ ಅವರ ಶಿಲಾಪ್ರತಿಮೆಯನ್ನು, ಗ್ರಾಮಸ್ಥರು ಕಟ್ಟಿಸಿದ ಗುಡಿಯಲ್ಲಿ ಪ್ರತಿಷ್ಠೆ ಮಾಡಿದರು. ಅವರದು

ಅದೆಂಥ ಭಾಗ್ಯ! ಅಲ್ಲಿಂದ ಕಡಲ ದಂಡೆಯನ್ನೇ ಅನುಸರಿಸುವ ರಸ್ತೆ ಹಿಡಿದು, ಕಾಳೀ ನದಿ ಸಮುದ್ರವನ್ನು ಸೇರುವ ಸ್ಥಾನಕ್ಕೆ ಬಂದರು. ಗೋವಾ ಪ್ರಾಂತಕ್ಕೆ ತೆಪ್ಪದಲ್ಲೇ, ಕಾರುಗಳ ಜೊತೆಗೆ ಬಂದವರು, ಎಲ್ಲರ ಸಹಿತ ದಾಟಿದರು. "ಇಗೊ! ದುಸ್ತರ ಭವಸಾಗರತರಣ ಗುರುಚರಣವೆಂಬ ತೆಪ್ಪವೊಂದಿದ್ದರೆ ಅದೂ ಇಷ್ಟೇ ಸುಲಭ!" ಬಾಬಾ ಡಾ| ಅಷ್ಕೆಯವರಿಗೂ ಅವರ ಮಗ ಮನೋಹರ ಅವರಿಗೂ ಆಶ್ವಾಸನಗೈದರು.

ಸುಮಾರು ಹತ್ತು ಗಂಟೆಗೆ ಗೋವಾ ರಾಜ್ಯವನ್ನು ಪ್ರವೇಶಿಸಲಾಯಿತು. ಮಾರ್ಗಾಂವ್ ಎಂಬ ಪಟ್ಟಣದಲ್ಲಿ ಆಗಲೇ ಭಾರೀ ಸಮೂಹ ಸ್ವಾಮಿಗಾಗಿ ಕಾದಿತ್ತು. ಪ್ರತ್ಯಕ್ಷ ದರ್ಶನ ಅವಕಾಶ ಸಿಕ್ಕಿದಾಗ ಜನ, ಭಕ್ತಿ ಪರವಶರಾಗಿ ಪಾದ ಸ್ಪರ್ಶನಕ್ಕಾಗಿ ಮುನ್ನುಗ್ಗಿದರು. ಆದ ಅವರ ಮಧ್ಯ ದಾರಿ ಮಾಡಿಕೊಂಡು ಬಾಬಾರವರೇ ನಡೆದು ಬಂದಾಗ ಜನ ಶಾಂತರಾದರು. ರೋಗಿಯೊಬ್ಬನನ್ನು ಕಂಡ ಕೂಡಲೇ ಸ್ವಾಮಿ, ಅವನ ಸಮೀಪಕ್ಕೆ ಹೋಗಿ, ಅವನಿಗೊಂದು ಶಿಲುಬೆ ಗುರ್ತಿನ ಪದಕವಿದ್ದ ಸರವನ್ನು ಸೃಷ್ಟಿ ಮಾಡಿ ಕೊಟ್ಟರು. ಆತ ಕ್ರೈಸ್ತನೆಂಬುದು ಅವರಿಗೆ ತಿಳಿಯದೇನು! ಮತ್ತೊಬ್ಬರಿಗೆ ವಿಭೂತಿ ಸೃಷ್ಟಿಸಿ, ಅವರ ರೋಗ ಶಮನಾರ್ಥ ಅನುಗ್ರಹಿಸಿದರು. ತಾಮಸ ಗುಣವನ್ನು ಕಿತ್ತೊಗೆದು, ರಾಜಸದಿಂದ ಉತ್ಸಾಹಗೊಂಡು, ಮನುಷ್ಯ ಹೇಗೆ ಸತ್ವಗುಣ ಸಂಪನ್ನನಾಗಬಹುದೆಂಬುದನ್ನು ಬಾಬಾ ತಿಳಿಗನ್ನಡದಲ್ಲಿ ವಿವರಿಸಿದರು. ಅನಂತರ ಗೋವಾದ ರಾಜಧಾನಿ, ಪಣಜಿ ನಗರವನ್ನು ಸ್ವಾಮಿ ಸೇರಿದರು.

ಆಕಾಶವೇ ನನ್ನನ್ನು ಕಾಣ ಬರುವ, ಕೇಳಬರುವ, ಜನಸ್ತೋಮಕ್ಕೆ ತಕ್ಕ ಚಪ್ಪರ ಎಂದು ಬಾಬಾ ಹೇಳುವುದುಂಟು! ಆದ್ದರಿಂದ, ಒಂದು ಕಟ್ಟಡದ ಮಹಡಿ ಮೇಲಿನ ಸಭಾ ಮಂದಿರದಲ್ಲಿ, ಅಂದಿನ ಕಾರ್ಯಕ್ರಮವನ್ನೇರ್ಪಡಿಸಿದ ಸಮಿತಿಯ ದಕ್ಷತೆಯನ್ನು ಏನೆಂದು ಹೇಳೋಣ! ಪ್ರವೇಶ ದೊರಕದ ಮಂದಿ, ಒಳಗಿದ್ದವರಿಗಿಂತ ನೂರು ಪಾಲು! ಆದರೂ ಜನ ನೆಮ್ಮದಿಯಿಂದ ಇದ್ದು, ಲೌಡ್ ಸ್ಪೀಕರುಗಳ ಮೂಲಕ ಭಾಷಣ, ಭಜನೆಗಳನ್ನು ಕೇಳುವುದಕ್ಕಾದರೂ ಅದೃಷ್ಟ ಲಭಿಸಿತಲ್ಲ ಎಂದು ಸಂತೋಷಪಟ್ಟರು. ಮುಂದೆಂದಾದರೂ ಪ್ರತ್ಯಕ್ಷ ನೋಡಿ ನಲಿಯುವ ಆನಂದ ದೊರಕೀತು ಎಂದು ಸಮಾಧಾನ ಹೊಂದಿದರು.

"ನಾವು ಗೋವಾ ಸಮೀಪಿಸಿದಾಗಲೇ, ನಮ್ಮ ಫಿಯಟ್ ಕಾರಿನ ಸ್ಪ್ರಿಂಗುಗಳು ಜಖಂ ಆದುವು. ಮುಂದಕ್ಕೆ ಮತ್ತೊಂದು ಕಾರು ಗೊತ್ತು ಮಾಡಬೇಕಾಗಿದೆ. ಎಂದು ನಾನು ಬಾಬಾ ಅವರಿಗೆ ಹೇಳಿದೆ" - ಎಂದು ಅಷ್ಕೆಯವರು ಹೇಳುತ್ತಾರೆ. ಅವರು ಪ್ರಖ್ಯಾತ ಇಂಜಿನಿಯರು ಬೇರೆ. ಕಾರುಗಳ ಒಳ ತಂತ್ರಗಳನ್ನೂ, ಕುಯುಕ್ತಿ ಕುಚೇಷ್ಟೆಗಳನ್ನೂ ಚೆನ್ನಾಗಿ ಬಲ್ಲವರು. ಆದರೆ ಸ್ವಾಮಿ ಕೊಟ್ಟ ಉತ್ತರ, "ಇದರಲ್ಲೇ ಹೋಗೋಣ" ಎಂಬುದಾಗಿತ್ತು. ಗತ್ಯಂತರವಿಲ್ಲದೆ ಅಷ್ಕೆಯವರು ಸುಮ್ಮನಾದರು. ಅಲ್ಲಿಂದ ಬೆಳಗಾಂವರೆಗೂ, ಬೆಟ್ಟಗಳ ನಡುವೆ ಹಾದುಹೋಗುವ ರಸ್ತೆ ಉದ್ದಕ್ಕೂ, ಮಳೆ ಮಾಡಿದ್ದ ಕೊರಕಲುಗಳು, ಆದರೂ ಸರಾಗವಾಗಿ

ರಾತ್ರಿ ೯ ಗಂಟೆಯೊಳಗೆ ಅದೇ ಕಾರಲ್ಲೇ ಊರು ಸೇರಿದರು! ಅದು ಹೇಗಾಯಿತೆಂಬುದು ಬಾಬಾರವರಿಗೇ ಬೆಳಕು.

ಬೆಳಗಾಂನಲ್ಲಿ ಬಾಬಾರವರನ್ನು ಸ್ವಾಗತಿಸಲು, ಅವರ ಭಾಷಣದಿಂದ ತೃಪ್ತಿ ಹೊಂದಲು, ಸುಮಾರು ಎಪ್ಪತ್ತು ಸಾವಿರ ಜನ ಸೇರಿದ್ದರು. ಸೇವಾ ಸಮಿತಿಯವರು ನಡು ನಡುವೆ ಬೊಂಬುಗಳನ್ನು ನಾಟಿ, ಅಡ್ಡ ಕಟ್ಟಿ, ಸ್ವಾಮಿ ನಡೆದು ಹೋಗಿ ಸಮೀಪ ದರ್ಶನ ಕೊಡುವುದಕ್ಕೆ ದಾರಿಗಳನ್ನೇರ್ಪಡಿಸಿದ್ದರು. ಬಾಬಾ ಅವರು ಬಂದರು ಎಂಬ ಸುದ್ದಿ ಕಿವಿ ಸೋಕುತ್ತಲೂ, ಜನ ಎದ್ದು ಅಡ್ಡಗಳನ್ನು ದಡಬಡನೆ ದಾಟಿ, ಅವರು ಯಾವ ದಾರಿಯಿಂದ ಬರುತ್ತಾರೆ ಎಂದು ತಾವು ಊಹಿಸಿದ ಕಡೆಗೆ ಓಡಿದರು. ಹಾಹಾಕಾರವನ್ನಡಗಿಸಲು ಸ್ವಯಂ ಸೇವಕರು ತುಂಬಾ ಪ್ರಯತ್ನ ಮಾಡಿದರು. ಬಾಬಾ ಅವರೆಲ್ಲಿ? ಜನಸಂದಣಿಯಲ್ಲಿ ಸಿಕ್ಕಿದರೆ? ಸ್ವಸ್ಥಕಾರಿಂದಿಳಿಯಲೇ ಇಲ್ಲವೆ? ಅವರ ಸಂಗಡಿಗರ ನಡುವೆ ಅವರು ಕಾಣಿಸುತ್ತಿಲ್ಲವಲ್ಲಾ! ಎಂದು ಜನಮನ ಕಂಗಾಲಾದಾಗ, ಅಗೋ! ವೇದಿಕೆಯ ಮೇಲಿಂದ ಅವರ ಸುಮಧುರ ಭಜನ ಗಾನ ಕೇಳಿ ಬರುತ್ತಿದೆ, ಎಂದ ಸಭೆ ಮುಗ್ಧಗೊಂಡಿತು! ನಿಂತ ನಿಂತಲ್ಲೇ ಜನ ಕುಳಿತರು. ಅಮೃತ ಪಾನವನ್ನು ತಾವು ಮೌನದಿಂದಲೇ ಆಸ್ವಾದಿಸಿದರು. "ನಿಮ್ಮಿಂದ ಕೆಲವು ನಿಮಿಷಗಳು ಸಾಲ ತೆಗೆದು, ನಾನು ದಾರಿಯುದ್ದಕ್ಕೂ ಬಂದು ನಿಂತಿದ್ದ ಭಕ್ತರಿಗೆ ಹಂಚಿದೆ" - ಎಂದು ಬಾಬಾ ಹೇಳಿದಾಗ, ಸಭೆ ಸಂತೋಷದಿಂದ ನಕ್ಕಿತು! "ಬೆಟ್ಟದ ಮೇಲಿನ ಬಂಡೆ ಉಳಿಯ ಪೆಟ್ಟು ತಿಂದು, ಗುಡಿಯೊಳಗಿನ ವಿಗ್ರಹವಾಗುತ್ತದೆ. ನೀವೂ ಸುಖ ದುಃಖ ಎಂಬ ಉಳಿ ಪೆಟ್ಟು ತಿಂದು, ಭಗವತ್ ಸ್ವರೂಪಗಳಾಗಿ ಬೆಳಗಬೇಕು" ಎಂದರು. "ಐದು ದಿನಗಳಿಂದ ನಾನು ಕರ್ನಾಟಕದಲ್ಲಿ ಪ್ರವಾಸ ಮಾಡುತ್ತಿದ್ದೇನೆ. ಸಾವಿರಾರು ಜನ ಸಭೆಗಳಿಗೆ ಬರುತ್ತಾರೆ; ಸಾವಿರಾರು ಜನ ರಸ್ತೆ ಪಕ್ಕದ ಊರುಗಳಲ್ಲಿ ಸೇರುತ್ತಾರೆ. ಪ್ರತಿ ಒಬ್ಬನ ಹೃದಯದಲ್ಲೂ ಭಕ್ತಿಯ ಚಿಲುಮೆ ಇದೆ ಎಂಬುದನ್ನು ನಾನು ಬಲ್ಲೆ. ಆದರೆ ಉದ್ವೇಗವನ್ನ, ಕ್ರಮ ಶಿಕ್ಷಣದಿಂದ, ಶಿಸ್ತಿನಿಂದ ಸಂಯಮದಿಂದ ನಿಯಂತ್ರಿಸಬೇಕು. ಇದ್ದಕ್ಕಿದ್ದ ಹಾಗೆ ಕೂತವರೆದ್ದು, ಪಾದಸ್ಪರ್ಶನಕ್ಕಾಗಿ ಮುನ್ನುಗ್ಗಿದ್ದರೆ, ಹೆಣ್ಣು ಮಕ್ಕಳು, ಮುದುಕರು, ಖಾಯಿಲೆಯವರು, ಇವರ ಪಾಡೇನು? ಅವರಲ್ಲೆಲ್ಲ ಈ ಸಾಯಿ ನೆಲೆಸಿದ್ದಾನೆ, ನಂಬಿ. ಈ ಸಾಯಿಗೆ ನಮಸ್ಕಾರ ಮಾಡುವ ಉತ್ಸಾಹದಲ್ಲಿ ಆ ಸಾಯಿಗಳಿಗೆ ಹಿಂಸೆ ಕೊಡಬೇಡಿ. ಈ ಸಾಯಿ ದರ್ಶನ ಸ್ಪರ್ಶನ ಸಂಭಾಷಣೆಗಳಿಂದ ನೀವು ಗಳಿಸುವ ಪುಣ್ಯವೆಲ್ಲ, ಆ ಸಾಯಿಗಳನ್ನು ತುಳಿದು ತಳ್ಳಿತೊಂದರೆಗೀಡು ಮಾಡುವುದರಿಂದ ಕಳೆದುಕೊಳ್ಳುತ್ತೀರಿ" - ಎಂದು ಎಚ್ಚರಿಸಿದರು.

ಸೂರ್ಯೋದಯವಾಗುತ್ತಲೂ ಬಾಬಾ ಬಿಜಾಪುರದ ಕಡೆ ಪ್ರಯಾಣ ಬೆಳೆಸಿದರು. ಬೈಲ ಹೊಂಗಲ ಸೇರಿದಾಗ, ಇನ್ನೂ ಮಸಕು ಮಸಕು! ಆದರೂ ಏಳೆಂಟು ಸಾವಿರ ಸ್ತ್ರೀ ಪುರುಷರು ಅಲ್ಲೂ ಹಾಜರಿ! ನಾಲ್ಕು ಮಾತು ಉಪದೇಶ ರೂಪವಾಗಿ ಬಾಬಾ ಅವರಿಗೆ

ಅನುಗ್ರಹಿಸಿದರು. ಸದಾ ಸ್ವಾಮಿಯ ಸಾನ್ನಿಧ್ಯದಲ್ಲೇ ಇರುವಂತೆ ಭಾವಿಸಿಕೊಂಡು, ಅವರ ಬೆಳಕಿನಲ್ಲೇ, ಅವರ ಭಜನೆಯಲ್ಲೇ ಬಾಳುವಂತೆ ಸಾಧನೆ ಮಾಡಿ, ಎಂದು ಬೋಧಿಸಿದರು. ನೆನೆದಂತೆ ನೆನೆದೆಡೆ ಕಾಣಿಸಿಕೊಳ್ಳುವ ಸಾಯಿಯೇ ನಮ್ಮ ಸ್ವಾಮಿ. ತಂದೆ, ತಾಯಿ, ಗುರು, ಗೆಳೆಯ ಎಲ್ಲರೂ ಆಗಿ ಅವರು ನಮ್ಮ ಬಳಿ ಬಂದಿರುವಾಗ, ಇಂಥ ಸಾಧನೆ ಸುಲಭ, ಎಂದು ಎಲ್ಲರೂ ಆ ಕರೆಗೆ ಓಗೊಟ್ಟರು.

ಬಿಜಾಪುರದ ದಾರಿಯುದ್ದಕ್ಕೂ ಮೈಲು ಮೈಲಿಗೂ ಮಹಾ ಸಂಭ್ರಮ; ಮಹೇಶ್ವರ ಜಾತ್ರೆ! ಭಜನೆ, ಕೀರ್ತನೆ, ಉಧೋ ಉಧೋ! ಹಳ್ಳಿಗರು ತಮ್ಮ ಮುಂದೆ ಹಾದು ಹೋದ ಕಾರುಗಳನ್ನೆಲ್ಲ, ಸ್ಕೂಟರುಗಳನ್ನೆಲ್ಲ ನಿಲ್ಲಿಸಿ, "ಬಾಬಾ ಬರುತ್ತಿದ್ದಾರೆಯೆ?" "ಬಾಬಾ ಹೊರಟರಾ?" - ಎಂದು ವಿಚಾರಿಸಿದರು. ಅಗೊ ಬಂದರು ಎಂದಾಗ, ಮೇಳ ಕುಣಿಸಿದರು; ದೇವಸ್ಥಾನದ ಕೊಡೆ ಹಿಡಿದರು; ಪೂರ್ಣ ಕುಂಭ ಹೊತ್ತರು; ಕೊಂಬು ಕಹಳೆ ಊದಿದರು; ತಮಟೆ ಮದ್ದಳೆ ಬಡಿದರು; ಶಂಕ ಊದಿದರು, ಕರ್ಪೂರ ಹಚ್ಚಿದರು; ಕಾಲಿಗೆ ಬಿದ್ದರು; ಕೈ ಜೋಡಿಸಿದರು. ಪೊಲೀಸರೂ ಅಡ್ಡ ಬಿದ್ದು ಆಶೀರ್ವಾದ ಬೇಡಿದರು.

ಮಧ್ಯಾಹ್ನ ಸುಮಾರು ಒಂದು ಗಂಟೆ ಕಾಲ ಬಾಬಾ ಗೋಕಾಕ್‌ನಲ್ಲಿ ಉಳಿದು, ಪ್ರಜೆಗಳನ್ನು ಹರಸಿದರು. ಅಲ್ಲಿಂದ ಬಿಜಾಪುರದವರೆಗಿನ ಪ್ರಯಾಣ, ಅವರ ಜೊತೆ ಕಾರಲ್ಲಿದ್ದವರಿಗೆ ರಸದೌತಣ! ಬಾಬಾ ತಾವೇ ಪುರಂದರದಾಸರ, ಕನಕದಾಸರ, ಹಲವಾರು ಹಾಡುಗಳನ್ನು ಹಾಡಿದರು. ಸಂಗಡಿಗರನ್ನು ಹಾಡುವಂತೆ ಹುರಿದುಂಬಿಸಿದರು. ಕನಕನ ಕಿಂಡಿಯ ಕಥೆ ಹೇಳಿದರು. ತಾವೇ ಎರಡು ಮೂರು ಆಶು ಕವನಗಳನ್ನು ರಚಿಸಿದರು. ಇತರರನ್ನು ಹಾಗೆ ಮಾಡಿ ಹಾಡಲು ಪ್ರೋತ್ಸಾಹಿಸಿ, ಅವರ ಕೃತಿಗಳನ್ನು ಕೇಳಿ ಮೆಚ್ಚಿದರು. ರಸ್ತೆ ಬಿರಬಿರನೆ ಕಾರ ಕೆಳಗೆ ಉರುಳಿ ಉರುಳಿ ಹಿಂದಕ್ಕೆ ಹೋಯಿತು. ಬಿಜಾಪುರ ಸಮೀಪಿಸಿತು!

ಅಡ್ಕೆಯವರು ಹೇಳುತ್ತಾರೆ: "ಬಿಜಾಪುರಕ್ಕೆ ಇನ್ನೂ ೩ ಮೈಲಿ ಇರುವಾಗಲೇ, ರಸ್ತೆ ತುಂಬ, ಜನ, ಕಾರು, ವಾಹನ. 'ಸ್ವಾಮಿ! ಇಲ್ಲಿ ಸಭೆ ನಡೆಸುವಂತೆಯೇ ಇಲ್ಲ, ಅಸಾಧ್ಯ ಸಂದಣಿ' - ಎಂದು ನಾನು ಧೈರ್ಯ ಮಾಡಿ; ಹೇಳಿಯೇ ಬಿಟ್ಟೆ. ಅಷ್ಟು ಗಾಭರಿ, ನನಗೆ! ಮುಂದಿನ ಊರಿಗೆ ಹೊರಟು ಬಿಡೋಣ. ಅಲ್ಲೇ ವಿಶ್ರಾಂತಿ ತೆಗೆದುಕೊಂಡರಾಯಿತು' - ಎಂದು ನಾನು ಮೊಂಡು ಹಿಡಿದೆ. ಏನಿಲ್ಲ ಅಂದರೂ, ಆ ಮೈದಾನದಲ್ಲಿ ೭೫ ಸಹಸ್ರ ಜನ ಕಿಕ್ಕಿರಿದಿದ್ದರು! ಆದರೆ, "ಬಾಬಾ ನೆಟ್ಟಗೆ ಆ ಗೊಂದಲದೊಳಕ್ಕೆ ತೂರಿದರು. ಅಲ್ಲಿಂದ ಸುಮಾರು ಒಂದು ಫರ್ಲಾಂಗಿರಬೇಕು, ವೇದಿಕೆ. ಇತ್ತ ತೂರಿದವರು, ತಕ್ಷಣವೇ ಅತ್ತ ವೇದಿಕೆಯ ಮೇಲೆ ದರ್ಶನವಿತ್ತರು! ಅದು ಏನೋ ಪರಮಾತ್ಮನೇ ಬಲ್ಲ. ಮೈಕ್ ಕಂಬ ಕೈಯಲ್ಲಿ ಹಿಡಿದು ಅವರು "ಪ್ರೇಮ ಮುದಿತ ಮನ್ ಸೆಕಹೊ - ರಾಮ ರಾಮ ರಾಂ" - ಎಂದು ಹಾಡುತ್ತಲೂ, ಅಲೆಗಳಡಗಿದವು, ಅಲ್ಲೋಲ ಕಲ್ಲೋಲ ನಿಂತಿತು".

"ನೀವು ಜನಿಸಿ ಬಂದುದೇಕೆ? ಬದುಕಿ ಸಾಧಿಸಿದ್ದೇನನ್ನು? ಉಳಿಸಿ ಹೋಗುವುದೆಷ್ಟು?" - ಎಂದು ಬಾಬಾ ಕೇಳಿದರು. ವಿನೀತ ರಾಮಚಂದ್ರರಾಯರು ಬರೆಯುತ್ತಾರೆ. "ಶ್ರೀಕೃಷ್ಣನ ವೇಣುನಾದ ಕೇಳಿದಾಗ, ಸಾವಿರ ಹೆಡೆಯ ಕಾಳಿಂಗ ಸರ್ಪ ಕೂಡ ತಲೆ ಎತ್ತದೆ ಚೇತನಾರಹಿತವಾಯಿತು ಎಂದು ಭಾಗವತದಲ್ಲಿದೆ! ಬಾಬಾ ಅವರು ತುಸು ಕೋಪದಿಂದಲೇ ಮೊದಲಿಸಿ, ಅವರ ಮೌಢ್ಯವನ್ನು ಬಯಲಿಗೆಳೆದಾಗಲೂ, ೨೫ ಸಹಸ್ರ ಶಿರಗಳನ್ನು ಧರಿಸಿದ ಆ ಮಹಾಸರ್ಪ, ತಲೆದೂಗಿತೇ ಹೊರತು ಸಿಟ್ಟೆದ್ದು ಸೆಟೆದುಕೊಳ್ಳಲಿಲ್ಲ. ಆತ್ಮ ಪರೀಕ್ಷೆ ಎಂಬ ಪ್ರಥಮ ಸೋಪಾನದಲ್ಲಿ, ಸಾಧನೆ ಮೊದಲು ಮಾಡಿತು, ಅಷ್ಟೆ! ಬಾಬಾರವರು ಕೆಲವು ನಾಮಾವಳಿಗಳನ್ನು ಹಾಡಿ ಹಾಡಿಸಿದಾಗ, ಸಭ್ಯತಾಲತೆ ಚಿಗುರಿ, ಹಸುರಾಗಿ ಹಸರಿಸಿ ಪೂತು ಫಲಬಿಟ್ಟು, ರಸ ತುಂಬಿತು."

ಆ ರಾತ್ರಿ ಸರ್ಕ್ಯೂಟ್ ಹೌಸ್‌ನಲ್ಲೇ, ಬಾಬಾ ಬಿಡಾರ ಮಾಡಿದರು. ನಿಮ್ಮ ಸಂತೋಷವೆ ನನ್ನ ಆಹಾರ ಎನ್ನುತ್ತಾರೆ ಸ್ವಾಮಿ. ನಮ್ಮನ್ನು ಸಂತೋಷಪಡಿಸುವ ಸಲುವಾಗಿ, ಸ್ವಾಮಿ ಎಲ್ಲಿಗಾದರೂ ಬರುತ್ತಾರೆ, ಎಲ್ಲಾದರೂ ತಂಗುತ್ತಾರೆ, ಎಂಥ ಆಹಾರವನ್ನಾದರೂ ತಿಂದು ತೃಪ್ತರಾಗುತ್ತಾರೆ.

ಮಾರನೆಯ ದಿನ ಬೆಳಗ್ಗೆ ಎಲ್ಲರೂ ಕಾರು ಹತ್ತಿ, ನವಲಗುಂದದ ಕಡೆ ಪ್ರಯಾಣ ಮಾಡುತ್ತಿರುವಾಗ, ಸುಮಾರು ೨೦ ನಿಮಿಷಗಳ ಕಾಲ ಪ್ರಯಾಣ ಸಾಗಿದ ನಂತರ, ಅವರ ವಾಹನ ಅಂದವಾಗಿ ಅಲಂಕರಿಸಿದ್ದ ಒಂದು ಚಪ್ಪರದ ಕೆಳಗೆ ನಿಂತಿತು! ಬಾಳೆ ಕಂದು, ಮಾವಿನ ಸೊಪ್ಪು, ಹಸಿರು ತೋರಣ, ಫಲ ಪುಷ್ಪಗಳ ಗೊಂಚಲುಗಳು, ತಾಳಮೇಳ, ಭಜನೆ ಗುಂಪು! ಮದ್ದಳೆಯ ಮಂಗಳ ನಿನಾದ! ಭಕ್ತರ ಗುಂಪು!" "ಶಿವ ಶಿವ ಶಿವ ಶಿವ ಹರ ಹರ ಹರ ಓಂ" - ಎಂಬ ಸ್ತೋತ್ರ, ಪ್ರಶಾಂತಿ ನಿಲಯದ ಭಜನೆ ಹಾಡುಗಳು!

ಅಷ್ಕೆಯವರು ಹೇಳುತ್ತಾರೆ: "ಅವರು ಬಾಬಾ ಅವರ ಕಾಲಿಗೆ ಬಿದ್ದು ಅಂಗಲಾಚುತ್ತ, ಎರಡೇ ಎರಡು ಮೈಲಿ ಹತ್ತಿರದ ತಮ್ಮ ಹಳ್ಳಿಗೆ ಬರುವಂತೆ ಪ್ರಾರ್ಥಿಸಿದರು. ರಾತ್ರಿ ಎಲ್ಲ, ನಾವು ನೂರಾರು ಜನ ಸೇರಿ, ಇದಕ್ಕಾಗಿಯೇ ರಸ್ತೆಯನ್ನು ದುರಸ್ತಿ ಮಾಡಿದ್ದೇವೆ. ನಮ್ಮೂರ ಜನರೆಲ್ಲ ಶಾಂತರಾಗಿ ಭಯ ಭಕ್ತಿಯಿಂದ ಭಜನೆ ಮಾಡುತ್ತಿದ್ದಾರೆ, ಗುಡಿ ಮುಂದೆ ಎಂದರು. ಹತ್ತಾರು ಊರುಗಳಿಗೆ ಭೇಟಿ ಕೊಡುವುದಾಗಿ ಆಗಲೇ ಮಾತು ಕೊಟ್ಟಿದ್ದೇವೆ. ಈ ಊರನ್ನೂ ಸೇರಿಸಿದರೆ, ತುಂಬ ಶ್ರಮ ಮತ್ತು ಆಲಸ್ಯ. ಎಲ್ಲ ಊರುಗಳ ಜನರೂ ಬಹಳ ಹೊತ್ತು ಕಾದು ಕುಳಿತಿರಬೇಕಾಗುತ್ತದೆ, ಎಂದು ನಾನು ಗೊಣಗಿದೆ. ಆದರೆ ಸ್ವಾಮಿ, 'ತಿರುಗಿಸು ಕಾರು! ಐದು ನಿಮಿಷ ಹೋಗಿ ಬರೋಣ' - ಎಂದು ಸಮ್ಮತಿಸಿದರು".

ನೀರು ಚಿಮುಕಿಸಿ ಧೂಳೇಳದಂತೆ ಮಾಡಿದ್ದ ಆ ರಸ್ತೆ, ಎರಡು ಮೈಲಿ ಪೂರ ಹಳ್ಳಿಯವರೆ ನಿರ್ಮಿಸಿದ್ದು! ಅಲ್ಲಲ್ಲಿ ಕೈಯಲ್ಲಿ ದೀಪ ಹಿಡಿದು ಹೆಣ್ಣು ಮಕ್ಕಳು ಆರತಿ

ಮಾಡಿದರು; ಹೂವು ಚೆಲ್ಲಿದರು. ಎತ್ತುಗಳಿಗೆಲ್ಲ ಸ್ನಾನ ಮಾಡಿಸಿ ಕೊಂಬುಗಳಿಗೆ ಕೆಂಪು ಬಣ್ಣ ಬಳಿದು, ಕುತ್ತಿಗೆಗೆ ಗಂಟೆ ಕಟ್ಟಿದ್ದರು. ರಸ್ತೆಗೆ ಅಡ್ಡವಾಗಿ ಮಾವಿನ ಸೊಪ್ಪಿನ ತೋರಣಗಳು. ಆನಂದದಿಂದ ಹೊಳೆವ ಹಳ್ಳಿಗರ ಕಣ್ಣುಗಳು ಬಾಬಾ ಅವರ ಗಮನವನ್ನಾಕರ್ಷಿಸಿದ್ದುವು. ಬಾಬಾ ಅವರು ಐದು ಹಾಡುಗಳನ್ನು ಹಾಡಿ ಹಾಡಿಸಿದರು. ಜನರ ಮಧ್ಯ ನಿಧಾನವಾಗಿ ನಡೆದು ಎಲ್ಲರಿಗೂ ತೀರ ಹತ್ತಿರದ ದರ್ಶನ ಭಾಗ್ಯವನ್ನೊದಗಿಸಿದರು. ಐದು ನಿಮಿಷಗಳು ಗಡಿಯಾರದಲ್ಲಿ ನಲವತ್ತಾಗಿದ್ದುವು! ಭಕ್ತ ಪರಾಧೀನನಲ್ಲವೆ ಭಗವಂತ!

ಮನೆಮನೆಯಲ್ಲೂ ಹರ್ಷವರ್ಷ! ಊರೂರಲ್ಲೂ ಆನಂದ ಪ್ರವಾಹ! ಅಂತಃಕರಣಗಳ ಅಂಗಳದಲ್ಲಿ ಹಸಿರು ತೋರಣ; ತಂಪು ಭಕ್ತಿಯ ಪರಿಮಳ. ಕೆರೂರಲ್ಲಿ ಕೆಲ ನಿಮಿಷಗಳು ನಿಂತ ನಂತರ, ನರ್ಗುಂದದಲ್ಲಿ ನೆರೆದಿದ್ದ ಹತ್ತು ಹನ್ನೆರಡು ಸಾವಿರ ಜನರ ಮಹಾಸಭೆಯಲ್ಲಿ ಭಾಷಣ ಮಾಡಿದರು. ನೀರಲ್ಲಿ ಬೆರೆತ ಉಪ್ಪನ್ನು ನಾಲಿಗೆ ಗೊತ್ತು ಮಾಡುತ್ತದೆ; ಬೇರ ಯಾವುದಕ್ಕೂ ಅದನ್ನರಿಯಲು ಸಾಧ್ಯವಿಲ್ಲ. ಹಾಗೆಯೇ, ಪರಿಶುದ್ಧವಾದ ವಿಚಾರ ಧಾರೆಯಿಂದ ಮಾತ್ರ, ಸರ್ವ ಭೂತಾಂತರಾತ್ಮನಾದ ಭಗವಂತನನ್ನರಿಯಲು ಸಾಧ್ಯ, ಎಂದು ಬಾಬಾ ಸ್ಪಷ್ಟಪಡಿಸಿದರು.

ತಣ್ಣನೆಯ ಗಾಳಿ, ಹಚ್ಚ ಹಸಿರು ಹೊಲಗಳ ಮೇಲೆ ಹಾದು ಬಂದು, ಬಾಬಾ ಅವರ ಕಾರನ್ನು ಬಳಸಿ ಹಿಂಬಾಲಿಸಿತು. ಸಂಜೆ ಹೊತ್ತಿಗೆ ಬಾಬಾ ನವಿಲುಗುಂದಕ್ಕೆ ಬಂದರು. ಅನೇಕ ಉತ್ತಮ ಸಾಧಕರಿಂದ ಪುನೀತವಾದ ಆ ಪ್ರದೇಶದಲ್ಲಿ, ಭಗವದ್ದರ್ಶನಾರ್ಥಿಗಳಾದ ಸಹಸ್ರಾರು ಜನ ಗುಂಪುಗೂಡಿದ್ದರು. ಏಕಮೇವಾದ್ವಿತೀಯಂ ಬ್ರಹ್ಮನನ್ನು ಅರಿತುಕೊಳ್ಳಲು, ಮಂತ್ರ, ಜಪ, ನಾಮಸ್ಮರಣೆ ಯೋಗದಿಂದ ಚಿತ್ತವೃತ್ತಿ ನಿರೋಧ, ಧ್ಯಾನ ಮತ್ತು ಸಮಾಧಿಗಳು ಅಗತ್ಯ ಎಂದರು ಬಾಬಾ.

ಆ ದಿನ ಸೂರ್ಯದೇವನ ರಥ, ಕೊಂಚ ನಿಧಾನವಾಗಿ, ಅಲ್ಲಲ್ಲಿ ನಿಂತು ನಿಂತು ಮುಂಬರಿದಿರಬೇಕು! ಏಕೆಂದರೆ, ಅಣ್ಣಿಗೇರಿಯ ಭಕ್ತರರ್ಪಿಸಿದ ಪುಷ್ಪಾಂಜಲಿಯನ್ನು ಸ್ವೀಕರಿಸಿ ಹುಲ್ಕೋಟೆಗೆ ಬಾಬಾ ಬಂದಾಗ, ಇನ್ನೂ ಸೂರ್ಯಾಸ್ತಮವಾಗಿರಲಿಲ್ಲ! ಅಲ್ಲಿಂದ ಗದಗ - ವೀರನಾರಾಯಣನ ನಗರ, ವ್ಯಾಪಾರ ಕೇಂದ್ರ, ವ್ಯವಸಾಯ ಕ್ಷೇತ್ರಕ್ಕೆ ಬಂದಾಗ, ಅಬ್ಬ! ಅದೆಂಥ ಅನಿರ್ವಚನೀಯ ದೃಶ್ಯ! ನೂರು ಸಾವಿರಕ್ಕೂ ಹೆಚ್ಚು ಜನ!

"ಇಂದು ನಮ್ಮೆದುರು ಸ್ವರ್ಗದ ಬಾಗಿಲು ತೆರೆದಿದೆ. ಆಧ್ಯಾತ್ಮಿಕ ಜ್ಯೋತಿ ಮತ್ತೆ ಬೆಳಗಿದೆ", ಎಂದು ಶ್ರೀ ಕೆ. ಎಚ್. ಪಾಟೀಲರು ಆನಂದಿಸಿದರು; ಎಲ್ಲರ ಪರವಾಗಿ ಬಾಬಾ ಅವರಿಗೆ ಹಾರ್ದಿಕ ಸ್ವಾಗತ ನೀಡಿದರು. ಅಸತೋಮಾ ಸದ್ಗಮಯ; ತಮಸೋಮಾ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃತಂಗಮಯ - ಎಂಬ ಪ್ರಾರ್ಥನೆಯನ್ನೇ ತಮ್ಮ ಭಾಷಣ ವಿಷಯವಾಗಿ ಆರಿಸಿಕೊಂಡು, ಭೇದ ಭಾವ ಎಂಬುದು ಅಸತ್; ಅಹಂಕಾರ

ಎಂಬೋದು ತಮಸ್ಸು; ಆಶೆ ಎಂಬೋದು ಮೃತ್ಯು, ಎಂದು ವ್ಯಾಖ್ಯಾನಿಸಿದರು. ರಾಮ, ಕೃಷ್ಣ, ಶಿವ, ಶಕ್ತಿ ವಿಷ್ಣು ಮುಂತಾದ ವಿವಿಧ ನಾಮರೂಪಗಳನ್ನು ಕೊಂಡಾಡುವ ಭಜನೆಗಳನ್ನು, ಅವರನ್ನನುಸರಿಸಿ ಆ ಬೃಹತ್ ಸಮೂಹ ಹಾಡಿದಾಗ, "ದೇವನೊಬ್ಬ ನಾಮ ಹಲವು" - ಎಂಬ ಸತ್ಯ ಎಲ್ಲರ ಹೃದಯಾಕಾಶದಲ್ಲೂ ಮೊಳಗಿತು. ಆ ರಾತ್ರಿ ಬಾಬಾ ಧಾರವಾಡ ಸೇರಿದಾಗ, ಊರೆಲ್ಲ ಗೊರಕೆ. ದನಗಳೆಲ್ಲ ಟಾರ್ ರಸ್ತೆ ಮೇಲೆ ಮಲಗಿ ಮೆಲುಕು ಹಾಕುತ್ತಿದ್ದವು.

ಮೂಡಲಲ್ಲಿ ನೇಸರುದಿಸಿದಾಗ, ಕ್ಯಾಲೆಂಡರಲ್ಲಿ ಅಕ್ಟೋಬರ್ ೨೭. ಬಾಬಾ ಅವರು ಕೂಡ, ಆ ಸೂರ್ಯನಷ್ಟೇ ನವಚೇತನದಿಂದ ಎದ್ದು ಬಂದರು. ಪ್ರಯಾಣ ಎಷ್ಟು ದೀರ್ಘವಾಗಿರಲಿ, ದಾರಿ ಎಷ್ಟು ಪಳಗಿದ್ದಾಗಿರಲಿ, ಜನರ ಸ್ತೋತ್ರ ಎಷ್ಟು ಘಂಟಾ ಘೋಷವಾಗಿರಲಿ, ಕಾರ್ಯಕ್ರಮಗಳು ಎಷ್ಟು ಹೆಚ್ಚಾಗಿರಲಿ - ಬಾಬಾ ಎಂದೂ ಯಾವಾಗಲೂ ಎಲ್ಲೆಲ್ಲೂ, ಆಗ ತಾನೆ ಅರಳಿದ ಗುಲಾಬಿಯಂತೆ, ಸುಂದರ ಮಧುರ ಮನೋಹರವಾಗಿರುತ್ತಾರೆ. ಆದರೆ, ಅಡ್ಕೆಯವರಿಗೂ ಅವರ ಮಗನಿಗೂ ವಿಶ್ರಾಂತಿ ಬೇಕೆಂಬುದನ್ನು ಅವರು ಮನಗಂಡರು. 'ಈ ದಿನ ನಾನು ಇಲ್ಲೇ ಇದ್ದು ಹಲವು ಭಕ್ತರ ಮನೆಗಳಿಗೆ ಭೇಟಿ ಕೊಡುತ್ತೇನೆ' - ಎಂದರು.

"ಮೀ ಆನಂದಮೇ ನಾ ಆಹಾರಮು" (ನಿಮ್ಮ ಆನಂದವೇ ನನ್ನ ಆಹಾರ) - ಎಂದು ಬಾಬಾ ಹೇಳುತ್ತಾರೆ. ಅವರು ಮನೆಗೆ ಬಂದರೆ, ಅದು ಶಾಂತಿ ಪ್ರೇಮಗಳ ನೆಲೆಯಾಗುತ್ತದೆ. ಸಾಮಾನ್ಯವಾಗಿ ಅವರು ಒಬ್ಬರೇ ಬರುತ್ತಾರೆ. ಉಳಿದವರೂ ಬಂದರೆ ನಿಮಗೆ ತ್ರಾಸ, ಕಾಲವ್ಯಯ. ಅವರ ಶುಶ್ರೂಷೆ ಕೊಂಚ ಕಾಲ ತೆಗೆದುಕೊಳ್ಳುತ್ತದೆ, ಎನ್ನುತ್ತಾರೆ. ಬಂಧು ಮಿತ್ರರನ್ನು ಆಹ್ವಾನಿಸಿ, ಮನೆಯಲ್ಲಿ ಓಡಾಡಲು ಜಾಗ ಇಲ್ಲದಂತೆ ಮಾಡಬೇಡಿ. ವಿದ್ಯುದ್ದೀಪದ ಅಲಂಕಾರ, ಭಾರೀ ಭಾರೀ ಹೂಮಾಲೆಗಳು, ಭಕ್ಷ್ಯ ಭೋಜ್ಯಗಳ ದುಂದುಗಾರಿಕೆ, ಯಾವುದೂ ಕೂಡದೆನ್ನುತ್ತಾರೆ. ನಿತ್ಯದ ಮನೆ, ನಿತ್ಯದ ಅಡುಗೆ, ನಿತ್ಯದ ಪೂಜೆ ಪುರಸ್ಕಾರ, ಇವುಗಳಿಂದಲೇ ಅವರನ್ನು ಸಂತುಷ್ಟಿಪಡಿಸಲು ಸಾಧ್ಯ. 'ಇದು ಬಹಿರಂಗ ಪಡಿಸಬೇಕಾದ ಒಂದು ವಿಶಿಷ್ಟ ಸಂಭವ ಅಲ್ಲ. ಮನೆಯೊಡೆಯ, ಮನದೊಡೆಯ ಮನೆಗೆ ಬಂದರೆ, ಮಂದಿಗೇಕೆ ಅದರ ಸುದ್ದಿ?' - ಎಂದು ಕೇಳುವರು. ಹೊಸ್ತಿಲು ದಾಟಿ ಅವರು ಬರುವುದು ನಮ್ಮ ತೀರ ಹತ್ತಿರದ ಬಂಧುವಾಗಿ, ನಮ್ಮ ಹೃದಯವಾಸಿಯಾಗಿ, ನಮ್ಮ ಆರಾಧನಾ ಮೂರ್ತಿಯಾಗಿ, ನಮ್ಮನ್ನು ಹರಸಲು, ಹುರಿದುಂಬಿಸಲು, ಸಂತೈಸಲು, ಸರಿಪಡಿಸಲು. ನಮಗೆ ಧೈರ್ಯ ತುಂಬಲು, ಆರೋಗ್ಯವನ್ನನುಗ್ರಹಿಸಲು; ನಮ್ಮ ಸಂದೇಹಗಳನ್ನು ಪರಿಹರಿಸಲು; ನಾವು ಬಗೆಗೆಡದಿರಲು, ಬಡವಾಗದಿರಲು, ಬಾಳ ಗುರಿ ಮುಟ್ಟಲು! ಅವರಿಗೆ ಮನೆಯಲ್ಲಿನ ಎಲ್ಲರ ಪರಿಚಯವೂ ಉಂಟು ಅವರು ಕಂಕುಳ ಶಿಶುವನ್ನು ಮುದ್ದಾಡಿಸುವರು. ಅದಕ್ಕೆ ಹೆಸರಿಡುವವರು, ಅನ್ನ ಕೊಡುವವರು, ಅಕ್ಷರ ಕಲಿಸುವವರು. ತಾತ ಮುತ್ತಾತರ

ಕಾಲದಿಂದ ಅವರು ನಮ್ಮ ಚರಿತ್ರೆಯನ್ನೆಲ್ಲ ಬಲ್ಲರು. ಅವರು ಚೆಲ್ಲುವ ಆನಂದ ನಮ್ಮನ್ನೆಲ್ಲ ಕೃತಜ್ಞತಾವಾಹಿನಿಯಲ್ಲಿ ಮುಳುಗಿಸಿ ತೇಲಿಸುವುದು. ಅವರ ಕಣ್ಣ ಹೊಳಪಿನ ಮುಂದೆ, ಮನಸ್ಸಿನ ಕತ್ತಲೆ ಸಂಪೂರ್ಣ ಪಲಾಯನ! ಅವರ ಹಾಸ್ಯದ ಚಟಾಕಿಗಳ ಮುಂದೆ, ಯಾವ ದುಗುಡವೂ ಉಳಿಯದು. ಅವರು ಬಂದು ಹೋದ ಮನೆಯಲ್ಲಿ ಮದ್ದಿನ ಬಾಟ್ಲಿಗಳಿಗೆಡೆಯಿಲ್ಲ; ಕೋಪದ ಮಾತುಗಳಿಗೆ ಸ್ಥಾನವಿಲ್ಲ. ನಿರಾಶೆ ನಿಟ್ಟುಸಿರು, ದುಃಖ ದುರಾಶೆ ಇವುಗಳ ಅಧ್ಯಾಯ ಮುಗಿದು, ಸಮರಸ, ಸ್ನೇಹ, ಸೌಖ್ಯ, ಸಂಗೀತ ಇವುಗಳ ಅಧ್ಯಾಯ ಮೊದಲಾಗುತ್ತದೆ.

೨೮ ಸೋಮವಾರ! ಸ್ವಾಮಿ ಬೆಂಗಳೂರಾಚೆಯ ಬೃಂದಾವನವನ್ನು ಸಂಜೆಯೊಳಗೆ ಸೇರಲೇಬೇಕಂತೆ! ಹುಬ್ಬಳ್ಳಿಯಿಂದ ದಾವಣಗೆರೆ ಮಾರ್ಗವಾಗಿ ಹೊರಟರು. ಕುಂದಗೋಳ ಸೇರಿದಾಗ, ಅಲ್ಲಿ ಒಂದು ಆಟದ ಮೈದಾನ ತುಂಬ ಜನ ಕಿಕ್ಕಿರಿದು ಕಾದಿದ್ದರು. ೨೫ ಸಾವಿರಕ್ಕೂ ಹೆಚ್ಚಿನ ಆವೇದನಾಪೂರಿತ ಹೃದಯಗಳು. "ಸೂರ್ಯೋದಯದಿಂದ ನೀವು ನನಗಾಗಿ ಹೀಗೆ ಕಾತರಪಡುತ್ತಿರುವುದನ್ನು ನೋಡಿ ನನಗೆ ಪರಮಾನಂದವಾಗಿದೆ. ನಿಮ್ಮ ಭಕ್ತಿ ಶ್ರದ್ಧೆಗಳು ನಿಜಕ್ಕೂ ಗಮನಾರ್ಹ. ನನ್ನ ಮೇಲೆ ನಿಮಗೆ ಅಪಾರ ಪ್ರೇಮ!" - ಎಂದರು. ಬಾಬಾ. 'ಆ ಪ್ರೇಮವನ್ನು ದೀನ ದಲಿತ ಸೇವೆಯ ಮೂಲಕ ಬೆಳೆಸಿಕೊಳ್ಳಿ' - ಎಂದರು. ಬಾಬಾ ಅವರು ಹಾಡಿದ ನಾಲ್ಕೈದು ಹಾಡುಗಳು, ಎಲ್ಲರ ಹೃದಯಾಕಾಶವನ್ನೂ, ಊರಿನ ವಾತಾವರಣವನ್ನೂ ಶುಭ್ರಗೊಳಿಸಿದುವು. ಕರ್ಜಗಿಯಲ್ಲಿ ತುಸು ಹೊತ್ತು ನಿಂತು, ಅಂಗಡಿಯ ಶೇಷಾಚಲ ಸ್ವಾಮಿ ಮಂದಿರಕ್ಕೆ ಭೇಟಿ ಇತ್ತರು. ಸಾಧು ಸಂತರು, ಮಹಾಪುರುಷರು, ಸಿದ್ಧರು ಮುಂತಾದವರು ಭಗವದವತಾರ ಕಾರ್ಯ ಜಯಪ್ರದವಾಗಿ ನೆರವೇರಿಸಲು ಆ ಅವತಾರದ ಜೊತೆಗೋ, ಅದಕ್ಕೆ ಮುಂಚೆಯೋ, ಲೋಕಕ್ಕೆ ಬರುವ ಊಳಿಗದವರು ರಸ್ತೆ ನಿರ್ಮಾಪಕರು; ಸೇತುವೆ ಕಟ್ಟುವವರು. ಗುರು ಮಹಿಮೆ, ನಾಮ ಮಹಿಮೆ, ಮುಂತಾದ ವಿಷಯಗಳನ್ನು ಕುರಿತು ಅಲ್ಲಿ ಸೇರಿದ್ದ ಸಾವಿರಾರು ಜನಕ್ಕೆ ಬಾಬಾ ಬೋಧಿಸಿದರು.

ಕಾರುಗಳ ಸಾಲು ಬಲ್ಲವರ ಕಣ್ಣಿಗೆ, ಪ್ರೇಮಾನುಗ್ರಹ ವರ್ಷವನ್ನು ಬೀಳಿಸಲು ಬಂದ ಮೇಘಗಳಂತೆ ಕಾಣಿಸಿತು. ಹಾವೇರಿಯ 'ಗ್ರಾಮ ಸೇವಾ ಮಂಟಪ'ದ ಸಮೀಪದಲ್ಲಿ ಆ ಸಾಲು ನಿಂತಿತು. ಹಾವೇರಿಯ ಕಾಲೇಜುಗಳಲ್ಲಿನ (ವ್ಯವಸಾಯ ಕಾಲೇಜು ಸೇರಿ) ವಿದ್ಯಾರ್ಥಿಗಳೆಲ್ಲ ಸಭೆಯಲ್ಲಿದ್ದರು. "ಸುತ್ತ ಕಾಣುತ್ತಿರುವ ಮನೋಹರ ಪ್ರಕೃತಿ ದೃಶ್ಯಗಳು ಎಲ್ಲರ ಆಸ್ತಿ. ಅದನ್ನು ಸವಿದು, ಅದನ್ನು ಅನುಸರಿಸಲು ಎಲ್ಲರಿಗೂ ಸಮಾನವಾದ ಹಕ್ಕು! ಹಾಗೆಯೇ ದೈವಾನುಗ್ರಹವನ್ನು ಬಳಸಿಕೊಂಡು, ಆನಂದವಾಗಿ ಬಾಳಲು ನಿಮ್ಮೆಲ್ಲರಿಗೂ ಹಕ್ಕಿದೆ" - ಎಂದು ಬಾಬಾ ಘೋಷಿಸಿದರು. ಸಭೆಯ ಅಂಚಿನಲ್ಲಿ, ವ್ಯವಸಾಯ ಇಲಾಖೆಯ ಹಲವು ಗೋವುಗಳು ಕಿವಿ ಎತ್ತಿ ಗಾನಮಾಧುರ್ಯವನ್ನು ಪಾನ ಮಾಡುತ್ತಿದ್ದುವು. ತಾಯಿ ಜಠರದೊಳಗಿಂದ ಒಂದು ಕರು, ಸಾಯಿಕೃಷ್ಣನ ಮುರಳೀ ಕಂಠಕ್ಕೆ ಮರುಳಾಗಿ ಹೊರ ಬಂದು, ದನಗಳ ನಡುವೆ ನಿಂತಿತು. ರಾಣೆಬೆನ್ನೂರಲ್ಲಿ ಬಾಬಾ ಅವರು ಆರ್ಟ್ಸ್ ಮತ್ತು

ಸೈನ್ಸ್ ಕಾಲೇಜಿಗೆ ಶಂಕು ಸ್ಥಾಪನೆ ನೆರವೇರಿಸಿ, ಅಲ್ಲಿಂದ ಊರ ನಡುವಣ 'ಕಾಟನ್ ಮಾರ್ಕೆಟ್'ಗೆ ತೆರಳಿದರು. ಅಲ್ಲಿ ನೆರೆದಿದ್ದ ಜನಸ್ತೋಮದ ಶಿಸ್ತನ್ನೂ ಭಕ್ತಿಯನ್ನೂ ಕಂಡು ಎಲ್ಲರೂ ಬೆರಗಾದರು. ಒಂದು ಗಂಟೆಯ ಕಾಲ ತಮ್ಮ ಸುಮಧುರ ವಾಣಿಯಿಂದ, ಬಾಬಾ ಅವರನ್ನು ತಣಿಸಿದರು. ಸತ್ಯಂ ವಧ, ಧರ್ಮಂ ಚರ ಎಂಬುದೇ ಅವರ ಉಪದೇಶದ ಸಾರಾಂಶ.

ದಾರಿ ಮಧ್ಯ ಹರಿಹರದಲ್ಲೂ, ಕೆಲವು ನಿಮಿಷಗಳು ಕಾರು ನಿಲ್ಲಿಸಿ ಕೆಳಗಿಳಿದು, ವೇದಿಕೆಯ ಮೇಲೆ ನಿಂತು, ಬಾಬಾ ಭಕ್ತಾದಿಗಳಿಗೆ ದರ್ಶನವಿತ್ತರು.

ಅನಂತರ ದಾವಣಗೆರೆ, ಚಿತ್ರದುರ್ಗ, ಸಿರಾ, ತುಮಕೂರು ನಗರಗಳನ್ನು ಹಾದು, ಬೆಂಗಳೂರು ಸಮೀಪದ ಕಾಡುಗೋಡಿಯಲ್ಲಿರುವ 'ಬೃಂದಾವನ'ವನ್ನು ಸೇರಿದರು. "ತಮ್ಮ ಬಂಗಲೆಯನ್ನು ಸ್ವಾಮಿ ಪ್ರವೇಶಿಸಿದ ಮೇಲೆ, ನಾನು ಅವರನ್ನು ನಮಸ್ಕರಿಸಿ, ಹಿಂದಿರುಗಲು ಅಪ್ಪಣೆ ಕೇಳಿದೆ. ಆಗ ಅವರು, "ಅಡ್ಕೆ, ನೀನು ಒಬ್ಬನೇ ಅಲ್ಲ ಇಲ್ಲಿಂದ ಧಾರ್ವಾಡಕ್ಕೆ ಹೋಗುವವನು! ನಾನಿದ್ದೇನೆ ನಿನ್ನ ಸಂಗಡ! ನಾವಿಬ್ಬರೂ ಒಟ್ಟಾಗಿಯೇ ಹೋಗೋಣ!" - ಎಂದರು ಬಾಬಾ. ಅವರು ಸರ್ವಾಂತರ್ಯಾಮಿ, ಸರ್ವಜ್ಞ, ಸರ್ವಶಕ್ತ ಎಂಬುದಕ್ಕೆ ಆ ಮಾತೇ ಸಾಕ್ಷಿ!

ಭಾರತದ ಭವಿಷ್ಯತ್ತನ್ನು ರೂಪಿಸುವವರು ಗಮನಿಸಬೇಕಾದ ಪ್ರವಾಸ ಇದು. ಬಾಬಾ ಅವರು ಯಾವ ಸಣ್ಣ ಗ್ರಾಮಕ್ಕೆ ಹೋಗಲಿ, ಯಾವ ದೊಡ್ಡ ಪಟ್ಟಣಕ್ಕೆ ಹೋಗಲಿ, ಅವರ ಮುಂದೆ ಕುಳಿತು ಭಾಷಣ ಕೇಳುವ, ಹಾಡು ಹೇಳುವ ಸಭೆಯಲ್ಲಿ, ಹಳ್ಳಿಗರೇ ಇರಲಿ, ಪಟ್ಟಣಿಗರೇ ಇರಲಿ, ಗಂಡಸರೇ ಇರಲಿ, ವಿದ್ಯಾರ್ಥಿಗಳೇ ಇರಲಿ, ಕಾರ್ಖಾನೆ ಕೆಲಸಗಾರರೇ ಇರಲಿ, ಹೆಣ್ಣು ಮಕ್ಕಳೇ ಇರಲಿ, ಎಲ್ಲರೂ ಎಲ್ಲೆಡೆಯಲ್ಲೂ ಅಮಿತಾನಂದವನ್ನು ಪಡೆದರು; ಅಮಿತ ಶ್ರದ್ಧೆಯನ್ನು ಪ್ರಕಟಿಸಿದರು. ಆದ್ದರಿಂದ, ಈ ದೇಶ ಎಂದೂ ಆಧ್ಯಾತ್ಮಿಕ ಸಂದೇಶಕ್ಕೆ ಕಿವಿಗೊಡುತ್ತದೆ. ತ್ಯಾಗಕ್ಕೆ ಸೇವೆಗೆ, ಸಹನೆಗೆ, ಸಹಕಾರಕ್ಕೆ ಈ ದೇಶದ ಜನರು ಹಿಂಜರಿಯುವುದಿಲ್ಲ, ಎಂದು ನಾವು ಮನಗಾಣಬೇಕಾಗಿದೆ.

ದೀಪಾವಳಿ ಹಬ್ಬದ ದಿನ ಪ್ರಾರಂಭವಾದ ಈ ಪ್ರವಾಸ, ಉತ್ತರ ಕರ್ನಾಟಕದ ಹಳ್ಳಿ ಹಳ್ಳಿಯಲ್ಲೂ ದೀಪದ ಜಾತ್ರೆಯಾಗಿ ರೂಪುಗೊಂಡಿತು. ದಿವ್ಯಜ್ಯೋತಿಯನ್ನು ಹೊತ್ತಿಸಿ ದಿವ್ಯ ಶಕ್ತಿಯನ್ನೊದಗಿಸುವುದು, ಗುರುವಿನ ಕರ್ತವ್ಯ ಎಂದು ಯೋಗಿ ಅರವಿಂದರು ಹೇಳಿರುವರು. ಲಕ್ಷ ಹೃದಯಗಳಲ್ಲಿ ಬಾಬಾ ಜ್ಯೋತಿ ಬೆಳಗಿಸಿದರು; ಲಕ್ಷ ಮನೆಗಳಲ್ಲಿ ತೇಜಸ್ಸು ತುಂಬಿದರು.

# ವಿಶ್ವ ಕುಟುಂಬಿ

ಜಗತ್ ಇತಿಹಾಸವನ್ನು ಬರೆದು ಮೇಧಾವಿಗಳೆಲ್ಲರ ಮನ್ನಣೆ ಪಡೆದಿರುವ ಟಾಯಿನ್‌ಬೀ ಎಂಬ ಆಂಗ್ಲ ತತ್ವಜ್ಞ, ಇದು ಮಾನವ ಕುಲದ ಚರಿತ್ರೆಯಲ್ಲಿ ಅತ್ಯಂತ ಅಪಾಯದ ಗಳಿಗೆ! ಇದರಿಂದ ಪಾರಾಗಲು ಇರುವುದೊಂದೆ ಮಾರ್ಗ; ಭಾರತೀಯರ ಮಾರ್ಗ, ಎಂದು ಹೇಳಿದ್ದಾನೆ. ಈಚೆಗಂತೂ ಲೋಕ, ಭಯಭೀತಿಗಳಿಂದ, ದರ್ಪ ದುಃಖಗಳಿಂದ, ವಿಕಾರ ವಿಲಾಸಗಳಿಂದ ಉನ್ಮತ್ತವಾಗಿದೆ. ಆಷಾಢಭೂತಿತನ, ಯಾದವೀ ಮನೋಭಾವ, ಅತಿಯಾಸೆ, ದುರಹಂಕಾರ, ಹಿಂಸಾ ಮನೋವೃತ್ತಿ, ಇವು ಮಾನವನನ್ನು ಪೀಡಿಸುವ ರಾಜಕೀಯ ರೋಗಗಳು. ಭೋಗಲಾಲಸೆ, ಕಡುಬಡತನ, ರಕ್ತ ಪಿಪಾಸೆ, ಅಧಿಕಾರ ಮದ, ಇವು ಅವನನ್ನು ಕಾಡುತ್ತಿರುವ ಆರ್ಥಿಕ ರೋಗಗಳು. ಇವೆಲ್ಲಕ್ಕೂ ಮೂಲ ಕಾರಣ ಆತ್ಮ ವಿಶ್ವಾಸವಿಲ್ಲದೇ ಎಂದು ಬಾಬಾ ಅವರು ಸ್ಪಷ್ಟಪಡಿಸಿದ್ದಾರೆ. ಮಾನವನಿಗೆ ತನ್ನ ಮೇಲೆಯೇ ನಂಬಿಕೆ ಇಲ್ಲ. ತಾನು ಬಲಹೀನ, ತಾನು ಬಡವ, ತನ್ನತನದಲ್ಲಿ ದೃಢವಿಲ್ಲ, ತೃಪ್ತಿ ಇಲ್ಲ ಎಂಬ ಭಾವನೆಗಳನ್ನು ತಾನೇ ಆರೋಪಿಸಿಕೊಂಡು, ಅವನು ಸಂಕಟ ಪಡುತ್ತಿದ್ದಾನೆ. ತನ್ನಲ್ಲಡಗಿರುವ ಬಲವನ್ನು ಸೌಂದರ್ಯವನ್ನು ಶಾಂತಿಯನ್ನು, ಸತ್ಯವನ್ನು ತಿಳಿಯದೆ ಬೆಳೆಸದೆ ಬಳಸದೆ ಬಾಧೆ ಪಡುತ್ತಿದ್ದಾನೆ ಎಂದು ಬಾಬಾ ಹೇಳುತ್ತಾರೆ.

ಇಯಾನ್ ರ್‍ಯಾಂಡ್ ಎಂಬ ಅಮೆರಿಕಾ ದೇಶದ ಸಾಹಿತ್ಯೋಪಾಸಕಿ, "ಬದುಕು ಎಂದರೆ ಕರ್ಮ; ಕರ್ಮ ಎಂದರೆ ವಿಚಾರ, ವಿಚಕ್ಷಣೆ, ವಿವೇಕ; ವಿಚಕ್ಷಣೆ ಎಂದರೆ ಧರ್ಮಾಧರ್ಮಗಳ ಅರಿವು; ಆ ಅರಿವಿಗೆ ಬೇಕಾದದ್ದು ತತ್-ತ್ವ ಶಾಸ್ತ್ರ". ಯಾವುದು? ಈ ಪ್ರಶ್ನೆಗೆ ಟಾಯಿನ್‌ಬೀ ಅವರ ಉತ್ತರ, "ಭಾರತೀಯ ತತ್ವಶಾಸ್ತ್ರ"!

ಏಕೆಂದರೆ ಆ ಶಾಸ್ತ್ರ, ಪುಸ್ತಕ-ಮಸ್ತಕಗಳಲ್ಲಿ ಉಳಿಯದೆ, ಜೀವನದ ಪ್ರತಿ ಘಟ್ಟವನ್ನೂ ಅರ್ಥವತ್ತಾಗಿ, ರಸವತ್ತಾಗಿ ಆನಂದವಾಹಿನಿಯಾಗಿ ಮಾರ್ಪಡಿಸುತ್ತದೆ. ವ್ಯಕ್ತಿ ಕುಟುಂಬ, ಗ್ರಾಮ, ದೇಶ, ಜಗತ್ತು ಎಲ್ಲವನ್ನೂ ಆನಂದಮಯವಾಗಿ ಮಾರ್ಪಡಿಸುತ್ತದೆ. ಅದರ ತಾಯಿ ಬೇರುಗಳು, ಸತ್ಯ ಧರ್ಮ, ಶಾಂತಿ, ಪ್ರೇಮ.

ಆದ್ದರಿಂದಲೇ ಬಾಬಾ ಅವರು ಲೋಕ ಗುರುವಾಗಿ, ವಿರಾಟ್ ಸ್ವರೂಪವನ್ನು ತಾಳುತ್ತಿದ್ದಾರೆ. ಥಳಕು ಬಳಕು ತುಂಬಿರುವ, ಅಶಾಂತಿಯಿಂದ ಅಲ್ಲಾಡುತ್ತಿರುವ, ನವ ನಾಗರಿಕತೆ ಪೀಡಿತರಾದ ಬಿಳಿಯರೂ, ಅವರ ಅಜ್ಞಾನಿ ಅನುಯಾಯಿಗಳೂ, ತಂಡೋಪ ತಂಡವಾಗಿ ಬಾಬಾ ಸನ್ನಿಧಿಗೆ ಬರುತ್ತಿದ್ದಾರೆ. ಅವರನ್ನು 'ಪರದೇಶಿ'ಗಳೆಂದು ಬಾಬಾ ದೂಡುತ್ತಿಲ್ಲ. ಏಕೆಂದರೆ, "ನಾನು ಆಹ್ವಾನಿಸದೆ ನೀವು ನನ್ನ ಬಳಿಗೆ ಬರುವಂತಿಲ್ಲ. ನಿಮ್ಮಲ್ಲಿ ಪ್ರತಿ ಒಬ್ಬನ ಪೂರ್ವ ಚರಿತ್ರೆಯನ್ನು ನಾನು ಬಲ್ಲೆ. ಈಗಿನ ಪರಿಸ್ಥಿತಿ ನನಗೆ

ಪರಿಚಿತ. ಮುಂದಿನ ಭವಿಷ್ಯವೂ ನನಗೆ ವಿದಿತ. ನಿಮ್ಮ ಆವೇದನೆ, ಅದನ್ನು ಪರಿಹರಿಸುವ ವಿಧಾನ, ಎರಡೂ ನನಗೆ ತಿಳಿದಿದೆ" - ಎಂದು ಬಾಬಾ ಹೇಳುತ್ತಾರೆ.

"ನಮ್ಮಲ್ಲನೇಕರು ಸಾಯಿಬಾಬಾ ಅವರನ್ನು ಗೊತ್ತು ಮಾಡಿದ ರೀತಿ ವಿಚಿತ್ರ. ಉದಾಹರಣೆಗೆ, ಕ್ಯಾಲಿಫೋರ್ನಿಯಾದಲ್ಲಿ ಮೊಟ್ಟಮೊದಲು ಬಾಬಾ ವಿಷಯ ಹೇಳಿದ್ದು ಬಾಬ್ ರೇಯ್ಮರ್. ಅವರಿಂದ ಮರ್ಘೆಟ್ ತಿಳಿದುಕೊಂಡರು. ಮರ್ಘೆಟ್ ಇಂದ್ರಾದೇವಿಗೆ ಹೇಳಿದರು. ಬಾಬ್‌ಗೆ ಹೇಗೆ ತಿಳಿಯಿತು? ಒಬ್ಬ ಸ್ನೇಹಿತನಿಂದ. ಆತನಿಗೆ ಅವನ ಸ್ನೇಹಿತ ಹೇಳಿದ. ಹೀಗೆ ಹುಡುಕುತ್ತಾ ಹೋದರೆ, ಬಾಬಾ ಅವರೇ ಸಂಕಲ್ಪಿಸಿದರು ಎಂದು ಹೇಳಬೇಕಾಗುತ್ತದೆ" - ಎಂದು ಜಾನ್ ಹಿಸ್ಲಪ್ ಬರೆಯುತ್ತಾರೆ.

ಎಲ್ಸಿ ಕವನ್ ಎಂಬಾಕೆಯ ಕಥೆ ಕೇಳಿ: "ನಾನೂ ನನ್ನ ಗಂಡ ವಾಲ್ಟರ್, ಇಬ್ಬರೂ ನಮ್ಮ ದಾಂಪತ್ಯ ಪ್ರಾರಂಭವಾದಾಗಿನಿಂದ, ಸತ್ಯಾನ್ವೇಷಣೆಯಲ್ಲೇ ನಿರಂತರವೂ ನಿರತರಾಗಿದ್ದೆವು. ಇದಕ್ಕಾಗಿ ಹಲವಾರು ಗುರುಗಳನ್ನು ಆಶ್ರಯಿಸಿ, ಹತ್ತಾರು ಮಾರ್ಗ ಹಿಡಿದು, ಅಲ್ಪಸ್ವಲ್ಪ ಬೆಳಕು ದೊರಕಿಸಿಕೊಂಡೆವಾದರೂ, ಶಾಂತಿ ಮಾತ್ರ ಸಿಗಲಿಲ್ಲ. ಅದನ್ನು ಸಂಪಾದಿಸುವ ಬಗೆ ತಿಳಿಯಲಿಲ್ಲ. ಸಾಮಾನ್ಯವಾಗಿ ಎಲ್ಲ ಗುರುಗಳು, "ಕ್ರಿಸ್ತ ನಿಮ್ಮ ಒಳಗಿನೊಳಗಣ ಸತ್ಯ", ಎಂದೆಲ್ಲ ಬೋಧಿಸಿದರು. ಮೌನ, ಧ್ಯಾನ, ಜಪ, ಶ್ವಾಸದ ಹತೋಟಿ, ಎಲ್ಲ ಉಪಾಯಗಳನ್ನೂ ಶ್ರದ್ಧೆಯಿಂದ ಅನುಸರಿಸಿದೆವು. ಆದರೂ ತಳಮಳ, ತವಕ, ತಲ್ಲಣ, ಹಾಗೆಯೇ ಉಳಿದವು.

"ನಮಗೆ ತುಂಬಾ ನಿರಾಶೆ ಆಯಿತು. "ಆತ್ಮ ಸಾಕ್ಷಾತ್ಕಾರ ಎಂಬುದೊಂದಿದ್ದರೆ, ನಮಗೇಕೆ ಕೈಗೂಡದು? ದೇವರನ್ನು ನಾವು ತಿಳಿದನುಭವಿಸಿ ಆನಂದ ಪಡಬಾರದೇನು?' - ಎಂದು ಇಬ್ಬರೂ ಮೊರೆಯಿಟ್ಟೆವು. ಮೊರೆಗೆ ಮಾರುಲಿ ಕೇಳಿ ಬರಲಿಲ್ಲ; ಸಮಾಧಾನ ದೊರಕಲಿಲ್ಲ.

"ಕಡೆಗೊಂದು ದಿನ, ನಾವು ಒಂದು ನಿಶ್ಚಯ ಮಾಡಿಕೊಂಡೆವು. ಈಗ ಭೂಲೋಕದಲ್ಲಿ ಜೀವಂತವಾಗಿರುವ ಗುರುಗಳಲ್ಲಿ ಯಾರು ಪರಮ ಶ್ರೇಷ್ಠರೋ - ಅವರು ಯಾರು ಎಂಬುದು ತಿಳಿಯದು - ಅವರು ನಮ್ಮ ಕರೆಗೆ ಓಗೊಟ್ಟು, ಕರುಣೆಯಿಂದ ಬಂದು ನಮ್ಮನ್ನು ಕಾಪಾಡಲಿ" - ಎಂದು ಇಬ್ಬರೂ ಗಟ್ಟಿಯಾಗಿ ಕೂಗಿಕೊಳ್ಳುವುದು, ದಿನವೂ ಬೆಳಗ್ಗೆ ಸಂಜೆ.

ಆ ಕೂಗು ಆ ಪರಮ ಶ್ರೇಷ್ಠ ಗುರುವಿನ ಕಿವಿಗೆ ತಾಕಿತು. ನಮ್ಮಂಥವರಿಗಾಗಿಯೇ ಬಂದವರಲ್ಲವೆ ಅವರು? ಬೆಳಗಾಗುತ್ತಲೇ ಮನೆಗೊಬ್ಬರು ಸ್ನೇಹಿತರು ಬಂದರು. ನಮಗೆ ಒಂದು ಪುಸ್ತಕವನ್ನು ತಂದರು: ಸತ್ಯ ಸಾಯಿ ಬಾಬಾರವರ ಚರಿತ್ರೆ, ಸತ್ಯಂ ಶಿವಂ ಸುಂದರ! ಒಂದೇ ಉಸಿರಿನಲ್ಲಿ ಅದನ್ನೋದಿ ಮುಗಿಸಿದೆವು. ಪರಮ ಶಾಂತಿ ನಮಗೆ ಲಭ್ಯವಾಯಿತು.

ನಮ್ಮ ಪ್ರಾರ್ಥನೆ ಫಲಿಸಿತೆಂದು ತಿಳಿದೆವು. ಬಾಬಾ ನಮ್ಮನ್ನು ಬೆಂಬಿಡಲಿಲ್ಲ. ಆ ಸ್ನೇಹಿ ಜಾಡನ್ನು ಹಿಡಿದಾಗ, ಇನ್ನೂ ಹಲವಾರು ಗ್ರಂಥಗಳು ದೊರೆತವು. ಎಂಥ ಸರಳವಾ ಸರಳಿನಂತೆ ಮನಸ್ಸನ್ನು ಪ್ರವೇಶಿಸುವ ಹಿತೋಪದೇಶಗಳು! ಮುಂದಿನ ಭಾನುವಾ ಮಾಮೂಲಿನಂತೆ ದೇವ ಮಂದಿರಕ್ಕೆ ಹೋದೆವು. ಹತ್ತಾರು ವಾರಗಳಿಂದ ಕಣ್ಮರೆಯಾಗಿ ಒಬ್ಬಾಕೆ, ನನ್ನ ಪಕ್ಕದಲ್ಲೇ ಕುಳಿತಳು. ತನ್ನ ಪರ್ಸ್ ತೆರೆದು, ಮಡಿಸಿದ್ದ ಕಾಗದದ ಚೂರು ಬಿಡಿಸಿದಳು. ನಾನು ಕುತೂಹಲದಿಂದ ಅತ್ತ ಕಡೆ ನೋಡಿದೆ. "ಬೂದಿ ಬರಿಯ ಬೂದಿ ನೋಡಿ, ನನ್ನ ಪರಿಚಿತರೊಬ್ಬರು ಇಂಡಿಯಾಗೆ ಹೋಗಿ ಸಾಯಿಬಾಬಾರಿಂದ ಇದನ್ನು ತಂದಿತ್ತರು. ನಿಮಗೂ ಕೊಂಚ ಕೊಡಬೇಕೆಂಬ ಆಸೆ ಹೇಗೋ ನನ್ನಲ್ಲಿ ಬಲವಾಯಿ ಬಾಬಾ ಹೇಳಿದರಂತೆ, ರಾತ್ರಿ ಇದನ್ನು ಕೊಂಚ ನಾಲಿಗೆ ಮೇಲಿರಿಸಿ ಮಲಗಿ, ಎಂದು ಅಂತೂ ಹೀಗೆ, ಬಾಬಾ ನಮ್ಮ ಜೀವನದಲ್ಲಿ ಬೆರೆತು ಬೆರಗುಗೊಳಿಸಿ, ನಮ್ಮನ್ನು ಪ್ರ ಬಂಧನದಿಂದ ಬಿಗಿದು ಉಳಿಸಿದರು. ಪ್ರತ್ಯಕ್ಷ ಕಾಣದಿದ್ದರೂ, ಪ್ರಾಣಗಳಲ್ಲೇ ಪ್ರವೇಶಿಸಿದು ಪ್ರಶಾಂತಿ ನಿಲಯಕ್ಕೂ ಕರೆಯಿಸಿದರು".

ಹಿಸ್ಲಪ್ ಎಂಬುವರು ಮದುವೆಯಾದದ್ದು, ಶ್ರೀಯವರ ಅನುಗ್ರಹವನ್ನು ಶೈಶವದ ಪಡೆದ ಒಬ್ಬ ಮಹಿಳೆಯನ್ನು! ಹವಾನಾ ಎಂಬ ದ್ವೀಪದಲ್ಲಿ, ಮನೆಯ ಉದ್ಯಾನದಲ್ಲಿ, ತ ತಪ್ಪು ಹೆಜ್ಜೆಯಿಡುತ್ತಾ ಆ ಹೆಣ್ಣು ಮಗು ನಡೆಯುತ್ತಿದ್ದಾಗ, ಶಿರ್ಡಿ ಬಾಬಾ ರೂಪದಲ್ಲಿ ತಲೆಗೆ ಬಟ್ಟೆ ಕಟ್ಟಿದ ಅಜಾನುಬಾಹು ಮುದುಕರೊಬ್ಬರನ್ನು ಕಂಡು ಆ ಮಗು, "ದಾದಾ ದಾದಾ" ಎನ್ನುತ್ತ, ಅತ್ತ ಧಾವಿಸಿತಂತೆ! ಹಿಸ್ಲಪ್‌ನ ಜೊತೆ ಆಕೆ ನಿಲಯಕ್ಕೆ ಬಂದಾಗ "ನೆನಪಿದೆಯೆ ನಿನಗೆ? ದಾದಾ ಅಂತ ನೀನು ನನ್ನ ಬಳಿ ಓಡಿ ಬಂದುದು?" - ಅಂದು ೫೫ ಸಂವತ್ಸರಗಳ ಹಿಂದೆ ನಡೆದ ಆ ಘಟನೆಯನ್ನು ಸ್ವಾಮಿ ತದ್ವತ್ ವಿವರಿಸಿದರು'. ಎಂದು ಹಿಸ್ಲಪ್‌ರವರು ಹೇಳುತ್ತಾರೆ.

'ಅಮೇರಿಕಾ ಖಂಡದ ಯೋಗ ಶಿಕ್ಷಕರಲ್ಲಿ ಪ್ರಪ್ರಥಮರು' ಎಂದು ಅಲ್ಲಿಯ ಜ ಒಕ್ಕೊರಲಿಂದ ಅಭಿವಂದಿಸುವ ಇಂದ್ರಾದೇವಿ (ಹುಟ್ಟು ರಷ್ಯನ್, ಬೆಳೆದದ್ದು ಜರ್ಮನಿ ಯೋಗ ಕಲಿತಿದ್ದು, ಇಂಡಿಯಾದಲ್ಲಿ; ಪ್ರಚಾರ ಮಾಡಿದ್ದು ಚೀನಾ, ರಷ್ಯಾ, ಇಂಗ್ಲೆಂಡ್, ಫ್ರಾನ್ಸ್ ದೇಶಗಳಲ್ಲಿ, ನೆಲೆಸಿರುವುದು ಸಂಯುಕ್ತ ರಾಷ್ಟ್ರಕ್ಕೂ ಮೆಕ್ಸಿಕೋ ರಾಷ್ಟ್ರಕ್ಕೂ ನಡುವ ಗಡಿಯಲ್ಲಿ!) ೧೯೬೦ರಲ್ಲಿ ಬೊಂಬಾಯಿಯಲ್ಲಿದ್ದರೂ, ಬಾಬಾ ಅವರು ತಂಗಿದ್ದ 'ಗ್ವಾಲಿಯರ್ ಪ್ಯಾಲೆಸ್'ನ್ನು ಹಲವಾರು ಸಲ ದಾಟಿ ಹೋದರೂ, ಅತ್ತ ಕಡೆ ಗಮನ ಕೊಡಲಿಲ್ಲ. ಸಾಯಿ ಭಕ್ತರ ತಂಡದಿಂದ ತಮ್ಮ ಕಾರು ಅಲ್ಲಲ್ಲಿ ನಿಲ್ಲಬೇಕಾಯಿತಲ್ಲಾ ಎಂದು ಬೇಸರಗೊಂಡ ವಿನಹ, ಇಷ್ಟು ಲಕ್ಷ ಹೃದಯಗಳನ್ನು ಆಕರ್ಷಿಸಬಲ್ಲ ಮಹತ್ವ ಯಾರದು? - ಎಂದ ಹುಡುಕಲಿಲ್ಲ.

ಎರಡು ವರ್ಷಗಳ ನಂತರ, ಇಂಡೋ ಚೀನಾದಲ್ಲಿನ ಸೈಗೋನ್ ನಗರಕ್ಕೆ ಹೋಗುವ ಮಾರ್ಗದಲ್ಲಿ, ಮದ್ರಾಸ್‌ನ ಅಡ್ಯಾರ್‌ನಲ್ಲಿರುವ ಥಿಯಸಾಫಿಕಲ್ ಸೊಸೈಟಿಯಲ್ಲಿ ಒಂದು ದಿನ ಕಳೆದರು. ಆಗ ಅಲ್ಲಿ ಹಾವರ್ಡ್ ಮರ್ಫೆಟ್ ಮತ್ತು ಅವರ ಪತ್ನಿ, ಇಂದ್ರಾದೇವಿಗೆ, ತಾವು ಆಗ ತಾನೆ ನೋಡಿ ಬಂದಿದ್ದ ಬಾಬಾರವರನ್ನೂ ಅವರ ಅಗಾಧ ಪ್ರೇಮ, ಅನನ್ಯ ಜ್ಞಾನ, ಅದ್ಭುತ ಶಕ್ತಿಗಳನ್ನೂ ಕುರಿತು ಬೆಳಗಾಗುವವರೆಗೂ ಬಣ್ಣಿಸಿದರು! ಸಾಯಿಗಾನ್‌ನಿಂದ ಸಾಯಿ ನಗರವಾದ ಪ್ರಶಾಂತಿ ನಿಲಯಕ್ಕೆ ನೇರ ಬಂದರು ಇಂದ್ರಾದೇವಿ.

ಬೆಂಗಳೂರಿಂದ ಕಾರಲ್ಲಿ ಹೊರಟು, ಪುಟ್ಟಪರ್ತಿ ಸೇರುವ ಮುಂದು, ಕೇಂದ್ರ ಸರ್ಕಾರದ ಮಂತ್ರಿ ಶ್ರೀ ತ್ರಿಗುಣಸೇನ್ ಅವರನ್ನು, ದಾರಿಯಲ್ಲಿ ಕಂಡು ಮಾತನಾಡಿಸಿದರು. ಸೇನ್, "ಅಮ್ಮಾ, ಬಾಬಾರವರ ಪ್ರೇಮ ಎಷ್ಟೆಂದರೆ, ಅಲ್ಲಿಗೆ ಹೋದವರು ಅಲ್ಲೇ ಉಳಿದು ಬಿಡುತ್ತಾರೆ" - ಎಂದರು. ಅದಕ್ಕೆ ಇಂದ್ರಾದೇವಿ, "ಮತ್ತೆ ನೀವು ಹೇಗೆ ಹಿಂದಕ್ಕೆ ಬಂದಿರಿ?" - ಎಂದು ಕುಚೋದ್ಯ ಮಾಡಿದಳಂತೆ! ನಿಜಕ್ಕೂ ಅದು ಕುಚೋದ್ಯ! ಏಕೆಂದರೆ, ಇಂದ್ರಾದೇವಿಯ ಮನ, ಧ್ಯಾನ, ಎರಡೂ ಅಲ್ಲೇ ನಿಂತಿವೆ! "ಸಾಯಿಯೋಗ" ಎಂಬ ಹೊಸ ಯೋಗ ಪದ್ಧತಿಯನ್ನು ಅವರು ಸ್ಥಾಪಿಸಿದ್ದಾರೆ. ಅವರ ಮನೆ ಸಾಯಿ ನಿಲಯ, ಅವರ ಮನ ಸಾಯಿ ನಿಲಯವಾಗಿ ಮಾರ್ಪಟ್ಟಿದೆ.

ನ್ಯೂಯಾರ್ಕ್‌ನಲ್ಲಿರುವ ಹಿಲ್ಡಾ ಚಾರ್ಲ್‌ಟನ್ ಎಂಬುವರು, ಅವರು ಶ್ರೀಲಂಕೆಯಲ್ಲಿ ಅನೇಕ ವರ್ಷಗಳು ಸಾಧನೆ ಮಾಡಿ, ಡಿಲ್ಲಿ ಹತ್ತಿರದ ಗುರುಗಳೊಬ್ಬರಿಂದ ಜಗನ್ಮಾತೆಯ ಮಂತ್ರ ದೀಕ್ಷೆ ಪಡೆದು, ಶಿರಡಿಗೆ ಬಂದಾಗ, ಬಾಬಾರವರ ವಾರ್ತೆ ಕೇಳಿ, ಪುಟ್ಟಪರ್ತಿಗೆ ಬಂದು, ಈಗ ಅವರ ಪಾದದ ಗುರುತನ್ನನುಸರಿಸಿ ತಮ್ಮ ಜೀವನವನ್ನಳವಡಿಸಿಕೊಂಡಿರುವ ಮಹಿಳಾಮಣಿ. ನಾರ್ವೆ ರಾಜ್ಯದ ಆಸ್ಲೋನಗರದ ಟಿಡಿಮನ್ ಜೊಹಾನೆಸ್ಸಿನ್ ಎಂಬುವರು ಕೂಡ, ಬಾಬಾರವರ ವಾರ್ತೆಯನ್ನು ಶಿರಡಿಯಲ್ಲೇ ಪ್ರಥಮತಃ ತಿಳಿದುಕೊಂಡರು!

ಅವರು ಬೊಂಬಾಯಿ ಬಂದರಲ್ಲಿ ಹಡಗುಗಳ ಏಜನ್ಸಿ ಒಂದರಲ್ಲಿ ಭಾರೀ ಉದ್ಯೋಗದಲ್ಲಿದ್ದರು. ಅವರ ಸಾಮರ್ಥ್ಯವನ್ನೂ ಸಂಪಾದನೆಯನ್ನೂ ಸಹಿಸದ ಶತ್ರುಗಳು, ಮಂತ್ರ ಮಾಟಗಳಿಂದ ತುಂಬಾ ಪೀಡಿಸಿದಾಗ, ಅವರು ಒಬ್ಬ ಪಾರ್ಸಿ ಪುರೋಹಿತರ ಜೊತೆ ಶಿರಡಿಗೆ ಹೋಗಿ, ಸಾಯಿಬಾಬಾಗೆ ಶರಣಾದರು. ೧೯೬೭ರಲ್ಲೊಂದು ದಿನ, ಬಾಬಾರವರೇ (ನೀಲಿ ಅಂಗಿ ಧರಿಸಿದ್ದ ವಾಮನ ರೂಪನಾಗಿ) ಪ್ರತ್ಯಕ್ಷನಾಗಿ, ಅವರ ಬೆನ್ನ ಮೇಲೆ ಕೈಯಿರಿಸಿ, "ಅಯ್ಯಾ ಎಂದಾದರೂ ಸತ್ಯಸಾಯಿ ಬಾಬಾರನ್ನು ದರ್ಶನ ಮಾಡಿದೀಯಾ?" - ಎಂದು ಕೇಳಿದರು. ಅವನ ಕೈಗೊಂದು ಸಣ್ಣ ಚಿತ್ರವನ್ನೂ ಇರಿಸಿದರು. ಮಾರ್ಚ್ ೧೪ನೆ ತಾ|| ಬೊಂಬಾಯಿಯಲ್ಲಿ ಅವರನ್ನು ನೋಡಬಹುದು" - ಎಂದು ಹೇಳಿ ಮಾಯವಾದರು! ಅಂದು ಫೆಬ್ರವರಿ ೧೧ ನೆ ತಾ||

ಬೊಂಬಾಯಿ ಭಕ್ತರಿಗೆ ಆ ಸುದ್ದಿ ಇನ್ನೂ ತಿಳಿಯದು. ಬಾಬಾ ಅವರು ತಮ್ಮೂ ಎಂದು ಬರುವರೆಂಬ ವಿವರ ಅವರು ತಿಳಿದದ್ದು ಮಾರ್ಚ್ ೧ನೆ ತಾ| ಮಾತ್ರ! ಟಿಡಿಮನ್ ಹೇಳಿದಂತೆ, ಬಾಬಾ ಮಾರ್ಚ್ ೧೩ಕ್ಕೆ ಬೊಂಬಾಯಿ ಸೇರಿದರು. ಗ್ವಾಲಿಯರ್ ಅರಮನೆಯಲ್ಲಿ ಬಿಡಾರ ಮಾಡಿದರು. ಟಿಡಿಮನ್ ಕೂಡ, ಹೇಗೋ ಆ ಜಾಗ ಪತ್ತೆ ಹ ಬೆಳಗ್ಗೆ ಭಜನೆಗೆ ಹಾಜರಾದ; ಸ್ವಾಮಿ ಅವನೆದುರು ನಿಂತು, ಗುರುತು ಹಿಡಿದು, ಬೆನ್ನ ಮೇ ಕೈ ಇರಿಸಿ, ಒಳಕ್ಕೆ ಕರೆದು, ಅವನಿಗಾದ ಅನಾಹುತಗಳನ್ನೆಲ್ಲ ತಾವೇ ತಿಳಿಸಿ, ಮಂತ್ರ ಮಾಟಗಳೆಲ್ಲ ನಿಷ್ಫಲವಾದದ್ದು ತಮ್ಮ ಅನುಗ್ರಹದಿಂದಲೇ ಎಂದು ತಿಳಿಸಿ, "ಭಯ ಬೇ ಈ ಕ್ಷಣದಿಂದ, ಎಲ್ಲ ವಿಷಯಗಳಲ್ಲೂ ನಾನೇ ನಿನಗೆ ದಾರಿ ತೋರಿಸಿ, ನಿನ್ನನ್ನು ನಡೆಸುತ್ತೇನೆ" - ಎಂದರು.

ಚಲನ ಚಿತ್ರಗಳಿಗೆ ಕಥೆ ಬರೆಯುವುದೇ ತನ್ನ ಪ್ರಮುಖ ಜೀವನೋಪಾಯವಾ ಎಣಿಸಿದ್ದ ಸುಪ್ರಸಿದ್ಧ ಅಮೇರಿಕನ್ ಸಾಹಿತಿ ಆರ್ನಾಲ್ಡ್ ಷುಲ್ಮನ್, ಒಮ್ಮೆ ಭಾರತ ಪ್ರವಾಸ ನಡುವೆ, ಬಾಬಾ ಅವರನ್ನು ವೈಟ್ ಫೀಲ್ಡಲ್ಲಿ ಸಂದರ್ಶಿಸಿ, ಸ್ವದೇಶಕ್ಕೆ ಹಿಂತಿರುಗಿ, ಭಾರತ 'ಗುರು'ಗಳೆಲ್ಲರೂ ಸೋಮಾರಿಗಳು, 'ಶಿಷ್ಯ'ರೆಲ್ಲರೂ ದಡ್ಡರು, ಎಂಬ ಅಭಿಪ್ರಾಯವನ್ನು ಸಾರುತ್ತ ಬಂದ! ಆದರೆ, "ಇದ್ದಕ್ಕಿದ್ದ ಹಾಗೆ ಒಂದು ದಿನ, ನನಗೆ ಕೊಂಚವೂ ಇಷ್ಟವಿರದ ಒಂದು ಆಶೆ ನನ್ನನ್ನು ಬಾಧಿಸತೊಡಗಿತು. ಅದನ್ನು ನನ್ನಿಂದ ನಿಷೇಧಿಸಲಾಗಲಿಲ್ಲ; ಒತ್ತರಿಸಲಾಗಲಿಲ್ಲ ಅದರಿಂದ ತಪ್ಪಿಸಿಕೊಳ್ಳಲು ನಾನು ಬಹಳ ಪ್ರಯತ್ನ ಮಾಡಿದೆ. ಆ ಆಶೆಯನ್ನು ಪೂರೈಸಿದರೆ ಕಾಲ ನಷ್ಟ, ಹಣ ನಷ್ಟ, ಸುಖಕ್ಕೆ ಬದಲಾಗಿ ದುಃಖವೇ ಪ್ರಾಪ್ತಿ. ನನ್ನ ಹೆಸರಿಗೆ ಅಪಕೀರ್ತಿ - ಎಂದೆಲ್ಲ ನಾನು ನನ್ನ ಮನಸ್ಸಿಗೆ ತೀವ್ರ ಬೋಧಿಸಿದೆ. ಊಹುಂ! ಅದು ಜಗ್ಗಲಿಲ್ಲ, ಜಗ್ಗಲಿಲ್ಲ" - ಎನ್ನುತ್ತಾರೆ ಷೂಲ್ಮನ್. ಬಾಬಾ ಅವರನ್ನು ಕುರಿತು ಒಂದು ಪುಸ್ತಕ ಬರೆಯಬೇಕೆಂಬುದೇ ಆ ದೈವಪ್ರೇರಿತ ಆಸೆ! ಕಡೆಗೆ ಭಾರತಕ್ಕೆ ಬಂದ. ಬಾಬಾ ಅವರು ಬೃಂದಾವನದಲ್ಲಿ ಅವನನ್ನು ಕರೆದು ಮಾತನಾಡಿದರು. "ಸಮಯ ಬಂದಾಗ, ನಾನು ಬೇಕಾದವರನ್ನೆಲ್ಲ ನನ್ನ ಹತ್ತಿರಕ್ಕೆ ಯಾವುದಾದರೂ ನೆಪದಿಂದ ಕರೆಯಿಸಿಕೊಳ್ಳುತ್ತೇನೆ. ನನ್ನನ್ನು ಕುರಿತು ಪುಸ್ತಕ ಬರೆ, ಎಂದು ನಿನ್ನನ್ನು ಕಾಡಿದವನು ನಾನೇ! ಆದರೆ ಪುಸ್ತಕಕ್ಕಾಗಿ ಅಲ್ಲ; ನನಗೇಕೆ ಪ್ರಚಾರದ ಪುಸ್ತಕಗಳು? ನನಗೆ ಬೇಕಾದದ್ದು ನೀನು! ನೀನು! ನಿನ್ನನ್ನು ತಿದ್ದಿ, ನೀನು ನಂಬಿರುವ ತಪ್ಪುಗಳನ್ನು ನಿನ್ನ ಮನಸ್ಸಿಂದ ಹೊಡೆದು ಹಾಕಿ, ನಿನ್ನನ್ನುದ್ಧರಿಸುವುದು!" ಎಂದು ಅವನಿಗೆ ಸ್ಪಷ್ಟ ಹೇಳಿದರು.

ಅಂತೂ, ಬಾಬಾ ಅವರ ವಿಶ್ವಕುಟುಂಬದ ಮಕ್ಕಳು ನಾಲ್ಕು ದೆಸೆಗಳಿಂದಲೂ ಹ ಹರಿದು ಬರುತ್ತಿದ್ದಾರೆ! ಹಿಸ್ಲಪ್ ಎಂಬುವರ ಹಾಗೆ, ಅವರಲ್ಲನೇಕರು ತಮ್ಮ ತಮ್ಮ ಊರುಗಳಲ್ಲೇ ಗುರು ಸಾನ್ನಿಧ್ಯದಲ್ಲಿ ಸಾಧನೆ ಮಾಡಿದವರು! ಅನೇಕರು ಜಪಾನ್ ದೇಶದ ಜೆನ್ ಮಠಗಳಲ್ಲಿ ಧ್ಯಾನಯೋಗಾಭ್ಯಾಸ ಮಾಡಿದವರು; ಬರ್ಮಾದಲ್ಲಿ ಬೌದ್ಧವಿಹಾರಗಳ

ವಾಸ ಮಾಡಿದವರು; ನೇಪಾಳದಲ್ಲಿ ಶೈವ ಸಂಪ್ರದಾಯವನ್ನಾಚರಿಸಿದವರು; ಭಾರತದಲ್ಲಿನ ವಿವಿಧ ಯೋಗ ಶಾಲೆಗಳಲ್ಲಿ ಕಲಿತವರು. ಶ್ರೀರಾಮಕೃಷ್ಣ ಮಿಷನ್‌ಗೆ ಸೇರಿದ ಸನ್ಯಾಸಿಗಳ ಸಂಪರ್ಕದಿಂದಲೋ, ಯೋಗಾನಂದರ ಸೆಲ್ಫ್ ರಿಯಲೆ ಸೈಷನ್ ಫೆಲೋಷಿಪ್‌ನ ಸದಸ್ಯತ್ವದಿಂದುಂಟಾದ ಆಧ್ಯಾತ್ಮಿಕ ದಾಹದಿಂದಾಗಿಯೋ, ಹರೇಕೃಷ್ಣ ಪಂಥದಿಂದ ದೊರಕಿದ ಉತ್ಸಾಹದಿಂದಲೋ, ಅವರೆಲ್ಲ ಆತ್ಮ ಜಿಜ್ಞಾಸೆ, ಆತ್ಮ ಸಂಯಮಗಳನ್ನು ಬಲಪಡಿಸಿ, ಆತ್ಮಜ್ಞಾನಕ್ಕಾಗಿ ತವಕ ಪಡುವವರೇ!

ಹಣದ ಗಂಟನ್ನು ದೋಚಿ, ಆತ್ಮ ಸಾಕ್ಷಾತ್ಕಾರಕ್ಕೆ ಅಡ್ಡ ದಾರಿ ತೋರಿಸುವ ಅಳಲೆಕಾಯಿ ಗುರುಗಳನ್ನಾಶ್ರಯಿಸಿ ಬೇಸತ್ತು, ಹಠ ಯೋಗವನ್ನುಪದೇಶಿಸಲು ಅರ್ಹತೆ ಯಿಲ್ಲದವರಿಂದ ಅದನ್ನು ಕಲಿತು, ಆರೋಗ್ಯವನ್ನೂ ಮನಶ್ಶಾಂತಿಯನ್ನೂ ಕಳೆದುಕೊಂಡು ನರಳುವವರೂ, ಬಾಬಾ ಸನ್ನಿಧಿಯಲ್ಲಿ, ತಮ್ಮನ್ನು ಸಂತೈಸಿ ಸಂತೃಪ್ತಿಯನ್ನೀಯುವ ಸದ್ಗುರುವನ್ನು ಕಂಡರು. ವಾಚಾಳರ ವಾಗ್ಜಾಲದಿಂದ ವಕ್ರದಾರಿ ಹಿಡಿದು ಮುಗ್ಗರಿಸಿದವರು, ಪಂಡಿತರ ಡುಕ್ರುಂಕ ರಣವನ್ನೇ ನಂಬಿ, ವಾದ ವಿವಾದದ ಮರಳುಗಾಡಿನಲ್ಲಿ ಸಿಕ್ಕಿ ದಿಕ್ಕು ಕಾಣದೆ ತತ್ತರಿಸುವವರು, ಬಾಬಾ ಅವರಿಂದ ಸರಳ ಸುಂದರವಾದ, ಶಾಶ್ವತ ಶೀತಳವಾದ, ಅಮೃತೋಪಮ ಆದೇಶಗಳನ್ನು ಪಡೆದು ಸಂತುಷ್ಟರಾದರು.

"ಮಾವಿನ ಮರದ ಎಲ್ಲ ಮೊಗ್ಗುಗಳೂ, ಹೂವಾಗುವುದಿಲ್ಲ; ಎಲ್ಲ ಹೂವುಗಳೂ ಕಾಯಾಗುವುದಿಲ್ಲ; ಎಲ್ಲ ಕಾಯೂ ಹಣ್ಣಾಗುವುದಿಲ್ಲ; ಎಲ್ಲ ಹಣ್ಣುಗಳೂ ಹಸಿದವರ ಹೊಟ್ಟೆ ಸೇರಿ, ಶಕ್ತಿ ಶಾಂತಿ ಸಂತೋಷಗಳಾಗಿ ರೂಪಾಂತರಗೊಳ್ಳುವುದಿಲ್ಲ" - ಎಂದು ಬಾಬಾ ಹೇಳಿದ್ದಾರೆ. "ನಾಯಮಾತ್ಮ ಬಲಹೀನೇನ ಲಭ್ಯಃ". ವೇದವಾದರತರೂ, ಅರೆದೃಷ್ಟಿಯ ಅಜ್ಞಾನಿ ಗಳೂ,ತಾಮಸರಾದ ಜಡ ಪ್ರಕೃತಿಯವರೂ, ಅಹಮ್ಮತಿಯನ್ನವಲಂಬಿಸುವವರೂ, ಆಡಂಬರ ಪ್ರಿಯರೂ, ಮಾರ್ಗಮಧ್ಯೆ ಬೀಳುವರು. ಅವರಿಗೆ ತಕ್ಕ, ಅವರ ಅವಸ್ಥೆಗೆ ಅನುಗುಣವಾದ ಔಷಧಿ, ಅವರಿಗೂ ಬಾಬಾ ಅವರಿಂದ ದೊರೆಯುವುದು.

ಲಾಸ್ ಏಂಜಲಿಸ್ ಎಂಬ ನಗರದಲ್ಲಿ, "ಪ್ರಾಚ್ಯ ಪಾಶ್ಚಾತ್ಯ ಸಾಂಸ್ಕೃತಿಕ ಕೇಂದ್ರ" - ಎಂಬ ಪ್ರಖ್ಯಾತ ಸಂಸ್ಥೆಯನ್ನು ಸ್ಥಾಪಿಸಿ ನಡೆಸುತ್ತಿರುವ, ಡಾ| ಜೂಡಿತ್ ಲೈಬರ್ಗ್ ಎಂಬಾಕೆ, "ನಾನು ಪುಟ್ಟಪರ್ತಿಯಿಂದ ಹಿಂದಿರುಗಿ ಈಗ ೩ ಸಂವತ್ಸರಗಳಾದುವು. ನನ್ನನ್ನು ಶ್ರೀ ಸತ್ಯ ಸಾಯಿ ಬಾಬಾ ಅವರು ಕೃಪೆಯಿಂದ ಹರಸಿದರು. ಈಗಲೂ ಅವರ ಕೃಪಾಹಸ್ತ ನನ್ನನ್ನು ಹಲವು ರೀತಿಗಳಲ್ಲಿ ಪ್ರತ್ಯಕ್ಷ ರಕ್ಷಿಸುತ್ತಿದೆ. ಅದಕ್ಕಾಗಿ ನಾನೆಂದಿಗೂ ಅವರಿಗೆ ಕೃತಜ್ಞಳು" - ಎಂದು ಬರೆಯುತ್ತಾಳೆ. ಇರಾನ್ ರಾಜ್ಯದ ಟೆಹರಾನ್‌ದಿಂದ ಹಕೀಂ ಸಾದೆ ಎಂಬುವರು, "ನನ್ನ ಹೃದಯ ಭಾರವನ್ನು ಬಾಬಾ ಇಳಿಸಿದರು. ನನ್ನ ಅಂತರಂಗದ ತಳಮಳವನ್ನು ಅವರು ಶಾಂತಗೊಳಿಸಿದರು. ಈಗ ನನ್ನ ಜೀವನ ಪಥವೇ ಹೊಸದಾಗಿದೆ" - ಎನ್ನುತ್ತಾರೆ.

ಹತ್ತು ತಿಂಗಳುಗಳಿಂದ ನಿಲಯದಲ್ಲೇ ಇರುವ ಜ್ಞಾನಿ ಗ್ರೀನ್ ಎಂಬಾಕೆ. "ಬಾಬಾ ನನಗೆ ಹೇಳಿದರು: ಇನ್ನು ಮೇಲೆ ವೈದ್ಯರು ಬೇಡ, ಮದ್ದು ಬೇಡ, ಚಿಕಿತ್ಸೆ ಬೇಡ," ಎಂದು ಬರೆದಿದ್ದಾಳೆ. "ಒಂದು ದಿನ ಕತ್ತಲೆಯಲ್ಲಿ ನನ್ನ ಬಲಗಾಲು ಸಣ್ಣ ಹಳ್ಳಕ್ಕೆ ಸಿಕ್ಕಿ ಮೂಳೆ ಮುರಿಯಿತು. ವಿಪರೀತ ನೋವು. ನನ್ನನ್ನು ಮಿತ್ರರು ಹೊತ್ತು ಸಾಗಿಸಿದರು. ಆಗ ಇದ್ದಕ್ಕಿದ್ದಂತೆ ನೋವು ನಿಂತಿತು. ಆ ಕಾಲು ಮರದ ಕಾಲಿನಂತಾಯಿತು. ಚಕ್ರದ ಗಾಡಿಯೊಂದರಲ್ಲಿ ಕೂರಿಸಿ ಮಿತ್ರರು ನನ್ನನ್ನು ಭಜನೆ ಕೇಳಲು ನೂಕಿದರು. ಕೇಳುತ್ತ ಕೇಳುತ್ತ ತನ್ನ ಕಾಲಿಗೆ ಜೀವ ಬಂತು. ಹಾಗೆಯೇ ಅವರು ನನ್ನ ಬುದ್ಧಿಗೂ ಭಾವನೆಗೂ ಜೀವ ತುಂಬುತ್ತಲೇ ಇದ್ದಾರೆ".

ಬಾಬಾ ಸಾನ್ನಿಧ್ಯಕ್ಕೆ ಬರುವ ಮೊದಲೇ, ಅವರ ಹಾಡಿನ, ಉಪನ್ಯಾಸಗಳ ಧ್ವನಿ ಮುದ್ರಣ ಕೇಳುವುದರಿಂದಲೇ, ಅಥವಾ ಅವರು ರಚಿಸಿರುವ ಗ್ರಂಥಗಳನ್ನೋದುವುದರಿಂದಲೇ, ಅವರ ಚಿತ್ರವೊಂದನ್ನು ನೋಡುವುದರಿಂದಲೇ, ಅನೇಕ ವಿದೇಶಿಯರು ಅವರಿಂದ ಆಕರ್ಷಿತರಾಗಿದ್ದಾರೆ. ತಮೇವೇಷ ವೃಣುತೆ, ತೇನಲಭ್ಯ; ಅವರು ಯಾರನ್ನು ಆರಿಸುವರೋ, ಅವರಿಗೆ ಅವರು ಸುಲಭ ಜಾನ್ ಎವರ್ಸೋಲ್ ಎಂಬುವರು, ಅಮೆರಿಕಾದ ಪಶ್ಚಿಮ ತೀರದ ಸಾಂತಾ ಬಾರ್ಬರಾ ಎಂಬಲ್ಲಿದ್ದಾರೆ. ಅವರು ನನಗೆ ಬರೆಯುತ್ತಾರೆ; "ಅವರನ್ನು ನನ್ನ ಗಮನಕ್ಕೆ ತಂದ ನಿಮಗೆ ನಾನು ಚಿರಋಣಿ! ಆದ್ದರಿಂದಲೇ ಅಲ್ಲವೆ, ಅವರ ರೂಪ ಚಿತ್ರ ನನ್ನ ಮನೆ ಗೋಡೆಯನ್ನಲಂಕರಿಸಿದ್ದು. ನನ್ನ ಅಂತಃಕರಣವನ್ನು, ಅವರ ವಿಭೂತಿ ಪ್ರಸಾದ ಪುನೀತಗೊಳಿಸಿದ್ದು. ಅವರನ್ನೇ ಸದ್ಗುರುವಾಗಿ ಆರಿಸಿ, ನಾನೂ ನನ್ನ ಕುಟುಂಬದವರೂ, ಅವರ ಮಾರ್ಗದಲ್ಲಿ ನಡೆಯುತ್ತಿರುವುದು. ಭೂಗೋಳದ ಅತ್ತ ಕಡೆಯಿಂದ, ನನ್ನ ಕಣ್ಣೀರು ಅವರ ಪಾದಗಳನ್ನು ಆನಂದದಿಂದ ಅಭಿಷೇಕ ಮಾಡುತ್ತಿರುವುದು!"

ಪುಟ್ಟಪರ್ತಿಗೆ ಬಂದ ತಮ್ಮ ಶಿಷ್ಯೆಯೊಬ್ಬಳಿಗೆ, ಹಿಲ್ಡಾ ಚಾರ್ಲ್‌ಟನ್ ಬರೆಯುತ್ತಾಳೆ: "ಅವರ ಆಜ್ಞೆಯಂತೆ ನಡೆನುಡಿಗಳನ್ನು ತಿದ್ದದ ಬಹು ಮಂದಿ ನಿನಗೆ ಎದುರಾಗಬಹುದು. ಆಗ, ನನ್ನನ್ನು ಬಾಬಾ ಪರೀಕ್ಷಿಸುತ್ತಿದ್ದಾರೆ, ಎಂಬ ಭಾವನೆಯನ್ನು ಬೆಳೆಸಿಕೊಳ್ಳಬೇಕು. ಎಲ್ಲರೂ ಬಾಬಾ ಅವರ ಅಂಶಗಳು. ಅವರನ್ನು ಪೂಜಿಸುವವರು ಅವರ ಅಂಶಗಳನ್ನು ತ್ಯಜಿಸಬಾರದು".

ನನಗೆ ಹಿಲ್ಡಾ ಒಮ್ಮೆ ಹೀಗೆ ಪತ್ರ ಬರೆದಳು: "ನಾವು ಇಲ್ಲಿ ಸತ್ಸಂಗದಲ್ಲಿ ಧ್ಯಾನ ಮಾಡುವಾಗ, ಬಾಬಾ ಅವರ ಪ್ರತ್ಯಕ್ಷ ಸಾನ್ನಿಧ್ಯವನ್ನು ಅನುಭವಿಸಿ ಆನಂದಿಸುತ್ತಿದ್ದೇವೆ. ಆ ಆನಂದ ಸೀಮಾತೀತ! ಕನಸಿನಲ್ಲಿ ಬಾಬಾ ದರ್ಶನ ಕೊಡುತ್ತಿದ್ದಾರೆ. ಕನಸಿನಲ್ಲೂ ಅವರನ್ನು ಅನೇಕರು ಕಂಡು ನಲಿಯುತ್ತಿದ್ದಾರೆ. ಅನೇಕರ ಖಾಯಿಲೆಗಳನ್ನು ವಾಸಿ ಮಾಡುತ್ತಿದ್ದಾರೆ. ಮಾದಕ ಪದಾರ್ಥಗಳ ಸೇವನೆಯಿಂದ ಅನೇಕರನ್ನು ರಕ್ಷಿಸಿದ್ದಾರೆ".

ಮತ್ತೊಂದು ಪತ್ರದಲ್ಲಿ ಆಕೆ, "ಅವರ ಬಳಿ ಪ್ರಶಾಂತಿ ನಿಲಯದಲ್ಲಿ ಕಳೆದ ವಾರಗಳನ್ನು, ನಾನು ತುಂಬು ಸಂತೃಪ್ತಿಯಿಂದ ನೆನೆದುಕೊಳ್ಳುತ್ತಿದ್ದೇನೆ. ಅಂಥ ಸದವಕಾಶ ನನ್ನ

ಜೀವಮಾನದಲ್ಲಿ ಇನ್ನು ದೊರಕದು. ಅಲ್ಲಿಂದ ಹೊರಟಾಗ ನನಗೆ, ಎರಡೇ ಎರಡು ಮಾತು ಹೇಳಿದರು ತಮ್ಮನ್ನು ಕುರಿತು: "ನಾನು ರೂಪರಹಿತ. ನಾಮಗಳಿಗತೀತ" - ಎಂದು. ಹೌದು! ಅವರು ಸರ್ವ ವ್ಯಾಪಿ ಎಂಬ ಸತ್ಯವನ್ನು, ಈಗ ಹಲವಾರು ಬಾರಿ ಸ್ವಾನುಭವದಿಂದ ತಿಳಿದುಕೊಳ್ಳುತ್ತಿದ್ದೇನೆ".

ಫ್ರಾನ್ಸ್ ದೇಶದ ಡಯಾನಾ ಮಾರ್ಕೀರ್ ಎಂಬಾಕೆಯ ಅನುಭವವನ್ನು ಗಮನಿಸಿ! "ನನ್ನ ಗೆಳತಿಯ ಮನೆಯಲ್ಲಿ ಅವರದು ಒಂದು ಛಾಯಾಚಿತ್ರವಿತ್ತು. ಅದರ ಕೆಳಗೆ, 'ನಾನಿರುವಾಗ ಭಯವೇಕೆ?' - ಎಂದು ಅಚ್ಚು ಮಾಡಿತ್ತು. ಅದನ್ನೋದಿದಾಗ, "ಓಹೊ! ಇಷ್ಟಕ್ಕೆ ಬಂತೆ? ನಾನೇ ದೇವರು ಎಂದು ಹೇಳುವ ದಾರ್ಷ್ಟ್ಯಕ್ಕೆ ಬಂತು" - ಎಂದು ನಕ್ಕೆ. ಆದರೂ ಅವಳ ವಿವರಣೆಯನ್ನು ಕೇಳಿದಾಗ, ನಂಬಿಕೆ, ಭಕ್ತಿ, ಶ್ರದ್ಧೆ ಮನದಲ್ಲಂಕುರಿಸಿತು. ಒಂದು ದಿನ, ಗಂಡನನ್ನು ೩೦೦ ಡಾಲರ್ ಕೇಳಿದೆ; ಆತ ಬರೀ ಕೈ ತೋರಿಸಿ, ಸಾಧ್ಯವಿಲ್ಲವೆಂದ. ಆಗ ನಾನಂದೆ, "ನನಗೆ ೩೦೦ ಕೊಟ್ಟರೆ, ಬಾಬಾ ನಿನಗೆ ೩೦೦೦ ಕೊಡುತ್ತಾರೆ" "ಹಾಗೆಯೇ ಸ್ವಾಮಿ ನಡೆಸಿಕೊಟ್ಟರು. ೩೦೦೦ ಡಾಲರುಗಳು ಆ ದಿನ ಆತನಿಗೆ ಸಿಕ್ಕಿತು. ನನಗೆ ನನ್ನ ೩೦೦ ಡಾಲರುಗಳನ್ನು ಬಾಬಾ ಕೊಡಿಸಿದರು".

ಸಾಂತಾ ಬಾರ್ಬರಾದಿಂದ ಮುರಿಯಲ್ ಎಂಗೆಲ್ ಬರೆಯುತ್ತಾರೆ. "ದೇವರ ಸಾಮೀಪ್ಯವನ್ನು ಹೀಗೆ ನಾನೆಂದೂ ಪಡೆದಿರಲಿಲ್ಲ. ಬಾಬಾ ಅವರು ಜೀಸಸ್ ಕ್ರೈಸ್ತ್ ಎಂದು ನಾನು ಹೇಳಿದರೆ ನೀನು ನಂಬುತ್ತೀರೋ ಏನೋ? ನಾವು ಯಾರು, ಏತಕ್ಕಾಗಿ ಅವರನ್ನು ಸಮೀಪಿಸುತ್ತಿದ್ದೇವೆ, ಎಂಬುದನ್ನವರು ಬಲ್ಲರು. ನಮ್ಮ ದೋಷಗಳನ್ನೆಲ್ಲ ಕ್ಷಮಿಸಿ ಈ ಸರ್ವಜ್ಞ ಮೂರ್ತಿ, ನಮ್ಮನ್ನು ಕನಿಕರದಿಂದ ಕಾಪಾಡುತ್ತಾರೆ. "ಜರ್ಮನಿಯಿಂದ ಒಬ್ಬಾಕೆ ಮರ್ಫೆಟ್‌ಗೆ ಬರೆದಿರುವಳಂತೆ: "ಪ್ರೇಮಾವತಾರ ಮೂರ್ತಿ, ಬಾಬಾ! ಏಸು ದೇವನೇ ಸತ್ಯಸಾಯಿ ಬಾಬಾ ರೂಪದಲ್ಲಿ ಬಂದಿರುವನೆಂಬ ಸತ್ಯ, ನನ್ನಲ್ಲಿ ದಿನ ಕಳೆದ ಹಾಗೆ ದೃಢವಾಗುತ್ತಿದೆ".

ಜಾನ್ ಷೂಲರ್ ಬರೆಯುತ್ತಾಳೆ: "೪೧ ವರ್ಷಗಳು ಜೀವನದ ಎಡರುತೊಡರುಗಳೊಂದಿಗೆ ಹೋರಾಡಿದ ನನಗೆ, ಪ್ರೇಮಸ್ವರೂಪನಾದ ದೇವರೇ ಸಿಕ್ಕಾಗ, ಎಂಥ ಆನಂದವಾಯಿತೆಂಬುದನ್ನು ನೀವೇ ಊಹಿಸಿಕೊಳ್ಳಿ. ತಂದೆ ತಾಯಂದಿರು, ಮಕ್ಕಳು, ಮಿತ್ರರು, ಪತಿ, ಎಲ್ಲರ ಪ್ರೇಮ ವಾತ್ಸಲ್ಯಗಳೂ ಕಲುಷಿತ! ಬಾಬಾ ಅವರದು ಪರಿಶುದ್ಧ; ಪರಿಪೂರ್ಣ. ಅವರ ದರ್ಶನದಿಂದ ನನ್ನ ಅಂತರಂಗದ ಮರಳುಗಾಡು ನಂದನೋದ್ಯಾನ ವಾಯಿತು. ಕೊರಡು ಕೊನರಿತು; ಪಾಷಾಣ ಪರಿಮಳ ಪೂರಿತ ಪುಷ್ಪವಾಯಿತು.

"೧೯೭೦ ಡಿಸೆಂಬರ್ ೯ನೆ ತಾ| ನಾನೂ ಇಂದ್ರಾದೇವಿಯೂ ಅನ್ನಲೀಸಾ ಎಂಬಾಕೆಯು ೨, ಗೋವಾದಲ್ಲಿನ ಫ್ರಾನ್ಸಿಸ್ ಕ್ಸೇವಿಯರ್ ಸಂತರ ಸಮಾಧಿಯ ಮುಂದೆ

ಮಂಡಿಯೂರಿ ಪ್ರಾರ್ಥನೆ ಸಲ್ಲಿಸಿದೆವು. ಆಗ ನಾನು, "ಏಸು ದೇವನೆ! ನೀನೇ ನನ್ನನ್ನು ಇದುವರೆಗೂ ನಡೆಯಿಸಿಕೊಂಡು ಬಂದೆ. ಈಗ ನನ್ನ ಹೃದಯ ಸತ್ಯಸಾಯಿಬಾಬಾ ಅಂಕಿತವಾಗಿದೆ! ಪ್ರಭುಗಳಿಬ್ಬರಿರಬಾರದು ಎಂದು ನೀನು ಎಚ್ಚರಿಸಿರುವೆ. ಬಾಬಾ ಕೂಡ ಅದನ್ನೇ ಹೇಳುತ್ತಿದ್ದಾರೆ. ಅವರೇ ನನ್ನನ್ನು ಕೈ ಹಿಡಿದು ನಡೆಸಬೇಕು ಎಂದು ಮನಸ್ಸು ಹೇಳುತ್ತಿದೆ. ನನ್ನನ್ನು ತಕ್ಕ ರೀತಿಯಲ್ಲುಳಿಸು ಎಂದು ಅಂಗಲಾಚಿದೆ.

"ಆಗ ನನಗೆ ನೆನಪಾಯಿತು. ವಿದೇಶೀಯರ ಗುಂಪೊಂದನ್ನು ಸಂಬೋಧಿಸಿ, ಬಾಬಾ ಅವರು ಮಾತನಾಡುತ್ತಿದ್ದರು. ಇಂಗ್ಲಿಷಿನಲ್ಲಿ ಸೊಗಸಾಗಿ ಮಾತನಾಡಬಲ್ಲರಾದರೂ, ಆ ದಿನ ದುಭಾಷಿ ಒಬ್ಬರಿದ್ದರು. ಮಾತಿನ ಮಧ್ಯೆ, ಆತ, "ನಿಮ್ಮ ಏಸು" - ಎಂಬ ಪದವನ್ನುಪಯೋಗಿಸಿದ. ತಕ್ಷಣವೇ ಬಾಬಾ, "ಅವರ್ ಜೀಸಸ್" (ನಮ್ಮ ಏಸು) - ಎಂದು ತಿದ್ದಿದರು. ಬಾಬಾ ಏಸು ಇಬ್ಬರೂ ಒಬ್ಬರೇ! ಏಸುವಿನ ಉಪದೇಶ ಸಾರವನ್ನೇ ಬಾಬಾ ಬೋಧಿಸುತ್ತಿರುವುದು. ಆ ದಿನ ಏಸು ದೇವನ ವಿಗ್ರಹದ ಮುಂದೆ, ನಾನು ಮನಶ್ಶಾಂತಿ ಪಡೆದ ಪ್ರೇಮಮಯಳಾಗಿ, ಲೋಕವನ್ನೆ ಪ್ರೇಮಿಸುತ್ತ ನಾನು ಹೊರ ಬಂದೆ".

"ಪವಾಡ ಪುರುಷ" - ಎಂಬ ತಮ್ಮ ಗ್ರಂಥದಲ್ಲಿ ಮರ್ಫೆಟ್ ಬರೆಯುತ್ತಾರೆ: "ಪವಾಡಗಳ ರೀತಿ ನೀತಿಗಳಲ್ಲಿ ಏಸುವಿಗೂ ಬಾಬಾಗೂ ತುಂಬಾ ಸಾಮ್ಯವಿದೆ. ಉಪದೇಶದಲ್ಲೂ ಅಷ್ಟೆ. ಇಬ್ಬರೂ ಅವಾಂಗ್ ಮನೋಗೋಚರರು. ಪಂಚಭೂತಗಳ ಮೇಲೂ ಬಾಬಾ ಅವರಿಗೆ ಪ್ರಭುತ್ವವಿದೆ. ನಾವು ಮಾಡಿದ, ಮಾಡುವ, ಮಾಡಬಯಸುವುದನ್ನೆಲ್ಲ, ಆಡಿದ, ಆಡುವ, ಆಡಬಯಸುವುದನ್ನೆಲ್ಲ ಅವರು ಬಲ್ಲರು! (ನಿಮ್ಮ ತರಂಗದಳತೆಗೆ ತಿರುಗಿಸಿದರೆ, ನಿಮ್ಮ ವಿಷಯವನ್ನೆಲ್ಲ ತಿಳಿಯುವ ರೇಡಿಯೊ ನಾನು, ಎನ್ನುತ್ತಾರೆ ಬಾಬಾ). ನಾವು ಎಲ್ಲಿದ್ದರೂ ಆಪತ್ಕಾಲದಲ್ಲಿ ನಮ್ಮನ್ನು ರಕ್ಷಿಸಬಲ್ಲರು. ಇವೆಲ್ಲಕ್ಕಿಂತ ಮುಖ್ಯವಾಗಿ ನಾವು ಗಮನಿಸಿ ಆದರಿಸಿ ಆಸ್ವಾದಿಸಬೇಕಾದದ್ದು, ಅವರ ನಿಸ್ವಾರ್ಥ ಪ್ರೇಮ! ಏಸುಕ್ರಿಸ್ತನಂತೆಯೇ ಬಾಬಾ ಅವರೂ ದೈವಿಕ ಶಕ್ತಿ ಎಂದು ಇದರಿಂದಲೇ ನಾವು ತಿಳಿಯಬಹುದು".

ಬೈಬಲ್‌ನಲ್ಲಿರುವ, "ದೈವಿಕ ಸಂತ ಜಾನ್‌ರವರ ಒಳದರ್ಶನ" - ಎಂಬ ಅಧ್ಯಾಯವನ್ನು, ಏಳು ವಿದೇಶೀಯ ಭಕ್ತರು ಓದಿ ಮನನ ಮಾಡುತ್ತಿದ್ದ ಸನ್ನಿವೇಶವೊಂದು ನನಗೆ ನೆನಪಾಗುತ್ತಿದೆ. ಎಡ್ಗರ್ ಕೇಸಿ ಎಂಬ ಪ್ರಖ್ಯಾತ ವ್ಯಕ್ತಿ, ತನ್ನ ನಿದ್ರಾವಸ್ಥೆಯಲ್ಲಿ ಕಂಡು ಹೇಳಿದ ಏಸುವಿನ ಪುರಾತನ ಚರಿತ್ರೆಯನ್ನೂ, ಅವರು ತಮ್ಮ ವ್ಯಾಸಂಗಕ್ಕೆ ಅಳವಡಿಸಿಕೊಂಡರು. ಸಂತ ಜಾನ್‌ರವರ ಅನುಭೂತಿಯಲ್ಲಿ, ನವೀನ ಜರೂಸಲೇಂ (ಶಾಂತಿಧಾಮ) ಕುರಿತು, "ಅಲ್ಲಿ ಪ್ರತ್ಯೇಕ ಗುಡಿಯೆಂಬುದಿಲ್ಲ. ಸರ್ವಶಕ್ತನಾದ ಪರಮಾತ್ಮನೇ ಅಲ್ಲಿಯ ಗುಡಿ. ಅಲ್ಲಿಗೆ ಎಲ್ಲ ರಾಷ್ಟ್ರಗಳೂ ತಮ್ಮ ಸಿರಿಸಂಪತ್ತುಗಳನ್ನು ಅರ್ಪಿಸುತ್ತಾರೆ.

ಕೊಳೆ ಕಲ್ಮಷಗಳಿಗೆ ಅಲ್ಲಿ ಪ್ರವೇಶವಿಲ್ಲ. ದಾಹಪೀಡಿತರೆಲ್ಲ ಬಂದು ಅಮೃತಪಾನ ಮಾಡುವ ಕ್ಷೇತ್ರ ಅದು" - ಎಂದು ಬರೆದಿದೆ. ಪ್ರಶಾಂತಿ ನಿಲಯಕ್ಕೆ ಈ ವಿವರಣೆ ಎಷ್ಟು ಚೆನ್ನಾಗಿ ಅನ್ವಯವಾಗುತ್ತದೆ ಎಂದು ಅವರು ಅಚ್ಚರಿಗೊಂಡರು. ಏಸು ಪ್ರಭು ಮತ್ತೆ ಲೋಕಕ್ಕೆ ಬರುವರು. ಬಿಳಿ ಕುದುರೆಯನ್ನೇರಿ (ಕಲ್ಕಿ?). ಕೆಂಪು ಗೌನು ಧರಿಸಿ ಬರುವರು. ರಾಜಾಧಿರಾಜ, ಪ್ರಭುಗಳ ಪ್ರಭು, ಎಂದು ಆ ಗೌನಲ್ಲಿ ಸುವರ್ಣರೇಖೆಗಳಿಂದ ಬರೆದಿರುತ್ತದೆ (ಸಾಯಿರಾಮ ಎಂದು ೧೦೮ ಸಲ ಚಿನ್ನದ ಜರಿಯಲ್ಲಿ ನೆಯ್ದಿರುವ ಉತ್ತರೀಯವನ್ನು ಬಾಬಾ ಧರಿಸುತ್ತಾರೆ!). ಅವರ ಹೆಸರು "ಸತ್ಯ" ಎಂದು ಸಂತ ಜಾನ್ ಪ್ರಕಟಿಸಿರುವರು! ಆ ಏಳು ಜನವೂ ಅತ್ಯಾಶ್ಚರ್ಯದಿಂದ ಆ ಅಧ್ಯಾಯವನ್ನು ಮತ್ತೆ ಮತ್ತೆ ವ್ಯಾಸಂಗ ಮಾಡಿ ವಿಸ್ಮಯಗೊಂಡರು.

ಒಂದು ದಿನ, ಕೆಲವರು ಅಮೆರಿಕಾದವರು ತಮ್ಮ ಪಾದಸನ್ನಿಧಿಯಲ್ಲಿ ಕುಳಿತಿರುವಾಗ, ಬಾಬಾ ಅವರಿಗೆ ಹೇಳಿದರು: "ತಾಯಿಯ ವಾತ್ಸಲ್ಯದ ರುಚಿ ನೀವು ಸವಿದಿಲ್ಲ; ಅದಕ್ಕಾಗಿಯೇ ನೀವು ನನ್ನಲ್ಲಿಗೆ ಬಂದಿರುವುದು" - ಎಂದರು. ಅವರಲ್ಲೊಬ್ಬರು, "ನಿಮ್ಮವನು ನಾನು, ನಿಮ್ಮಲ್ಲಿ ನಾನು, ನನ್ನ ಮನೆ ನೀವೇ, ಸಾಯಿ ಮಾತಾ!" - ಎಂದು ಆಗ ಹಾಡಿದರು. ಅಹುದು, ಬದುಕಿನ ಅರ್ಥವೇನು? ಬಾಳಿನ ಗುಟ್ಟೇನು? ಹೃದಯ ವಿಕಾಸ ಹೇಗೆ? - ಎಂದು ತಿಳಿಯಲು ಬಯಸುವವರೆಲ್ಲ ಮಕ್ಕಳೇ! ಅಂಥವರನ್ನು ಪ್ರೀತಿಯಿಂದೆತ್ತಿ, ಅವರ ತೊದಲನ್ನು ತಿದ್ದಿ, ನಡಿಗೆಯನ್ನು ನೇರ್ಪಡಿಸುವವಳು ತಾಯಿಯೇ! ಶತಾವಧಾನಿ ವೇಲೂರಿ ಶಿವರಾಮ ಶಾಸ್ತ್ರಿಗಳು ಹೇಳಿದಂತೆ, "ಸಾವಿರ ತಾಯಂದಿರ ವಾತ್ಸಲ್ಯಕ್ಕೂ ಮಿಗಿಲು, ಸಾಯಿ ಮಾತೆಯ ಪ್ರೇಮ". "ಬಿಡಿ, ಬರಲಿ ಅವರು ನನ್ನ ಬಳಿ! ಮಕ್ಕಳೆಲ್ಲ ನನ್ನ ಪ್ರೀತಿಯನ್ನು ಹಂಚಿಕೊಳ್ಳಲಿ" - ಎಂದು ಏಸು ದೇವನು ಹೇಳಿದ. ಅವರ ವಯಸ್ಸು ಎಷ್ಟು, ಎಂಬ ಚರ್ಚೆಗೆ ಹೋಗದೆ, ಎಲ್ಲರನ್ನೂ ಬಾಬಾ ತಮ್ಮ ಮಕ್ಕಳಂತೆ ಲಾಲಿಸುತ್ತಾರೆ, ಪಾಲಿಸುತ್ತಾರೆ.

ಮಾನವರ ಪಾಪವನ್ನು ಏಸು ತಾನೇ ವಹಿಸಿದ. ಭಕ್ತರ ದೈಹಿಕ ರೋಗಗಳನ್ನು, ಶಿರ್ಡಿಯಲ್ಲಿ ಮಾಡಿದಂತೆ, ಈಗಲೂ ಬಾಬಾ ತಾವೇ ವಹಿಸಿ, ದಹಿಸಿ, ಅವರನ್ನು ರಕ್ಷಿಸುತ್ತಾರೆ, ಕ್ರಿಸ್‌ಮಸ್ ಹಬ್ಬದ ದಿನ, ಬಾಬಾ, ಬೊಂಬಾಯಿಯಲ್ಲಿ ಮಹಾ ಸಭೆಯೊಂದನ್ನುದ್ದೇಶಿಸಿ "ಅದು ನನ್ನ ಕರ್ತವ್ಯ. ನಾನೇ ಸಂತೋಷದಿಂದ ವಹಿಸಿಕೊಂಡು ನೆರವೇರಿಸುವ ಕರ್ತವ್ಯ. ನನಗೆ ಅದರಿಂದ ನೋವು ಬಾಧೆಗಳಿಲ್ಲ. ನೀವೂ ನೊಂದುಕೊಳ್ಳಬಾರದು ಪ್ರೇಮದಿಂದಲೇ ಅದನ್ನು ನಾನು ಸ್ವೀಕರಿಸುತ್ತೇನೆ, ಪ್ರೇಮದಿಂದ ಭಕ್ತರು ಕೊಡುತ್ತಾರೆ. ಪ್ರೇಮವಿರುವ ಕಡೆ, ನೋವಿರುವುದು ಸಾಧ್ಯವೆ? ತನ್ನನ್ನು ನಂಬಿದವರಿಗಾಗಿ ಏಸು ಪ್ರಾಣವನ್ನೇ ತೆತ್ತ. ತ್ಯಾಗವೇ ದೈವ, ಪ್ರೇಮವೇ ದೈವ, ಸೇವೆಯೇ ದೈವ, ಎಂದು ಅವನು ಸಾರಿದ" - ಎಂದರು.

"ಈ ಪಾಪಿಗಳ ಸಂಗಡ ನೀವು ಆಹಾರ ಸೇವಿಸಬಹುದೆ?" - ಎಂದು ಕೆಲವ್ರು ಏಸುವನ್ನು ಪ್ರಶ್ನಿಸಿದಾಗ, "ಅವರಿಗಾಗಿಯೇ ನಾನು ಬಂದಿರುವುದು! ಆರೋಗ್ಯವಂತರಿಗೆ ವೈದ್ಯ ಯಾಕೆ?" - ಎಂದು ಏಸು ಉತ್ತರಿಸಿದ. ಬಾಬಾ ಬಂದಿರುವುದು, "ದಾರಿ ತಪ್ಪಿದವರಿಗಾಗಿ, ಕಂಗೆಟ್ಟವರಿಗಾಗಿ, ದಿಕ್ಕಿಲ್ಲದವರಿಗಾಗಿ". "ನನ್ನ ಅನುಗ್ರಹ ಪಡೆಯಲು ನೀವು ಪರಿಶುದ್ಧರಾಗಬೇಕು ಎಂದು ನಾನು ಹೇಳಲಾರೆ! ವೈದ್ಯ ಚಿಕಿತ್ಸೆ ಮಾಡಬೇಕಾದರೆ, ನೀವು ಆರೋಗ್ಯವಂತರಾಗಿರಬೇಕು ಎಂದು ಹೇಳುವವರುಂಟೆ?" - ಎಂದು ಬಾಬಾ ಹೇಳುತ್ತಾರೆ.

ಬಾಬಾರವರ ಆದೇಶವೇನೆಂದರೆ, "ಇಲ್ಲಿ ಪಡೆದ ಆನಂದಾನುಭವವನ್ನು ಜ್ಞಾನೋಪದೇಶವನ್ನು ಪ್ರೇಮ ಸಂದೇಶವನ್ನು, ಎಲ್ಲರಿಗೂ ಹಂಚಿ. ಶಾಂತಿ ಸಂತೋಷಗಳ ಉಗಮಸ್ಥಾನ ಎಲ್ಲಿ ಎಂಬುದನ್ನು ತಿಳಿದೆವು, ಎಂದು ಸುತ್ತ ಹತ್ತೂರುಗಳಿಗೆ ಸಾರಿರಿ. ನ ಕರುಣಾ ದೃಷ್ಟಿಗೆ ಹೊರತಾದವರೊಬ್ಬರೂ ಇಲ್ಲ. ಎಲ್ಲರಿಗೂ ಅದು ದೊರೆಯುವುದು ಎಂದು ಹೇಳಿ" - ಇದೇ ಆಗಿದೆ. "ಕುರಿಮರಿಗಳನ್ನು ಕ್ರೂರಮೃಗಗಳ ಗುಂಪಿನೊಳಕ್ಕೆ ಕಳುಹಿಸುವಂತೆ ನಾನು ನಿಮ್ಮನ್ನು ಕಳುಹಿಸುತ್ತಿದ್ದೇನೆ. ಭಗವನ್ನಾಮವೇ ನಿಮಗೆ ಶ್ರೀರಾಮ ರಕ್ಷೆ! ಹೋಗಿ ಹಾಡಿ ಹಾಡಿಸಿ, ಕೂಡಿ ಕೂಡಿಸಿ, ಜೈ ಭಗವಾನ್ ಎಂದು ನಲಿಯಿರಿ" - ಎಂದ ಏಸು!

ಕೆನಡಾ ರಾಷ್ಟ್ರ ದ ಪ್ರಧಾನ ಮಂತ್ರಿ ತೋರ್ಡೋ ಎಂಬುವರ ತಮ್ಮಂದಿರು ಭಾಷ ಸಹಿತವಾಗಿ ಪ್ರಶಾಂತಿನಿಲಯಕ್ಕೆ ಬಂದಾಗ, ಬಾಬಾ ಅವರಿಗೆ ಶಿಲುಬೆಯ ಮೇಲಿನ ಏಸು ದೇವನ ಪ್ರತಿಮೆಯನ್ನು ಸೃಷ್ಟಿಸಿಕೊಟ್ಟರು. ಆಫ್ರಿಕಾದಲ್ಲಿದ್ದಾಗ, ಗೊರೊಂಗೊರೊ ವನ್ಯ ಪ್ರಾ ಕ್ಷೇತ್ರಕ್ಕೆ ವಿಮಾನಯಾತ್ರೆ ಮಾಡಿದರು. ಆಗ, ಆ ಚಾಲಕನಿಗೆ ಅಂಥದ್ದೇ ಒಂದು ಶಿಲುಬೆ ಯನ್ನು ಕೊಟ್ಟರು. ಆದರೆ ಅದನ್ನು ತೆಗೆದುಕೊಂಡಾಗ, ಆ ಬ್ರಿಟಿಷಿನವನ ಮುಖದಲ್ಲಿ ಸಂತೃಪ್ತಿಯ ಹೊಳಪು ಕಾಣಿಸಲಿಲ್ಲ! ತಕ್ಷಣ ಬಾಬಾ, "ಏಕೆ? ನನ್ನ ಚಿತ್ರಬೇಕಾಗಿತ್ತೇನು?" ಎಂದು ಕೇಳಿ ಅದನ್ನೂ ಸೃಷ್ಟಿಸಿಕೊಟ್ಟರು! ಅವರು ಯಾರೊಬ್ಬರ ನಂಬಿಕೆಯನ್ನು ಸಡಿಲಗೊಳಿಸುವುದಿಲ್ಲ; ದೂಷಿಸುವುದಿಲ್ಲ; ಅವರು ನಿಂತ ಕಡೆಯಿಂದಲೇ ಅವರನ್ನು ಮುಂದೆ ನಡೆಯಿಸುತ್ತಾರೆ. ಈಗಿನ ತಮ್ಮ ನಾಮರೂಪಗಳನ್ನೇ ಆರಾಧಿಸಬೇಕೆಂಬ ಒತ್ತಾಯವಿಲ್ಲ. ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ; ಪರರ ತೆಗಳಬೇಡ, ತನ್ನ ಬಣ್ಣಿಸಬೇಡ ಕಲ್ಲಾಗಿರಬೇಡ ಪರರ ಸಂಕಟದೆದುರು; ಬೆಲ್ಲವಾಗಿರಬೇಕು ಎಲ್ಲರೊಂದಿಗೂ; ಕೊಳೆ ಕಲ್ಮಷ ಒಳಗೆ ಸೇರಿಸಬೇಡು; ಇದೇ ಧರ್ಮ! ಇದೇ ಭಗವತ್ ಧ್ಯಾನ, ಪೂಜೆ, ಎನ್ನುತ್ತಾರೆ ಬಾಬಾ.

ನ್ಯೂಯಾರ್ಕ್ ಮಹಾನಗರದಿಂದ ಪುಟ್ಟಪರ್ತಿ ಗ್ರಾಮಕ್ಕೆ ಒಮ್ಮೆ (೩೦ ವರ್ಷಗಳಿಂದ ಶ್ರೀ ರಾಮಕೃಷ್ಣ ಮಠದ ಸನ್ಯಾಸಿಯಾಗಿದ್ದ) ಜಾನ್ ಮಾಫಿಟ್ ಎಂಬವರು ಬಂದರು. ಬಾಬಾ ಅವರನ್ನು ಕರೆದು ಕೂರಿಸಿ ಮಾತನಾಡಿದರು. ಅವರು ನನಗೆ ಬೆಂಗಳೂರಿಂದ ಕಾಗದ ಬರೆದು "ಅವರ ಮಾತನ್ನೆಂದಿಗೂ ಮರೆಯಲಾರೆ! ಎಷ್ಟು ಆಳ, ಎಂಥಾ ಸರಳ, ಏನು ಮಧುರ

ಶ್ರೀರಾಮಕೃಷ್ಣ ಪರಮಹಂಸರ ಸನ್ನಿಧಿಯಲ್ಲಿ ಕುಳಿತವರಿಗೆ ಎಂಥ ಅಮೃತದೌತಣ ದೊರೆಯುತ್ತಿತ್ತು ಎಂಬುದನ್ನು ನಾನು ಅಂದು ಅರಿತೆ. ಬಾಬಾರವರ ಪ್ರೇಮ, ಜ್ಞಾನ, ಅನುಕಂಪೆಗಳನ್ನು ನಾನು ಆನಂದದಿಂದ ಆಸ್ವಾದಿಸಿದೆ! ಮತ್ತೊಮ್ಮೆ ನಿಮ್ಮ ಸನ್ನಿಧಿಗೆ ಬರುವಂತೆ ನನ್ನನ್ನನುಗ್ರಹಿಸಿ ಎಂದು ನಾನು ಬೇಡಿದಾಗ, ಬಾಬಾ ಚಕಿತರಾಗಿ, "ಏಕೆ? ಇಲ್ಲಿಗೇಕೆ? ಬೇಕಿಲ್ಲ. ನಾನು ನಿಮ್ಮೊಂದಿಗೆ ಯಾವಾಗಲೂ ಉಂಟು. ನಿಮ್ಮ ಹೃದಯವಾಸಿ ನಾನು" - ಎಂದರು.

ತಮ್ಮ ಪತ್ರವನ್ನು ಅವರು ಹೀಗೆ ಮುಗಿಸುತ್ತಾರೆ, "ಕ್ರೈಸ್ತ ಮತದ ಚೌಕಟ್ಟಿನಾಚೆಯೂ, ಏಸುದೇವ ಉಂಟು ಎಂಬುದನ್ನು ನಾವು ಇಲ್ಲಿ ಪ್ರತ್ಯಕ್ಷ ತಿಳಿಯಬಹುದು. ಆಗ ಶ್ರೀ ರಾಮಕೃಷ್ಣ, ಈಗ ಬಾಬಾ. ನನ್ನ ಬುದ್ಧಿ ಸಂದೇಹ ರಹಿತವಾಯಿತು. ನನ್ನ ಮನಸ್ಸಿಗೆ ಶಾಂತಿ ಲಭಿಸಿತು. ಬಾಬಾರವರ ಇಚ್ಛೆಯಂತೆ ನಡೆಯುವುದೇ ನನ್ನ ಕರ್ತವ್ಯ ಇನ್ನು".

ತಮ್ಮಲ್ಲಿಗೆ ಬರುವವರು ಯಾವ ಆಧ್ಯಾತ್ಮಿಕ ಮಾರ್ಗ ಹಿಡಿದು ಮುಂದುವರಿದವರು, ಅವರು ಸಾಧಿಸಿದ ಪ್ರಗತಿ ಏನು, ಅವರನ್ನು ತಡೆಯುವ ಅಡ್ಡಿ ಆತಂಕಗಳೇನು, ಅವುಗಳ ಪರಿಹಾರವೇನೆಂಬುದನ್ನೆಲ್ಲ ಅವರು ಬಲ್ಲರು. "ಸ್ವಾಮೀ! ನೀವೇ ನನ್ನ ಸರ್ವಸ್ವ!" - ಎಂದು ಅಮಿತೋತ್ಸಾಹದಿಂದ ಕೂಗುತ್ತಿದ್ದ ಒಬ್ಬ ಅಮೆರಿಕನ್ ಸಾಧುವಿಗೆ ಬಾಬಾ, "ನಿನ್ನ ಗುರುಗಳು ಬೆಂಗಳೂರಿಗೆ ಬಂದಿದ್ದಾರೆ; ಹೋಗು" - ಎಂದರು. "ನನಗೆ ನೀವೇ ಸದ್ಗುರು, ನೀವೇ ಜಗದ್ಗುರು, ನೀವೇ ದೇವರು" - ಎಂದು ಅವನೆಂದಾಗ, "ನನ್ನ ಮಾತು ಕೇಳು; ಬೆಂಗಳೂರಿಗೆ ಹೋಗು! ಗುರು ದ್ರೋಹ ಮಾಡಬಾರದು" - ಎಂದರು ಬಾಬಾ. ಆಗ ಹೊಳೆಯಿತು ಆ ಸಾಧುವಿಗೆ; ತಾನು ಮಹೇಶಯೋಗಿಯ ಹತ್ತಿರವಿದ್ದು, ಉಪದೇಶ ಸ್ವೀಕರಿಸುವೆನು, ಎಂಬುದು.

ಅಮೆರಿಕನ್ ಭಕ್ತರಿಗೆ ಬಾಬಾ ಅನೇಕ ರೂಪಗಳಲ್ಲಿ ದರ್ಶನವಿತ್ತಿದ್ದಾರೆ. ಅವರು ಕಂಬನಿ ಸುರಿಸುತ್ತ, "ಸಾಯಿಬಾಬಾ, ಸಾಯಿಬಾಬಾ, ಎಂಥ ಕರುಣೆ! ಎಂಥ ಪ್ರೇಮ! ತಂದೆ, ತಾಯಿ, ಅಕ್ಕ, ಅಣ್ಣ, ಎಲ್ಲ ನೀವೇ ಸಾಯಿ ಬಾಬಾ" ಎಂದು ಹಾಡುವುದನ್ನು ಕೇಳಿದರೆ, ಮನ ಕರಗುವುದು, ಕರುಳರಳುವುದು. ಪಾಪ, ದೂರದ ಊರು; ಬೇಸಿಗೆ ಹವಾ, ಖಾರದ ಊಟ, ತರು ತಲವಾಸ, ಭಾಷೆಗಳ ತೊಡಕು, ಎಲ್ಲವನ್ನೂ ಎದುರಿಸಿ, ಬಾಬಾರವರನ್ನು ಒಂದು ಕಣ್ಣು ನೋಡಿ, ಒಂದು ಮಾತು ಆಡಿಸಿ ಕೃತಾರ್ಥರಾಗಲು, ಅಪಾರ ಹಣ ವೆಚ್ಚ ಮಾಡುವ ಆಧ್ಯಾತ್ಮಿಕ ಪರಾಕ್ರಮ ಅವರಲ್ಲಿದೆ. "ನಮ್ಮನ್ನು ಇಷ್ಟು ಅಕ್ಕರೆಯಿಂದ ಆದರಿಸುವ ನಿಮ್ಮ ಪ್ರೀತಿಯನ್ನು ಪಡೆಯಲು ನಾವು ಎಷ್ಟು ಪುಣ್ಯ ಮಾಡಿದ್ದೆವೋ!" ಎನ್ನುತ್ತಾಳೆ ಶ್ರೀಮತಿ ಪೂಲ್ಸ್! ಎಡೀಫ್ ಲೂರ್ ಎಂಬ ಯಾತ್ರಿಕ, "ನಾನು ದಿನವಿಡೀ ಪ್ರಾರ್ಥಿಸುತ್ತಿದ್ದೇನೆ: ಎನ್ನ ಮನ ನಿಮ್ಮ ಚರಣದಲ್ಲಿ ನೆಲೆಸಲೆಂದು, ರಾಮಸೇತುವಾಗಿರುವ ಹನುಮನಾಗಲೆಂದು."

ಜಾರ್ಜಿಯಾನಾ ಎಂಬುವರ ಬೇಡಿಕೆ ಬೇರೆ ರೀತಿಯದು: "ನಾನೊಂದು ನೀರ್ಗುಳ್ಳೆ, ನನ್ನನ್ನು ಕಡಲಾಗಿಸು". ಮೆಲ್ವಿನ್ ಮೊರೆಯಿಡುತ್ತಾನೆ: "ಮೇರೆಯಿಲ್ಲದ ಚೈತನ್ಯ ನೀನು: ತಾನೇ ತಾನಾಗಿರುವ, ಮಾಯೆಗೂ ಅತೀತವಾದ ತಾವು ನಿನ್ನದು, ಅದೇ ನನ್ನ ತವರು! ತಾಯೇ! ತಬ್ಬಲಿ ಮಾಡದೆ ತಬ್ಬಿಕೊ ಕೂಸನ್ನು".

ತನ್ನ ಹೆಸರನ್ನೇ ಅಳಿಸಿ, ಹೊಸ ಹಸುರನ್ನು ಸಂಪಾದಿಸಿರುವ "ರಾಮನ್" ಎಂಬ ಒಬ್ಬ ಯೋಗಸಾಧಕ ಚಿತ್ತ ಶುದ್ಧಿಗಾಗಿ, ಅಹಂಕಾರ ನಿರ್ಮೂಲನಕ್ಕಾಗಿ, ಒಳ ಬೆಳಕನ್ನು ಗುರ್ತಿಸಿ, ಅದನ್ನೇ ಕೈ ದೀವಿಗೆಯಾಗಿ ಹಿಡಿದು ಮುನ್ನಡೆಯಲು, ನಾವು ಬಾಬಾ ಸಾನ್ನಿಧ್ಯಕ್ಕೆ ಬಂದಿರುವೆವು. ನಮ್ಮನ್ನು ಅವರು ಹಲವು ಬಗೆಯಲ್ಲಿ ಪುಟವಿರಿಸಿ ಅನುಗ್ರಹಿಸುತ್ತಾರೆ. ಇತರರಿಗೆ ಅವು ಅಗೋಚರ, ಅಗಮ್ಯ. ಉದಾಹರಣೆಗೆ, ಅವರು ನಮ್ಮನ್ನು ತಿಂಗಳು ಗಟ್ಟಲೆ ಅಲಕ್ಷ ಮಾಡುತ್ತಾರೆ! ನಾವು ಕುಳಿತರೂ ನಿಂತರೂ ಅಂಗಲಾಚಿದರೂ ಮಾತನಾಡಿದರೂ, ನಮಗೆ ಒಂದು ಕಡೆಗಣ್ಣ ನೋಟ ಕೂಡ ಸಿಗದು. ನಮ್ಮ ಎಡಕ್ಕೆ ಕುಳಿತವನನ್ನು ಮಾತನಾಡಿಸುತ್ತಾರೆ, ಬಲಕ್ಕೆ ಕುಳಿತವನ ಭುಜ ತಟ್ಟುತ್ತಾರೆ. ನಾವು ಮಾತ್ರ, ಅವರ ದೃಷ್ಟಿಗೆ ಬೀಳದ, ಬಡಪಾಯಿಗಳು. ಇದರಿಂದ, ನಮ್ಮ ಹಮ್ಮು ಕರಗಿ ಸೊರಗಿ, ಸಾಸುವೆಯಷ್ಟು ಸಣ್ಣದಾಗುತ್ತದೆ. ಹಾಗಾದಾಗ, ಇದ್ದಕ್ಕಿದ್ದ ಹಾಗೆ ಎದುರಿಗೆ ಬಂದು, ಮಂದಸ್ಮಿತವೊಂದನ್ನನುಗ್ರಹಿಸುತ್ತಾರೆ... ಸಾಕು. ಆದರಿಂದಲೇ ನಮ್ಮ ಅಂತರಂಗ ವಿಕಸಿಸುತ್ತದೆ, ಪ್ರಕಾಶಿಸುತ್ತದೆ, ಆನಂದದಿಂದ ತುಂಬಿ ತುಳುಕುತ್ತದೆ.

ಅಲ್ಲಿಂದಾಚೆ ಅನೇಕ ವಾರಗಳು ಅವರು ಅಲಕ್ಷ ಮಾಡಿದರೂ, ನಾವು ಕೃಶರಾಗುವುದಿಲ್ಲ. ಕಿರುನಗೆಯ ಕಣ್ಣೋಟ ಬಿಡಿಸಲಾರದ ಬಂಧವನ್ನೇರ್ಪಡಿಸುತ್ತದೆ. ನಮ್ಮನ್ನು ಗಗನಕ್ಕೇರಿಸುತ್ತದೆ; ವರ ಕಾಯರನ್ನಾಗಿ ಮಾಡುತ್ತದೆ. ನಮ್ಮನ್ನು ಅವರು ಎಂದೆಂದಿಗೂ ಕೈ ಬಿಡುವುದಿಲ್ಲವೆಂಬ ಧೈರ್ಯ ಕೊಡುತ್ತದೆ. "ಚಿಂತಿಸಬೇಡಿ! ನೀವು ನನ್ನಿಂದಗಲಲಿಲ್ಲ, ಎಂದೂ ಎಲ್ಲೂ! ನಿಮ್ಮ ಆಶೆ ನಿರಾಶೆಗಳು, ಗೊಣಗು ಗೋಳುಗಳು ಯೋಚನೆ ಯೋಜನೆಗಳು ಎಲ್ಲವನ್ನೂ ನಾನು ಬಲ್ಲೆ. ನಿಮ್ಮ ತಪ್ಪುಗಳನ್ನು ನಾನಾಗಲೇ ಕ್ಷಮಿಸಿದ್ದೇನೆ" - ಎಂಬ ಭಾವಗಳೆಲ್ಲ ಆ ನೋಟದಲ್ಲಡಗಿವೆ". ಆದ್ದರಿಂದ ರಾಮನ್ ಹೇಳುತ್ತಾರೆ: "ಆಶಾಪಾಶಗಳೆಲ್ಲ ಅಳಿಸಿಹೋಗುವ ಆಧ್ಯಾತ್ಮಿಕ, ಸ್ಥಿತಿ ಪ್ರಾಪ್ತವಾದರೆ, ನಾನು ಒಂದೇ ಒಂದು ಆಶೆಯನ್ನು ಮಾತ್ರ ಉಪೇಕ್ಷಿಸಲಾರೆ. ಕಟ್ಟಕಡೆಯವರೆಗೂ, ಅದನ್ನು ತೊರೆಯಲಾರೆ. ಅಂಥ ಆಶೆ ಏನು ಅಂತೀರೋ? ಆ ಮಂದಸ್ಮಿತ ಮಿಶ್ರ ಕಟಾಕ್ಷವನ್ನು ಸ್ವೀಕರಿಸುವ ಆಶೆ!"

ವಿದೇಶೀಯರಿಗೆ ಭಗವಾನರ ಸಾಮೀಪ್ಯ ಸಿಗುವ ಪುಣ್ಯ ಮುಹೂರ್ತವೆಂದರೆ, ಅವರಾಗಿಯೇ ಕರೆದು ಕೂರಿಸಿಕೊಂಡಾಗ, ಎನ್ನುತ್ತಾರೆ ಡಾ|ಜಾನ್ ಹಿಸ್ಲಪ್. "ಅವರು ನಮ್ಮನ್ನು ತಮ್ಮ ಸುತ್ತ ನೆಲದ ಮೇಲೆಯೇ ಕುಳ್ಳಿರುವಂತೆ ಹೇಳುತ್ತಾರೆ. ತಮ್ಮ ತಮ್ಮ

ಆಧ್ಯಾತ್ಮಿಕ ಸಂದೇಹಗಳನ್ನೂ, ಸಮಸ್ಯೆಗಳನ್ನೂ ಸಂಕೋಚಭಿಲ್ಲದೆ ಅವರ ಮುಂದಿಡಲು ಪ್ರೋತ್ಸಾಹಿಸುತ್ತಾರೆ. ನಮ್ಮ ಮನೋಬುದ್ಧಿಗಳು, ಕಣ್ಣು ಕಿವಿಗಳು, ಎಲ್ಲವೂ ಅವರನ್ನೇ ಎವೆಯಿಕ್ಕದೆ ಗಮನಿಸುವುವು. ನಾನು ಪುರುಷನಲ್ಲ, ಸ್ತ್ರೀ ಅಲ್ಲ, ಯುವಕನಲ್ಲ, ವೃದ್ಧನಲ್ಲ, ಇವೆಲ್ಲವೂ ನಾನೇ" - ಎಂದು ಅವರು ಷೂಲ್ಮನ್‌ಗೆ ಹೇಳಿದ್ದು ನೆನಪಿಗೆ ಬರುತ್ತದೆ. ಮಗುವಿನ ಮಂದಹಾಸ, ತಾಯಿಯ ಮಾಧುರ್ಯ, ತಂದೆಯ ಕಾಠಿನ್ಯ, ಎಲ್ಲವೂ ಉಂಟು ಅವರಲ್ಲಿ. ತೀರ ಹತ್ತಿರದ ಗೆಳೆಯನಂತೆ ಅವರು ನಮ್ಮನ್ನು ನಗಿಸಿ ನಗುವರು. ಕುಳಿತಾಗ, ಏಳುವಾಗ, ನಡೆವಾಗ, ನಿಲ್ಲುವಾಗ, ಅವರ ಭಂಗಿ, ಅವರ ಬಳುಕು, ಅವರು ನಮಗೆ ನೀಡುವ ಸಲಿಗೆ, ಎಲ್ಲವೂ ಸುಮನೋಹರ. ಆ ಕೈಗಳು ಎಷ್ಟು ಅರ್ಥಪೂರ್ಣವಾಗಿ ಅತ್ತಿತ್ತ ನಮ್ಮನ್ನು ಆಕರ್ಷಿಸುತ್ತವೆ! ಅವರ ಶರೀರದಿಂದ ಹೊಮ್ಮುವ ಪರಿಮಳ.... ಜಾಜಿ, ಮಲ್ಲಿಗೆ, ಎನ್ನುತ್ತಾಳೆ ನನ್ನ ಸತಿ ಮಾಗ್ದಲೀನ್! ಒಂದು ಸಲ ನಾನು ಹಾನೊಲು ಎಂಬ ನಗರದಲ್ಲಿದ್ದಾಗ, ಇದೇ ಪರಿಮಳ ನನ್ನನ್ನೆಬ್ಬಿಸಿ, ಕಣ್ದೆರೆಸಿ, ಹಲವು ನಿಮಿಷಗಳವರೆಗೆ ಪರಮಾಹ್ಲಾದವನ್ನು ಕೊಟ್ಟಿತು. ಬೊಂಬಾಯಿ ಧರ್ಮಕ್ಷೇತ್ರದಲ್ಲೊಂದು ಬಾರಿ, ಗೋಕಾಕ್, ಕಸ್ತೂರಿ, ನಾನು, ಮೂವರೊಂದಿಗೆ ಭಗವಾನರು ಯಾವುದೋ ವಿಷಯ ಮನದಟ್ಟಾಗುವುದಕ್ಕಾಗಿ ಉದಾಹರಣ ಪೂರ್ವಕ ವಿವರಿಸುತ್ತಿದ್ದಾಗ, ಅವರ ಶಿರಸ್ಸಿನ ಸುತ್ತ ಪ್ರಜ್ವಲಿಸುವ ಪ್ರಭಾವಳಿಯೊಂದನ್ನು ನಾವೆಲ್ಲ ಹಲವು ನಿಮಿಷಗಳ ಕಾಲ ಕಂಡೆವು. "ನೀವು ನಿಜಕ್ಕೂ ಪುಣ್ಯವಂತರ" ಎಂದರು ಬಾಬಾ ಅವರು.

ಹಿಸ್ಲಪ್ ಅವರ ಅನುಭವಗಳನ್ನು ಅವರಿಂದಲೇ ಇನ್ನೂ ತಿಳಿದುಕೊಳ್ಳೋಣ. "ಅವರ ಸನ್ನಿಧಿಯಲ್ಲಿ ಇಂದ್ರಿಯಾತೀತವಾದ ಸೌಂದರ್ಯಾನುಭೂತಿ ಲಭಿಸುವುದು. ಕರುಣೆ ಪ್ರೇಮ ತಿಳಿವು ಇವುಗಳ ಪ್ರವಾಹದಲ್ಲಿ ನಾವು ಮುಳುಗಿದಂತೆ ಅನುಭವವಾಗುತ್ತದೆ. ಅದರ ಉಗಮ ಅವರಿಂದಲೇ ಎಂಬುದನ್ನೂ ಅರಿತುಕೊಳ್ಳುತ್ತೇವೆ. ಮನಸ್ಸಿನಲ್ಲಿ ಎಂದೂ ಕಾಣದ ಶಾಂತಿ ನೆಲೆಗೊಳ್ಳುತ್ತದೆ. ಹೃದಯವನ್ನು ಆನಂದಪುಳಕಿತ ಮಾಡುತ್ತದೆ. ಈ ದೃಶ್ಯ ಪ್ರಪಂಚ ಎಲ್ಲಿಗೋ ಎಂದಿಗೋ ಪಲಾಯನ ಮಾಡುತ್ತದೆ. ಅವರೂ ನಾವು ಅಷ್ಟೇ ಆಗ ಸತ್ಯ, ನಿತ್ಯ ಎಂದೆನಿಸುತ್ತದೆ. ನಮ್ಮ ಸಂಶಯ ನಿವೃತ್ತಿಗಾಗಿ ಅವರು ಕೊಡುವ ಉಪದೇಶಗಳನ್ನು ಅಂತರಂಗ ಆನಂದದಿಂದ ಅರಗಿಸಿಕೊಳ್ಳುತ್ತದೆ. ಅವೆಲ್ಲ ಸತ್ಯ, ಅವೇ ಸತ್ಯ. ಸತ್ಯದಿಂದಲ್ಲದೆ ಸತ್ಯ ದೊರಕದು, ಎಂಬ ತಿಳುವಳಿಕೆಯಿಂದ ಒಳಗಿನ ತಳಮಳವಳಿಯುವುದು.

ಮಾನವನ ಮನೋ ದೌರ್ಬಲ್ಯವನ್ನು ನಿರ್ಮೂಲ ಮಾಡಲು ಪುರಾತನ ಮೂಲಿಕೆಗಳನ್ನೇ ಭಗವಾನರು ಪ್ರದಾನ ಮಾಡುತ್ತಿರುವರು. ಅವುಗಳ ಕುರಿತು ನಮ್ಮ ಅಜ್ಞಾನ, ಅಸಡ್ಡೆ, ವಿರೋಧ, ವೈರಗಳನ್ನು ತೆಗೆದು ಹಾಕಿ, ಪ್ರೇಮ ಮಾರ್ಗವನ್ನು ಬೋಧಿಸುವರು. "ನನ್ನ ಜೀವನವೇ ನನ್ನ ಸಂದೇಶ" - ಎನ್ನುತ್ತಾರೆ ಅವರು. ನಿಜ! ಅವರ ಕರುಣೆ, ಅವರ

ಸರಳತೆ, ಅವರ ಉತ್ಸಾಹ, ಅವರ ಪ್ರಜ್ಞಾನ, ಅವರ ಪ್ರಶಾಂತಿ, ಅವರ ಪ್ರೇಮ ಇವುಗಳನ್ನು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಕಂಡುಂಡು ತಣಿದವರು ಆ ಗುಣಗಳ್ನ ತಮ್ಮ ಜೀವನದ ನಿತ್ಯ ವ್ಯವಹಾರಗಳಲ್ಲಿ ಆಚರಿಸಲು ಪ್ರೇರಿತರಾಗುವರು.

ಎಲ್ಲರನ್ನೂ ಒಂದೇ ಔಷಧದಿಂದ, ಒಂದೇ ರಸ್ತೆಯ ಮೂಲಕ, ಒಂದೇ ಮ ದಿಂದ, ಇಹಪರಗಳಲ್ಲಿ ಆರೋಗ್ಯ ದೃಢ ಗಾತ್ರರಾಗಿಸುವುದಿಲ್ಲ, ಅವರು! ಯಾರು ಯಾ ಎಲ್ಲೆಲ್ಲಿ ನಿಂತಿರುವರೋ, ಅಲ್ಲಲ್ಲಿಂದ ಮುಂದು ಹೆಜ್ಜೆಯನ್ನಿರಿಸುವಂತೆ ಅವರ ಚೇತನಗೊಳಿಸುತ್ತಾರೆ. ರೋಗ ತೋರಿದಲ್ಲೇ ಔಷಧದ ಬೇರೂ ಇದೆ. ಕಣ್ಣು ತೆರೆದರೆ ಬೆ ಕನಸೊಡೆದರೆ ನನಸು. ಶಿವನ ನೆನೆದರೆ ಶವವೆದ್ದು ಕೂರುವುದು, ಎಂದರು ಬಾಬಾ. ಬೇರೆ ಅಲ್ಲ. ಬಿಂದುವೇ ಸಿಂಧು; ಕಿಡಿಯೇ ಕಿಚ್ಚು; ಬುದ್ಬುದವೇ ಭೋರ್ಗರೆವ ಕ ಅರಿಯದು, ನೆನೆಯದು, ತಿಳಿಯದು; ಬರಿದೆ ಬಳಲುವುದು, ಅಷ್ಟೆ ಎಂದರು.

ಹಲವು ಸಾಧಕರು ಅರಿಯಲು ಪ್ರಯತ್ನಿಸುತ್ತಿದ್ದಾರೆ. ಹಿಲ್ಡಾ ಚಾರ್ಲ್ಟನ್ ಎ ಅಮೇರಿಕನ್ ಭಕ್ತೆ, ತನ್ನ ಶಿಷ್ಯಳೊಬ್ಬಳಿಗೆ ಈ ರೀತಿ ಬೋಧೆ ಮಾಡುತ್ತಾಳೆ. "ಹೃದ ಮಧ್ಯದಲ್ಲಿ ಒಂದು ಸರೋವರವನ್ನು ಚಿತ್ರಿಸಿಕೊ. ಅವರ ನಟ್ಟ ನಡುವೆ, ಅರಳಿದ ಕಮ ಅವರ ಮಧ್ಯೆ ಸಾಯಿಬಾಬಾ ಮೂರ್ತಿಯನ್ನು ಪ್ರತಿಷ್ಠಿಸು. ಹೃದಯಸ್ಥರಾದ ಅ ಪ್ರೇಮವಾಹಿನಿಯರನ್ನು ಪ್ರತೀ ಶ್ವಾಸದೊಂದಿಗೂ ನಿನ್ನ ಪ್ರಾಣಗಳಲ್ಲಿ ತುಂಬಿಕೊ. ಪ್ರೇಮ ನಿನ್ನನ್ನು ತುಂಬಿ, ಮತ್ತೂ ತುಳುಕಿ, ನಿನ್ನಿಂದ ಧುಮುಕಿ, ಸಕಲ ಪ್ರಾಣಕೋಟಿಗಳ ಪ್ರವಹಿಸಲಿ. "ಬಾಬಾ ಅವರೊಂದಿಗೆ ಲೀನವಾಗುವುದು ಹೇಗೆಂದು ಪ್ರಶ್ನಿಸಿದ ಮತ್ತೊ ಶಿಷ್ಯನಿಗೆ ಹಿಲ್ಡಾ ಬರೆಯುತ್ತಾಳೆ: "ಎಲ್ಲರಲ್ಲೂ ನಾವೇ, ನಮ್ಮಲ್ಲಿ ಎಲ್ಲರೂ, ಎ ಭಾವನೆಯನ್ನು ಬಲಪಡಿಸು. ಬಾಬಾ ಅವರೇ ಇಡೀ ವಿಶ್ವ. ಅವರ ಜಟಾಭಾರವೇ ಆಕಾ ಅವರ ದೇಹವೇ ಭೂಮಿ. ಅವರ ದೇಹದಲ್ಲಿನ ಜೀವಕಣಗಳು ನಾವು. "ತನ್ನ ಅನುಭವ ಕುರಿತು ಶಿಷ್ಯನೊಬ್ಬ ಹಿಲ್ಡಾಳಿಗೆ ಬರೆಯುತ್ತಾನೆ: "ಮರಗಳೊಂದಿಗೆ, ಮರಳಿನೊಂದಿ ಎಲೆಗಳೊಂದಿಗೆ, ಹೂಗಳೊಂದಿಗೆ ಮಾತನಾಡಲು ಮನ ಸೆಳೆಯುತ್ತದೆ. ಅವುಗಳಲ್ಲೆಲ್ಲ ಬಾ ನೆಲೆಸಿದ್ದಾರೆ. "ಒಬ್ಬ ಅಮೇರಿಕನ್ ಸಾಧಕ ನನಗೆ ಬರೆದ" ಇದ್ದಕ್ಕಿದ್ದ ಹಾಗೆ ಸ್ವಾಮಿ ನೀಡಿದರು. ಭ್ರೂಮಧ್ಯ ಚಿಗುಟಿದರು, ಮೂರನೆಯ ಕಣ್ಣು ಇರುವ ಜಾಗದಲ್ಲಿ. ನಿತ್ಯಾನಂ ಪರಮಾನಂದ ಮುಂತಾದ ಶಬ್ದಗಳ ನಿಜಾರ್ಥ ನನಗೆ ಆಗ ತಿಳಿಯಿತು. ಸುಮಾರು ಐ ಗಂಟೆಗಳ ಕಾಲ ಆ ಆನಂದಾನುಭವ ನನ್ನಲ್ಲಿ ನೆಲೆಸಿತ್ತು".

ಕನಸುಗಳನ್ನು ಕಲ್ಪಿಸಿ, ಬಾಬಾ ತಾವೇ ಅವುಗಳ ಮೂಲಕ ಉಪದೇಶಗಳನ್ನೀಯುವ ಪಾಶ್ಚಾತ್ಯರನೇಕರಿಗೆ ಈ ಅನುಭವ ಲಭಿಸಿದೆ. ಒಬ್ಬರು ನನ್ನ ಹತ್ತಿರ ಬಂದು, ವಿಶು ಚಕ್ರದಲ್ಲಿ ಹೆಚ್ಚು ಧ್ಯಾನ ಮಾಡುವಂತೆ ಬಾಬಾ ಆದೇಶಿಸಿದ್ದಾರೆ ಎಂದರು. ಮತ್ತೊಬ್ಬ

ತಮಗೆ ಬಾಬಾ ಅನುಗ್ರಹಿಸುವ ಸ್ವಪ್ನಗಳನ್ನೆಲ್ಲ ಬರೆದಿರಿಸಿಕೊಂಡಿದ್ದಾರೆ. ಆ ಪುಸ್ತಕವನ್ನೋದಿ ನೋಡಿದಾಗ, ಪ್ರತ್ಯಕ್ಷ ಅವರು ಹೇಳುವ ಅಂಶಗಳು, ಅದೇ ಭಾಷೆಯಲ್ಲಿ, ಅದೇ ಧಾಟಿಯಲ್ಲಿ, ಆತನಿಗೆ ಸ್ವಪ್ನಗಳಲ್ಲಿ ಬಾಬಾ ಹೇಳಿದ್ದಾರೆ ಎಂಬುದು ನನಗೆ ತಿಳಿಯಿತು. "ವಿಭಕ್ತಿ ಇರಕೂಡದು. ಭಕ್ತಿಯಲ್ಲಿ ಅಪೇಕ್ಷೆ ಬೇಡ, ಉಪೇಕ್ಷೆ ಬೆಳೆಸಿಕೊ! ತಿಳಿಯುವುದಕ್ಕೆ ಪ್ರಯತ್ನಿಸಬೇಡ. ತಿಳುವಳಿಕೆಗಾಗಿ ಪ್ರಾರ್ಥಿಸಬೇಡ. ಬೇಕಾಗಿಲ್ಲ; ಅದು ತಾನಾಗಿಯೇ ಅನುಭವವಾಗುತ್ತದೆ. ನೀನೇ ತಿಳಿವು. ತೆರೆ ತೆರೆದರೆ, ತೆರೆ ಸರಿದರೆ, ಆಗ ಅಲ್ಲೇ ಅದೇ ತಿಳುವಳಿಕೆ! ಮೌನ ತಾಳಬೇಕೆಂದು ತೀರ್ಮಾನಿಸಬೇಕಾಗಿಲ್ಲ; ನಿನ್ನ ಇರವೇ ಮೌನ! ಭಗವತ್ ತತ್ವ ನಿನ್ನಲ್ಲಿಗೆ ಪ್ರವಹಿಸುತ್ತಿದ್ದರೆ, ಗದ್ದಲವಡಗುವುದು. ಸದ್ದಿಲ್ಲದ ಶುದ್ಧ ಜ್ಞಾನಾನಂದ ಆಗ ಎಲ್ಲೆಲ್ಲೂ ತುಂಬುವುದು" - ಇತ್ಯಾದಿ ವಾಕ್ಯಗಳನ್ನು ಅವರಿಗೆ ಬಾಬಾ ಸುಸ್ಪಷ್ಟವಾಗಿ ಬೋಧೆ ಮಾಡಿದ್ದಾರೆ!

ಭಕ್ತರ, ಸಾಧಕರ, ಸಂಶಯ ನಿವೃತ್ತಿಗಾಗಿ ಬಾಬಾ ಸದಾ ಸಿದ್ಧ. ವಿಚಾರಶೀಲತೆಯಿಂದ, ಉತ್ತಮ ಭೂಮಿಯಲ್ಲಿ, ಶ್ರದ್ಧಾಭಕ್ತಿಯ ಬೀಜಗಳನ್ನು ನಾಟಲು, ಅವರು ಸಂತೋಷದಿಂದ ಮುಂಬರುತ್ತಾರೆ. ಆ ಸಂದೇಹ ನಿಮ್ಮನ್ನು ಕದಡಿಸಿ ಕಾಡುತ್ತಿರಬೇಕು. ಅದರ ನಿವೃತ್ತಿಗಾಗಿ ನೀವು ಆಳವಾಗಿ ಪ್ರಾರ್ಥಿಸಬೇಕು. ಅಷ್ಟೇ ಸಾಕು. ಚಾರ್ಲ್ಸ್ ಪೆನ್ ಎಂಬ ಸಾಧಕನಿಗೆ ಬರೆದ ಒಂದು ಪತ್ರದಲ್ಲಿ, "ಚಾರ್ಲ್ಸ್! ನೀನು ನನ್ನನ್ನು ಎಷ್ಟು ಬಾರಿ ಕರೆದಿದ್ದೀಯಾ? ಲೆಕ್ಕ ಇರಿಸಿದ್ದೀಯಾ? ನೀನು ಕರೆದಾಗಲೆಲ್ಲ ತಪ್ಪದೆ ನಾನು ಬಂದು ಸಮಾಧಾನ ಒದಗಿಸಿದ್ದೇನೆ, ಅಲ್ಲವೆ?" - ಎಂದು ಹೇಳಿದ್ದಾರೆ.

ಒಂದು ಸಲ ಪೆನ್ ತನ್ನ ಪ್ರಾರ್ಥನೆಯಲ್ಲಿ, ಒಂದು ಸಂದೇಹವನ್ನು ಸ್ವಾಮಿಯ ಮುಂದಿರಿಸಿದ: 'ಪೂರ್ವ ಪೂರ್ವ! ಪಶ್ಚಿಮ ಪಶ್ಚಿಮನೇ! ಅವೆರಡೂ ಎಂದೂ ಸೇರವು.' - ಎನ್ನುತ್ತಾರಲ್ಲಾ, ಸ್ವಾಮಿ! ಹಾಗಾದರೆ ಪೂರ್ವದಲ್ಲಿರುವ ನಿಮಗೂ, ಪಶ್ಚಿಮದ ನನಗೂ, ಇದೆಂತಹ ಸೋಜಿಗದ ಸಂಬಂಧ? ನಮ್ಮ ಮಧ್ಯದ ಗೋಡೆ ನಾನು ದಾಟಲಾರನೇ? ಸ್ವಾಮಿ ಅವನಿಗೆ ಕನಸಿನಲ್ಲಿ ಸಮಾಧಾನ ಹೇಳಿದರು, "ಶೈಶವದಿಂದಲೂ ಅರ್ಧ ಸತ್ಯಗಳನ್ನೂ, ಇಂತಹ ಅಸಂಬದ್ಧಗಳನ್ನೂ ಮನಸ್ಸಿನಲ್ಲಿ ತುಂಬಿಕೊಂಡದ್ದರಿಂದಲೇ ಈ ತವಕ! ದೊಡ್ಡವರಿಗೆ ಸಿಡುಬು ಬಂದರೆ, ಕೂಸುಗಳನ್ನು ಅವರ ಸಮೀಪಕ್ಕೆ ಹೋಗಗೊಡುವುದಿಲ್ಲ. ನನ್ನ ಕುರಿತಾದ ಸಂದೇಹ ಅವರಿಗೂ ಅಂಟದಿರಲು ಮಕ್ಕಳನ್ನಾದರೂ ದೊಡ್ಡವರಿಂದ ಬೇರಿಡುವುದು ಕ್ಷೇಮ ಎಂದು ತೋರುತ್ತದೆ. ಅಷ್ಟರ ಮಟ್ಟಿಗೆ ನಾಸ್ತಿಕ ರೋಗ ದೊಡ್ಡವರನ್ನು ನರಳಿಸುತ್ತಿದೆ. ನಾನು ಪೂರ್ವಜಗತ್ತಿನವನು, ನೀವು ಪಶ್ಚಿಮ ಜಗತ್ತಿನವರು, ಎಂಬುವೆಲ್ಲ ತಪ್ಪು ಭಾವನೆ. ಗುಂಡು ಭೂಮಿಗೆ ಪೂರ್ವವೆಲ್ಲಿ, ಪಶ್ಚಿಮವೆಲ್ಲಿ? ಸೂರ್ಯನ ಸುತ್ತ ಭೂಮಿ ಸುತ್ತಿದರೂ, ಅವನು ಉದಯಿಸುತ್ತಾನೆ, ಅಸ್ತಮಿಸುತ್ತಾನೆ ಎಂದು ಭ್ರಮಿಸುತ್ತೇವೆ. ನಿಜವನರಸು; ನನ್ನ ಕೃಪೆಯ ಬಯಸು" ಎಂದು ಉಪದೇಶಿಸಿದರು.

ವಿವರಿಸಲಾಗದ ಒಂದು ದಾಹದಿಂದ ಪೀಡಿತರಾದವರು ಮಾತ್ರ ಸ್ವಾಮಿಯ ಸಾನ್ನಿಧ್ಯಕ್ಕೆ ಸಾಲಾಗಿ ಬರುತ್ತಿದ್ದಾರೆ. ಬೇರಿಂದ ಬೇರೆಯಾದ ಗಿಡದಂತೆ, ಗಾಳಿ ಬೀಸಿದ ಕಡೆಗೆ ಹಾರಿಹೋಗುತ್ತ, ಇದ್ದ ಕಡೆ ಇರಲಾರದೆ, ತಾವು ಬಾಳುವುದು ಏಕೆ ಎಂಬುದನ್ನರಿಯದ ಜನರಿಗೆ, ಒಳಗಿನೊಳಗಡೆ ಬಲವತ್ತರವಾದ ಹಣ್ಣೊಂದು ಬೆಳೆಯುತ್ತದೆ, ಎಂದು ನಾರ್ಮನ್ ಮೆಯಿಲರ್ ಎಂಬ ಅಮೆರಿಕನ್ ಸಾಹಿತಿ ಬರೆಯುತ್ತಾನೆ.

ಪುಟ್ಟಪರ್ತಿಗೆ ಬಂದ ಅಮೆರಿಕನ್ ಗುಂಪೊಂದರ ನಾಯಕ ನನಗೆ ಹೇಳಿದ: "ಟಿ... ಎಂಬ ಹೆಸರಿನ ಇವನು, ಇಲ್ಲಿಗೆ ಬರುವ ಮೊದಲು, ಕೆನಡಾದ ದಂಡಕಾರಣ್ಯವೊಂದರಲ್ಲಿ ಈಚೆಗೆ ಒಂದು ವರ್ಷ ಏಕಾಂತದಲ್ಲಿ ಕಳೆದವನು. ಜಾನೆಟ್ ಎಂಬ ಇವಳು, ಈಜಿಯನ್ ಸಮುದ್ರದ ಒಂದು ಚಿಕ್ಕ ದ್ವೀಪದಲ್ಲಿ ಬಿಡಾರ ಬಿಟ್ಟಿದ್ದಳು; ಇವಳಿಗೆ ಹಲವಾರು ಸಿದ್ಧಿಗಳುಂಟು, ಧ್ಯಾನ ಯೋಗದಿಂದಗಳಿಸಿದ್ದು. ಮಾರ್ಟಿನ್ ಸ್ಟ್ಯಾಂಪ್ ಎಂಬ ಈತ ಗಣಿತ ಶಾಸ್ತ್ರದಲ್ಲಿ ಚಿಕ್ಕ ವಯಸ್ಸಿನಿಂದಲೂ ಮಹಾ ಪ್ರಚಂಡ. ಹೇಗಾದರೂ ಇವನನ್ನು ತಮ್ಮ ವಿಶ್ವವಿದ್ಯಾಲಯದಲ್ಲಿರಿಸಿಕೊಳ್ಳಬೇಕೆಂದು ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್ ವಿಶ್ವ ವಿದ್ಯಾಲಯಗಳು ತಿಂಗಳುಗಟ್ಟಲೆ ಪೋಟೀ ಮಾಡಿದುವು. ಆದರೆ ಅವನು ಇಬ್ಬರಿಗೂ ದಾಟು ಕೊಟ್ಟು, ಭಗವಂತನಲ್ಲಿ ಐಕ್ಯವಾಗುವ ವಿಧಾನ ಕಲಿಯಲು ಭಾರತಕ್ಕೆ ಬಂದಿದ್ದಾನೆ. ರಾಮನ್ ಅಂತ ತನ್ನ ಹೆಸರನ್ನು ಈತ ಬದಲಾಯಿಸಿಕೊಂಡು ಬಹಳ ವರ್ಷವಾಯಿತು. ಅಮೆರಿಕದ ಹಲವಾರು ಕಾರಾಗೃಹಗಳಲ್ಲಿ ಇವನು ಖೈದಿಗಳಿಗೆ ಯೋಗಶಾಸ್ತ್ರ ಬೋಧಿಸುತ್ತಿದ್ದಾನೆ. ಈ ಹಲವು ಬಂದೀಖಾನೆಗಳಿಂದ ಇವನಿಗೆ ದಿನವೂ ಕಟ್ಟು, ಕಟ್ಟು ಕಾಗದಗಳು ಬರುತ್ತಿವೆ".

ಇಂದ್ರಾದೇವಿಯಂತೆ ರಾಮನ್ ಯೋಗ ಶಿಕ್ಷಣದ ಮೂಲಕ ಸಾಯಿ ಸಂದೇಶ ಶಿಕ್ಷಣವನ್ನೂ ಬಂದೀಖಾನೆಗಳಲ್ಲಿ ನಡೆಸುತ್ತಾನೆ. ಆದ್ದರಿಂದ, ಸ್ಟೀವ್‌ವಿನ ಎಂಬ ಖೈದಿ ಲಾಂಫಾಕ್ ಜೆಯಿಲಿನಿಂದ ನನಗೆ ಕಾಗದ ಬರೆದ: "ಇಲ್ಲಿಯ ವಾತಾವರಣದ ಅಲೆಗಳು ನಿರಾಶಾಕಾರಿ; ಪ್ರೋತ್ಸಾಹಕಾರಿ ಅಲ್ಲ. ಉತ್ತೇಜನ ಕೊಟ್ಟು, ಸಾಧನೆ ಮಾಡಿಸಿ, ಶಾಂತಿ ಒದಗಿಸುವ ಗುರುಗಳು ಬೇಕಾಗಿದ್ದಾರೆ. ಅದಕ್ಕಾಗಿ ಪ್ರಾರ್ಥಿಸುತ್ತಿದ್ದೇನೆ. ಇಲ್ಲಿಂದ ಹೊರಬಿದ್ದ ನಂತರ, ಆತ್ಮನನ್ನರಿಯಲು ಹೆಚ್ಚು ಸಾಧನೆ ಮಾಡಬೇಕೆಂದಿದ್ದೇನೆ. ಸಾಯಿ ಬಾಬಾ ನಮ್ಮಗಳ ಪರದಾಟವನ್ನು, ತತ್ತರಿಸುತ್ತ ಏಳುತ್ತ ಬೀಳುತ್ತ ನಡೆಯಲು ಕಲಿಯುವ ಕೂಸನ್ನು ಅದರ ತಾಯಿ ಗಮನಿಸುತ್ತಿರುವಂತೆ, ಗಮನಿಸುತ್ತಾರೆ ಎಂದು ತೋರುತ್ತದೆ. ಶೀಘ್ರದಲ್ಲೇ ಅವರ ಚರಣ ಸೀಮೆ ಸೇರಿ, ಜೀವಿತ ಪರಮೋದ್ದೇಶವನ್ನರಿತು, ಅದನ್ನು ಸಾಧಿಸಲು ಪ್ರಯತ್ನಿಸುವ ಭಾಗ್ಯ ದೊರಕುತ್ತದೆ ಎಂಬುದು ನನ್ನ ನಿರೀಕ್ಷೆ. ಯಮನಿಯಮಗಳ ಮೂಲಕ ಸಮಾಧಿಯತ್ತ ಬ್ರಹ್ಮ ಸಾಕ್ಷಾತ್ಕಾರದತ್ತ ಕೈಹಿಡಿದು ನಡೆಸುತ್ತಾರೆ ಎಂದು ನಂಬಿದ್ದೇನೆ ವಿಷಯವಾಸನೆ ಎಂಬ ಇದಕ್ಕಿಂತ ಘೋರವಾದ ಕಾರಾಗೃಹದಿಂದ ಪಾರಾಗಲು, ನಾನು ಅವರ ಭಾವಚಿತ್ರದೆದುರು ಕುಳಿತು, ಗಂಟೆಗಟ್ಟಲೆ ಬೇಡುತ್ತಿರುತ್ತೇನೆ".

ಏಸು ಕ್ರಿಸ್ತನ ಹಾಗೆ, ಬಾಬಾ ಅವರೂ ನಾನಾ ದೇಶಗಳಲ್ಲಿ, ತಮ್ಮ ಬರವಿನ ಸೂಚನೆಗಳನ್ನು ಪ್ರಕಟಿಸಿ, ಲಕ್ಷೋಪಲಕ್ಷ ಜನರನ್ನು ತಮ್ಮ ಬಳಿಗೆ ಬರಮಾಡಿಕೊಂಡಿದ್ದಾರೆ, ಕೊಳ್ಳುತ್ತಾರೆ. ಮೆಕ್ಸಿಕೋ ರಾಜ್ಯದ ಚುಚುಮಾ ಪರ್ವತ ಶ್ರೇಣಿಯಲ್ಲಿ, ಕಾಳ್ಗಿಚ್ಚೆದ್ದು ಸಾವಿರಾರು ಚದರ ಮೈಲಿ ವಿಸ್ತೀರ್ಣದ ಅರಣ್ಯಗಳು ಅಗ್ನಿಗೆ ಆಹುತಿಯಾಗುತ್ತಿರುವಾಗ, ಅದರ ನಡುವೆ ತಾನು ನಿರ್ಮಿಸಿದ "ಸಾಯಿ ನಿಲಯಂ" ಎಂಬ ಯೋಗ ಶಿಕ್ಷಣ ಕೇಂದ್ರವನ್ನುಳಿಸಿಕೊಡಿ, ಎಂದು ಇಂದ್ರಾದೇವಿ ಮೊರೆಯಿಟ್ಟಳು. "ತಕ್ಷಣವೇ", ಆಕೆ ಬರೆಯುತ್ತಾಳೆ "ಎದುರುಗಾಳಿ ಹೊಡೆದು ಸಾಯಿ ನಿಲಯಂ ಉಳಿಯಿತು".

ಧರ್ಮಕ್ಷೇತ್ರದಲ್ಲಿ ವಿಶಿಷ್ಟ ರೀತಿಯ ಗಡಿಯಾರವೊಂದಿದೆ. ಅಂಕಿಗಳಿಗೆ ಬದಲಾಗಿ, ಅದರಲ್ಲಿನ ಮುಳ್ಳುಗಳು, ಶ್ರವಣಂ, ಕೀರ್ತನಂ, ವಿಷ್ಣು ಸ್ಮರಣಂ, ಪಾದ ಸೇವನಂ, ವಂದನಂ, ಅರ್ಚನಂ, ದಾಸ್ಯಂ, ಸಖ್ಯಂ, ಆತ್ಮ ನಿವೇದನಂ ಎಂಬ ಭಕ್ತಿಸೋಪಾನಗಳನ್ನೇ ಸೂಚಿಸುತ್ತವೆ. ಒಮ್ಮೆ ಬಾಬಾ ಅದರೆದುರು ನಿಂತಿದ್ದಾಗ, ಕ್ಯಾಮರಾ ಹಿಡಿದವನೊಬ್ಬ ಗುರಿಯಿಟ್ಟು ಕ್ಲಿಕ್ ಮಾಡಿದ. ಆಗ ಬಂದ ಫೋಟೋದಲ್ಲಿ, ಆ ಗಡಿಯಾರದ ಚಿತ್ರ, ಒಂದು ಬ್ಯಾಡ್ಜಿನಂತೆ ಅವರ ಅಂಗಿಯ ಮೇಲೆ ಕಾಣಿಸಿಕೊಂಡಿತು! ಆಶ್ಚರ್ಯದ ಆ ಫೋಟೋವನ್ನು ಅನೇಕರು ಬಯಸಿ ಪಡೆದರು. ನವವಿಧ ಭಕ್ತಿಯಲ್ಲಿ ನುರಿತವನನ್ನು, ನಾನು ನನ್ನ ಅಚ್ಚುಮೆಚ್ಚಿನವನಾಗಿ ಹೃದಯದಲ್ಲೇ ಧರಿಸುತ್ತೇನೆ, ಎಂದು ಸ್ವಾಮಿ ಹೇಳಿದ್ದರಿಂದ, ಅದನ್ನು ಪಡೆಯಬೇಕೆಂಬ ಆಸೆ ಅನೇಕರಲ್ಲಿ ಅಂಕುರಿಸಿತು. ಅಮೆರಿಕದ ಕೋವನ್ ದಂಪತಿಗಳಿಗೂ ಈ ವಾರ್ತೆ ಮುಟ್ಟಿತು. ಅವರು ಅದಕ್ಕಾಗಿ ಹತ್ತಾರು ಕಡೆ ವಿಚಾರಿಸಿ ವಿಫಲರಾದರು. ಒಂದು ದಿನ ರಾತ್ರಿ, ಅವರ ಕೋಣೆಯ ಗಡಿಯಾರ, ಇದ್ದಕ್ಕಿದ್ದಂತೆ ಎದ್ದೆದ್ದು ಬಡಿಯಲು ಪ್ರಾರಂಭಿಸಿತು. ಎದ್ದು ಹೋಗಿ ಏನಾಯಿತದಕ್ಕೆ ಎಂದು ಪರೀಕ್ಷಿಸಲು ಹೊರಟಾಗ, ಅವರಿಗೆ ಗೋಡೆ ಅಂಚಿನಲ್ಲಿ ಸ್ವಾಮಿ ಇರಿಸಿದ್ದ, ಆ ಫೋಟೋದ ದೊಡ್ಡ ಪ್ರತಿಯೊಂದು ಪತ್ತೆಯಾಯಿತು. ಅವರ ಆನಂದಕ್ಕೂ ಕೃತಜ್ಞತೆಗೂ ಮಿತಿ ಇರಲು ಸಾಧ್ಯವೆ?

ಆ ವೃದ್ಧ ದಂಪತಿಗಳು ತಮ್ಮ ಪೂಜಾ ಮಂದಿರದ ಸಾಯಿ ಪಟದಿಂದಲೇ ವಿಭೂತಿ ಬೇಡಿದರು. ಆದರೆ ಅನುಗ್ರಹ ಮತ್ತೊಂದು ಬಗೆಯಲ್ಲಿ ಬಂತು. ಪಟದ ಸ್ವಾಮಿಯ ಕಂಠದಲ್ಲಿ, ಅಷ್ಟರಶ್ಮಿಯ ವಜ್ರ ನಕ್ಷತ್ರ ಮೂಡಿ ನೆಲೆಸಿತು. ಇಂದಿಗೂ ಅದು ಎಲ್ಲರ ಕಣ್ಮನಗಳನ್ನು ಸೆಳೆಯುತ್ತಿದೆ!

ಇಂದ್ರಾದೇವಿ ಎಂಬ ಮೆಕ್ಸಿಕೊ ದೇಶದ ಮಹಿಳೆಗೆ, ಸ್ವಾಮಿ ಒಂದು ಭಾರಿ ಮುತ್ತಿನ ಮಾಲೆಯನ್ನು ಸೃಷ್ಟಿಸಿಕೊಟ್ಟಿದ್ದಾರೆ. ರೋಗ ಪೀಡಿತರಾದವರ ಹಣೆಯಲ್ಲದನ್ನಿರಿಸಿ, ಅವರ ಪಕ್ಕದಲ್ಲಿ ತಾನು ಕುಳಿತು ಪ್ರಾರ್ಥಿಸಿದರೆ, ಸಾಯಿ ಕೃಪೆ ಸನ್ನಿಹಿತ, ಎಂದು ಆಶ್ವಾಸವಿತ್ತಿದ್ದಾರೆ. ಎಂದೂ ತುಂಬಿ, ಎಷ್ಟು ತೆಗೆದರೂ ಬರಿದಾಗದ, ವಿಭೂತಿ

ಭರಣಿಯೊಂದನ್ನೂ ಆಕೆಗೆ ಕೊಟ್ಟಿದ್ದಾರೆ. ಸಾಯಿಯ ದಿವ್ಯ ಶಕ್ತಿಯನ್ನು ಕುರಿತ ಸಂಶಯವನ್ನು, ಭಸ್ಮದಿಂದಲೇ ಭಸ್ಮ ಮಾಡುತ್ತಿದ್ದಾರೆ ಇಂದ್ರಾದೇವಿ.

ಹೀಗೆ ಸ್ವಾಮಿಯ ಪ್ರೇಮ ಪೂರಿತ ಕರುಣಾವರ್ಷ, ಲೋಕದಲ್ಲೆಲ್ಲೆಲ್ಲೂ ಅಸ್ಪಸ್ಥತೆಯನ್ನು ನೀಗಿಸುತ್ತದೆ; ಅನಾರೋಗ್ಯವನ್ನು ಶಮನ ಮಾಡುತ್ತದೆ; ಮನದ ಮಾಲಿನ್ಯ ವನ್ನು ತೊಡೆದು ಹಾಕುತ್ತದೆ; ಹೃದಯ ದೌರ್ಬಲ್ಯವನ್ನು ದೂರವಿರಿಸುತ್ತದೆ; ಮೆದುಳನ್ನು ಪಕ್ವ ಮಾಡುತ್ತದೆ; ಸರ್ವ ವಿಧದಲ್ಲೂ ಮಾನವ ಕುಲವನ್ನು ಉದ್ಧರಿಸುತ್ತದೆ.

ಜೆರಿ ಬ್ರೆಂಟ್ ಎಂಬ ಅಮೆರಿಕಾ ದೇಶದ ಸೋದರಿಯ ಪತ್ರ ಹೀಗಿದೆ: "ನಾನು ಸಾಯಿಬಾಬಾ ಆಶ್ರಮದಲ್ಲಿ ಸಾಧನಾ ಜೀವನ ಪ್ರಾರಂಭಿಸಿ, ಇಂದಿಗೆ ಒಂದು ಸಂವತ್ಸರವಾಯಿತು. ಅವರಲ್ಲಿ ಭಕ್ತಿ ವಿಶ್ವಾಸವಿಲ್ಲದವರು, ಮೈಯಲ್ಲಿ, ಆರೋಗ್ಯವಿಲ್ಲದವರು, ಮನದಲ್ಲಿ ಶಾಂತಿ ಇಲ್ಲದವರು, ಸಹಸ್ರಾರು ಮಂದಿ ಇಲ್ಲಿಗೆ ಬರುತ್ತಿದ್ದಾರೆ. ಇಲ್ಲಿಂದ ಹಿಂತಿರುಗುವಾಗ ಅವರು ಹೆಚ್ಚಿನ ನಂಬಿಕೆಯಿಂದ, ಸುಖ, ಸಂತೋಷದಿಂದ, ಶಾಂತಿ ಸಮಾಧಾನಗಳಿಂದ, ಧೈರ್ಯ ಸ್ಥೈರ್ಯದಿಂದ ಹೊರಡುತ್ತಾರೆ. ನನಗಂತೂ ಅವರ ಪವಾಡದ ಪೂರ್ಣ ಲಾಭ ದೊರಕಿದೆ. ಕನ್ನಡಿಯಲ್ಲಿ ಕಾಣುವಂತೆ, ನನ್ನ ಪೂರ್ವ ಸಂಸ್ಕಾರಗಳನ್ನೆಲ್ಲ ಕಾಣುತ್ತಿದ್ದೇನೆ. ಅವೆಲ್ಲ ಅರ್ಥರಹಿತ, ನಿಷ್ಫಲ ನಿರ್ವೀರ್ಯ ಎಂದು ತಿಳಿಯುತ್ತಿದ್ದೇನೆ. ನನ್ನನ್ನಿನ್ನು ಅವು ಭಾದಿಸಲಾರವು. ಈಚೀಚಿನವು ಮೊದಲು, ಅನಂತರ, ಆಚಿನವು, ಇಂದಿನವು ಮೊದಲು ಅಂದಿನವು ಅನಂತರ, ಹೀಗೆ ಜನ್ಮ ಜನ್ಮಾಂತರಗಳ ಸಂಸ್ಕಾರಗಳು ಕೂಡ ಜಗುಳಿ ಜಾರಿದವು. ಆನಂದವೊಂದೇ ನನ್ನ ಅನುಭವವಾಗಿದೆ; ಅಹಂ ಎಂಬ ಪ್ರತ್ಯೇಕತೆಯನ್ನು ಸ್ವಾಮಿ ಭಸ್ಮ ಮಾಡಿದರು. ಈ ಸಾನ್ನಿಧ್ಯದಲ್ಲಿ ಪ್ರೇಮ ಪ್ರವಾಹದಲ್ಲಿ, ನಾನು ನನ್ನದು ಎಂಬುದಕ್ಕೆ ಸ್ಥಾನವಿಲ್ಲ. ಎಲ್ಲ ಶಾಂತಿಮಯ; ಎಲ್ಲರೂ ಪ್ರೇಮಮಯ ನಿನ್ನೆ - ನಾಳೆ ಎಂಬ ಚಿಂತೆ ಶೂನ್ಯ. ಹೃದಯ ಪಾತ್ರ ತುಂಬ ಭಗವದನುಗ್ರಹ".

# ಶಿರ್ಡಿ ಚರಣ

ಮಹಾ ಶಿವರಾತ್ರಿ! ಅಖಂಡ ನಾಮ ಸಂಕೀರ್ತನೆ. ಬೆಳಕು ಹರಿಯುತ್ತಲೂ, ಬಾಬಾ ವೇದಿಕೆಯ ಮೇಲೆ ಪ್ರತ್ಯಕ್ಷರಾದರು. ಜಾಗರಣೆಯ ತತ್ವವನ್ನು ವಿಶದೀಕರಿಸಿದರು. ಭಜನೆಯ ಅಂತರಾರ್ಥವನ್ನು ಬಿಡಿಸಿ ಹೇಳಿದರು. ಅನಂತರ ತಾವೇ ಎಲ್ಲರಿಗೂ, ಹುಳಿಯನ್ನ, ಮೊಸರನ್ನ, ಮಧುರಾನ್ನ, ಪ್ರಸಾದಗಳನ್ನು ಕೊಟ್ಟರು. ತಾವು ಎಲ್ಲರೊಂದಿಗೂ ಎಲ್ಲ ಕಡೆಗೂ ಪ್ರಯಾಣ ಮಾಡುತ್ತೇವೆಂದೂ, ಎಲ್ಲರಿಗೂ ತಮ್ಮ ಅನುಗ್ರಹವಿದೆಯೆಂದೂ ಭರವಸೆ ಇತ್ತರು. ಆದರೂ ಮಂದಿಗೆ ಮನೆಯ ಯೋಚನೆಬಾರದು; ಊರ ದಾರಿ ನೆನಪಿಗೆ ಬರಲೊಲ್ಲದು. ಮಾರನೆಯ ದಿನ ೨೫ ಸಹಸ್ರ ಜನರು ಕುಳಿತ ಸಾಲುಗಳ ನಡುವೆ, ಬಾಬಾ ವಿಭೂತಿ ಪೊಟ್ಟಣಗಳ ಬುಟ್ಟಿ ಹಿಡಿದು, ಅದನ್ನು ಹಂಚುತ್ತ ನಡೆಯುವರು. ಪ್ರತೀ ವ್ಯಕ್ತಿಗೂ ಒಂದು ಕಿರುನಗೆ, ಕಣ್ಣ ನೋಟದ ಕಿಡಿ, ವಿಭೂತಿ, ಪಾದಸ್ಪರ್ಶನ ಭಾಗ್ಯ ದೊರಕುವುದು. ಸಂತೋಷಂ, ಅಬ್ಬಾ, ವೆರಿ ಹ್ಯಾಪ್ಪಿ ಎಂಬ ವಾಗ್ಪುಷ್ಪಗಳ ವಿತರಣೆ ಬೇರೆ! ಅಲ್ಲಲ್ಲಿ ನಿಂತು, ನಾಮಕರಣ, ಅಕ್ಷರಾಭ್ಯಾಸ, ಹಸ್ತಸ್ಪರ್ಶ, ಲಿಖಿತಾನುಗ್ರಹ ಮುಂತಾದ ಕೊಡುಗೆಗಳು. ಎಲ್ಲರಿಗೂ ಹಿಡಿಯಲಾರದ ಹರ್ಷ! ಹೊರಲಾರದ ಆಶೀರ್ವಾದದ ಗಂಟು. ಒಂದು ಮಾತು, ಒಂದು ತುತ್ತು, ಒಂದು ನೋಟ, ಒಂದು ಮಂದಹಾಸ, ಒಂದು ಕ್ಷಣದ ಪಾದ ವಂದನ - ಸಾಕು; ಅವರೆಲ್ಲರ ಆಯಾಸಗಳಿಗೂ ಪರಿಹಾರ; ಮಾಡಿದ ಖರ್ಚಿಗೆ ಲಾಭ; ಪಟ್ಟ ಕಷ್ಟಗಳಿಗೆ ಪ್ರತಿಫಲ.

ಇನ್ನೂ ನೂರಾರು ಮಂದಿ ನಿಲಯದಲ್ಲೇ ಉಳಿಯುತ್ತಾರೆ. ಅಂಗಳದ ಮರಳಿನಲ್ಲಿ ಕುಳಿತು ಬಯಕೆಯಿಂದ ಕಾಯುತ್ತಾರೆ. ಬಾಬಾ ಅವರನ್ನು ನಿರಾಶೆಗೊಳಿಸುವುದಿಲ್ಲ. ಅವರ ನಡುವೆ ಬಂದು, ಪ್ರಥಮತಃ ನಡೆಯಲಾರದ ನೋವು ತಡೆಯಲಾರದ, ಕೂರಲಾರದ, ಬಗ್ಗಲಾರದ ರೋಗಿಗಳನ್ನು ಮಾತನಾಡಿಸಿ, ಮನಃಸ್ಥೈರ್ಯವನ್ನಿತ್ತು ಶುಶ್ರೂಷಿಸುತ್ತಾರೆ. ಕಷ್ಟಪಡುವರು, ತುಂಬ ಮುದುಕರು, ಅರಳು ಮರುಳುಗಳು, ಬಲಹೀನ ಶಿಶುಗಳು, ಇವರನ್ನು ಆರಿಸಿ ಆದರಿಸುತ್ತಾರೆ. ಉಳಿದವರನ್ನೂ ಅವರು ಕೈ ಬಿಡುವುದಿಲ್ಲ. ನಿಲಯದಲ್ಲಿ ಅವರ ಪ್ರತ್ಯಕ್ಷ ದರ್ಶನ ಸ್ಪರ್ಶನ ಸಂಭಾಷಣೆಯ ಆನಂದ ಸಿಗದವರಿಗೆ, ಪರೋಕ್ಷವಾಗಿಯೇ ತಮ್ಮ ಕರುಣೆ ದೊರಕುವುದೆಂಬ ಆಶ್ವಾಸನ ನೀಡುವರು. ಹೊಲದಲ್ಲಿ, ಕಾರ್ಖಾನೆಯಲ್ಲಿ, ಕಚೇರಿಗಳಲ್ಲಿ, ಮನೆಯಲ್ಲಿನ "ದೇವರ ಕೋಣೆ"ಯಲ್ಲಿ, ತಾನು ಅವರ ಬಳಿ ಇದ್ದು, ಅವರಿಗೆ ಧೈರ್ಯೋತ್ಸಾಹಗಳನ್ನು ಕೊಡುವೆನು ಎಂದು ಹೇಳುತ್ತಾರೆ. ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ; ಕುಳಿತರೆ ನಿಲುವ; ನಿಂತರೆ ನಲಿವ; ನಲಿದರೆ ಒಲಿವ ದೇವ ನಮ್ಮ ಸಾಯಿ, ಎಂಬುದು ಲಕ್ಷ ಜನರ ನಿತ್ಯಾನುಭವ.

"ಇವರೆಲ್ಲ ನನ್ನವರು, ನನ್ನ ಬಂಧು ಬಳಗ! ನನಗಾಗಿ ಬಂದವರು" - ಎಂದು ಹೇಳುತ್ತಾ, ಬಾಬಾ ಬೆಳಗಿನಿಂದ ನಸುಕಿನವರೆಗೂ, ಹತ್ತು ಹನ್ನೆರಡು ದಿನಗಳು ಉಲ್ಲಾಸದಿಂದ, ನೊಂದ ಮಂದಿಗೆಲ್ಲ ಸಂತಸ, ಸಮಾಧಾನ, ಸುಖಗಳನ್ನು ಕೊಡುವರು. ಒಂದೊಂದು ರಾಜ್ಯದಿಂದ ಬಂದ ಭಕ್ತರನ್ನು ಪ್ರತ್ಯೇಕ ಕರೆದು ಕೂರಿಸಿ ಸದ್ಬೋಧೆ ಮಾಡುವರು.

ಹೀಗಾಗಿ, ಬಹುಮಂದಿ ಸಂತೃಪ್ತರಾಗಿ ಮನೆಗೆ ಮರಳುವರು. ಬಾಬಾ ಬೆಂಗಳೂರಿಗೆ ೧೩ ಮೈಲಿ ಪೂರ್ವದಲ್ಲಿರುವ ವೈಟ್ ಫೀಲ್ಡ್ (ಪಾಂಡು-ರಂಗ)ನಲ್ಲಿನ "ಬೃಂದಾವನ"ಕ್ಕೆ ತೆರಳಿದರು. ಬೇಸಿಗೆ ಕಡು ಬಿಸಿಲು ಪುಟ್ಟಪರ್ತಿಯಲ್ಲಿ ಬಲು ತೀಕ್ಷ್ಣ. ಆದ್ದರಿಂದ, ತಾವಲ್ಲಿದ್ದರೆ ಯಾತ್ರಿಕರಿಗೆ ಹಿಂಸೆ ಎಂಬ ಕಾರಣದಿಂದ, ಮಾರ್ಚ್ ಎಪ್ರಿಲ್ ಮೇ ತಿಂಗಳುಗಳಲ್ಲಿ ಬಾಬಾ, ಬಹುಭಾಗ, 'ಬೃಂದಾವನ'ದಲ್ಲೇ ಇರುತ್ತಾರೆ. ಅದು ಕನ್ನಡಿಗರ ಭಾಗ್ಯ. ಅಲ್ಲಿಯೂ ಅವರು ಅನವರತ ಅನಾಥರಿಗಾಶ್ವಾಸನ, ನೀಡುವರು. ಕತ್ತಲೆ ಕವಿದ ಹೃದಯಗಳೊಳಗೆ ಕೃಪಾರಶ್ಮಿಯ ಬೆಳಕು ಹಾಯಿಸುವರು. ಅಶಾಂತಿ ನಿಲಯಗಳು ಪ್ರಶಾಂತಿ ನಿಲಯಗಳಾಗುವವು.

ಬೊಂಬಾಯಿ ನಗರದಲ್ಲಿ ಈ ಅವತಾರ ಪುರುಷನ ಕಾರ್ಯಕ್ಷೇತ್ರಕ್ಕೆ ಧರ್ಮ ಕ್ಷೇತ್ರವೆಂದು ಹೆಸರು. ಅಲ್ಲಿಂದ ಸನಾತನ ಧರ್ಮವೂ, ಅದರ ಸಂತಾನ ಧರ್ಮಗಳಾದ ಬೌದ್ಧ, ಜೈನ, ಪಾರಸಿ, ಕ್ರೈಸ್ತ, ಮುಸಲ್ಮಾನ ಧರ್ಮಗಳೂ, ಹೊಸ ಸ್ಫೂರ್ತಿ, ಹೊಸ ಕೀರ್ತಿ ಪಡೆದು, ವಿಶ್ವ ವಿರಾಜಮಾನವಾಗುತ್ತಿದೆ. ಅದನ್ನು ಮೇ ೧೨ನೆ ತಾ|| ಪ್ರವೇಶಿಸಿ ಪ್ರಾರಂಭ ಮಾಡಿದರಾದ್ದರಿಂದ, ಪ್ರತೀ ವರ್ಷ ಆ ಕಾಲಕ್ಕೆ ಸರಿಯಾಗಿ, ಬಾಬಾ ಬೊಂಬಾಯಿಗೆ ಭೇಟಿ ಕೊಟ್ಟು, ಜನತೆಗೆ ಸದ್ಬೋಧೆಯನ್ನನುಗ್ರಹಿಸುವರು.

೧೯೬೯ ಮೇ ೮ರಿಂದ ೧೨ರ ವರೆಗೆ, ಬಾಬಾ ಬೊಂಬಾಯಿಯಲ್ಲೇ ಧರ್ಮ ಕ್ಷೇತ್ರದಲ್ಲೇ ಬಿಡಾರ ಮಾಡಿದರು. ಆ ಮಹಾನಗರದ ಮನೆ ಮಾತಾದರು; ಮನದ ಮುದ್ದು ಮೂರ್ತಿಯಾದರು. ಬೆಳಗಿನ ಹಾಗೂ ಸಂಜೆಯ ಭಜನಾ ಕಾರ್ಯಕ್ರಮಗಳಲ್ಲಿ ಅವರನ್ನು ವೀಕ್ಷಿಸುವ ಸಲುವಾಗಿ ೩೦-೪೦ ಸಾವಿರ ಜನರು ಹದಿನೈದಿಪ್ಪತ್ತು ಮೈಲಿ ಪ್ರಯಾಣ ಮಾಡಿ ಧರ್ಮ ಕ್ಷೇತ್ರದಲ್ಲಿ ಸೇರುವರು. ಒಂದೊಂದು ಸಂಜೆ ಒಂದೊಂದು ಗುಂಪಾಗಿ, ಸಾಧಕರು, ಸಾಧುಗಳು, ಡಾಕ್ಟರುಗಳು, ಲಾಯರುಗಳು, ಪ್ರಿನ್ಸಿಪಾಲರು, ರೊಟೇರಿಯನ್ನರು, "ಸಿಂಹ"ಗಳು. ಅವರ ಸಮ್ಮುಖದಲ್ಲಿ ಕುಳಿತು ಸಂದೇಶ ಪಾನ ಮಾಡಿದರು.

ಜಪಮಾಲೆಯ ಅವಶ್ಯಕತೆ, ೧೦೮ ಎಂಬುದರ ಅಂತರಾರ್ಥ, ಅದನ್ನು ಹಿಡಿದು ಮಣಿಗಳನ್ನುರುಳಿಸುವ ವಿಧಾನ, ಮುಂತಾದವುಗಳನ್ನು ಸಾಧಕರು ಕಲಿತರು. ರೊಟೇರಿಯನ್ನರಿಗೆ ಅವರು ಭಾರತೀಯ ಸಂಸ್ಕೃತಿಯ ಮಹತ್ವವನ್ನು ವಿವರಿಸಿದರು. "ನಿಮ್ಮ ಕಣ್ಣಿಂದ ನೋಡಿ ಅಮೆರಿಕನ್ ಕಣ್ಣುಗಳನ್ನು ಧರಿಸಬೇಡಿ. ನಿಮ್ಮ ಕಿವಿಗಳಿಂದಲೇ ಕೇಳಿ. ಅಮೆರಿಕನ್ ಕಿವಿಗಳನ್ನು

ತಲೆಗೆ ಸಿಕ್ಕಿಸಿಕೊಂಡು, ಅವುಗಳಿಗೆ ಹಿತವಾದುದನ್ನೇ ಶ್ರವಣ ಮಾಡಬೇಡಿ. ನಿಮ್ಮ ಮೆದುಳನ್ನು ಮಾರಿ, ಅಮೆರಿಕನ್ ಮೆದುಳನ್ನು ಬುರುಡೆಯೊಳಕ್ಕೆ ಸೇರಿಸಬೇಡಿ. ಭಾರತೀಯರಾಗಿಯೇ ಬಾಳಿ ಬದುಕಿ, ಭಾಗ್ಯವಂತರಾಗಿ ಬಯಲಾಗೋಣ" - ಎಂದರು. ಹವಾಮಾನ, ಸಸ್ಯ ಸಂಪತ್ತು, ಭಾಷಾ ವೈಶಿಷ್ಟ್ಯ, ನೆರೆಹೊರೆ, ಚರಿತ್ರೆಯ ಘಟನೆಗಳು - ಇವೆಲ್ಲವೂ ಜನತೆಯ ಇತಿಮಿತಿ ಗತಿಗಳನ್ನು ನಿರ್ಣಯಿಸುತ್ತವೆ. ಅನುಕರಣದಿಂದ ಅಳಿವೇ ಸಾಧ್ಯ ಎಂದರು. ಉಪಾಧ್ಯಾಯರನ್ನು ಎಚ್ಚರಿಸುತ್ತ, "ಶಾಂತಿ ಸಮಾಧಾನಗಳ ಸೌಧ, ಧೈರ್ಯ ಸ್ಥೈರ್ಯಗಳ ಉಗಮ ಆಧ್ಯಾತ್ಮಿಕ ಸಾಧನೆ. ಅದನ್ನವಲಂಬಿಸಿ ನೀವು ಉತ್ತಮ ಆದರ್ಶ ಜೀವಿಗಳಾಗಿ, ವಿದ್ಯಾರ್ಥಿಗಳಿಗೂ, ಅವರ ಮೂಲಕ ಅವರ ತಂದೆ ತಾಯಿಗಳಿಗೂ ಮಾರ್ಗದರ್ಶಕರಾಗಬೇಕು" - ಎಂದರು.

ಇಟ್ಟಿಗೆ ಗಾರೆಯ ಒಂದು ಜ್ಞಾನವಾಹಿನಿ, ಧರ್ಮಕ್ಷೇತ್ರ, "ಸತ್ಯದೀಪ" ಎಂಬ ಅಲ್ಲಿನ ಪ್ರಾರ್ಥನಾ ಮಂದಿರದ ಹೆಬ್ಬಾಗಿಲು, ಎಲ್ಲ ಮತಗಳಿಗೂ ಜೀವನವೆಂಬ ಕುರು ಕ್ಷೇತ್ರವನ್ನು ಧರ್ಮಕ್ಷೇತ್ರವಾಗಿಸುವ ಸುಲಭ ವಿಧಾನಗಳು, ಎಂಬ ತತ್ತ್ವವನ್ನು ಕುರುಹು ತೋರಿ ಕಲಿಸುತ್ತವೆ. ಮಂದಿರದಲ್ಲಿ ಅಖಂಡ ಜ್ಯೋತಿ ಬೆಳಗುತ್ತದೆ. ತಮಸೋಮಾ ಜ್ಯೋತಿರ್ಗಮಯ, ಎಂಬ ಕರುಳಿನ ಕೂಗಿಗೆ ಓಗೊಡುವಂತೆ. ಅದರ ಎಡಬಲಗಳಲ್ಲಿ ಪಂಚಭೂತಗಳ ಬಿಡಿಬಿಡಿ ಚಿತ್ರಗಳು; ಸತ್ಯ, ಧರ್ಮ, ಶಾಂತಿ, ಪ್ರೇಮ, ಅಹಿಂಸೆಗಳ ಪ್ರತೀಕೆಗಳು. ಆತ್ಮ ರಾಮಾಯಣ, ಆತ್ಮ ಭಾರತ, ಎಂಬ ಅರ್ಥಗರ್ಭಿತ ವರ್ಣ ಚಿತ್ರಗಳು - ನಿಂತು ನೋಡಿದರೆ, ನೆಲೆಯರಿತು ನಲಿಯಬಹುದಾದ ಉಪನಿಷದುಪಕರಣಗಳು. ವಾರ್ಷಿಕೋತ್ಸವದ ದಿನ, ಬಾಬಾ ಉಪದೇಶಿಸಿದ್ದೂ ಇದನ್ನೇ: "ದೇಹವೇ ಕ್ಷೇತ್ರ ಅದನ್ನು ಧರ್ಮಕ್ಷೇತ್ರವಾಗಿಸಬೇಕೆಂಬುದೇ ದಾಗ. ಕಾಮ, ಕ್ರೋಧ, ಲೋಭ, ಇವು ಮೂರನ್ನೂ ನೀಗಿಸಲು ಪ್ರಯತ್ನಿಸಿದರೆ ಸಾಕು. ಕೃಷ್ಣನೇ ಸಾರಥಿಯಾಗಿ ಗೀತೋಪದೇಶ ಮಾಡಿ, ಮೋಹವನ್ನು ಅಳಿಸಿ, ನಿಜವನ್ನು ತಿಳಿಸಿ ಉಳಿಸುತ್ತಾನೆ".

೧೫ನೆ ತಾ|| ಬಾಬಾ ವಿಮಾನದಲ್ಲಿ ಗುಜರಾತದ ರಾಜಧಾನಿ ಅಹಮದಾಬಾದಿಗೆ ವಿಜಯ ಮಾಡಿದರು. ಅವರನ್ನು ಸ್ವಾಗತಿಸಿದ ರಾಜ್ಯಪಾಲ, ಮುಖ್ಯ ನ್ಯಾಯಾಧಿಪತಿ, ಮುಖ್ಯಮಂತ್ರಿ, ಇತರ ಮಂತ್ರಿಗಳು, ಇವರಿಗೆಲ್ಲ ಅವರ ಸರಳ ಸ್ವಭಾವ, ಸುಲಭಪ್ರಿಯತೆ, ಸುಂದರ ಸಂಭಾಷಣೆ, ಸರ್ವಜನ ಸಮಾನ ಪ್ರೇಮಗಳ ಅರಿವಾಯಿತು. ಸಂಜೆ ನಡೆದ ಮಹಾ ಸಭೆಯಲ್ಲಿ, ಎರಡು ಲಕ್ಷಕ್ಕೂ ಹೆಚ್ಚಾಗಿ ಜನ ಹಾಜರಿದ್ದರು. ತ್ಯಾಗದಿಂದ ಜಗದ ಜಂಜಡವನ್ನು ದೂರ ಮಾಡಿ, ಯೋಗದಿಂದ ಜಗದೀಶ್ವರನ ಸಾಮೀಪ್ಯ ಪಡೆಯಬೇಕೆಂದು ಬಾಬಾ ಅವರಿಗೆ ಹೇಳಿದರು. "ನೀವು ಅನುಸರಿಸುತ್ತಿರುವ ಸಾಧನಾ ಮಾರ್ಗದಲ್ಲಿ ನಿಮಗೆ ಜಯವಾಗಲಿ. ನೀವು ಯಾವ ಮಾರ್ಗವನ್ನೂ ಇಂದಿನವರೆಗೆ ಆಶ್ರಯಿಸಿಲ್ಲವೆಂದರೆ, ಅದು ತೀರಾ ಶೋಚನೀಯ. ದೇಹ ಪುಷ್ಟಿಗೆ ಆಹಾರ, ಸೇವೆ; ಮನಸ್ತುಷ್ಟಿಗೆ ಆಹಾರ, ಸಾಧನೆ.

ಇಂದೇ ತೊಡಗಿರಿ. ಪ್ರಥಮ ಪಾಠ - ನಾಮಸ್ಮರಣೆ, ತಂದೆ ತಾಯಂದಿರ ಶುಶ್ರೂಷೆ, ಹಿರಿಯರನ್ನು ಗೌರವಿಸುವುದು, ದೀನದಲಿತರ ಸೇವೆ. ಎಲ್ಲರಲ್ಲಿಯೂ ಈಶ್ವರನನ್ನು ಕಂಡು ನಲಿಯಿರಿ. ಪ್ರೇಮ ಕುಸುಮಗಳಿಂದ ಎಲ್ಲರಲ್ಲೂ ಅಡಗಿರುವ ಈಶ್ವರನನ್ನುಅರ್ಚಿಸಿ". ಎಂದರು. ಗುಜರಾತ ತನ್ನ ಹೃದಯ ಪೀಠದಲ್ಲಿ ಆಗಲೇ ಸಾಯಿನಾಥನನ್ನು ಪ್ರತಿಷ್ಠಿಸಿ ಪೂಜಿಸಲು ತೊಡಗಿತ್ತು. ಸಾವಿರಾರು ಮನೆಗಳಲ್ಲಿ ಸಾಯಿ ದೇವ, ತನ್ನ ಕುರುಹುಗಳನ್ನು ತೋರಿ ಭಕ್ತರನ್ನಾಂದಗೊಳಿಸುತ್ತಿದ್ದ. ಅಹಮದಾಬಾದಿಗೆ ಭೇಟಿ ಕೊಟ್ಟದ್ದು, ಅಲ್ಲಿ ಅವರು ಗೈದ ಪಾಂಚ ಜನ್ಯ ಘೋಷ ಇವೆರಡೂ ಜನತೆಯನ್ನು ಮತ್ತಷ್ಟು ಉತ್ಸಾಹಗೊಳಿಸಿದುವು.

ಮಹಾರಾಷ್ಟ್ರ ರಾಜ್ಯದ ಪ್ರಶಾಂತಿ ವಿದ್ವನ್ ಮಹಾಸಭೆಯವರು, ಮಂತ್ರಿ ಸಾವಂತ್‌ರವರ ಬಂಗಲೆಯಲ್ಲಿ ಪ್ರತ್ಯೇಕ ಸಮಾವೇಶವೊಂದನ್ನೇರ್ಪಡಿಸಿ, ಶ್ರೀಯವರನ್ನು ಬರಮಾಡಿಕೊಂಡರು. "ನವ ಕಾಲ್" ಎಂಬ ಗುಜರಾತಿ ದಿನಪತ್ರಿಕೆಯ ಸಂಪಾದಕರೂ ಅಲ್ಲಿಗೆ ಆಗಮಿಸಿದ್ದರು. "ಚಮತ್ಕಾರ"ಗಳನ್ನು ಕುರಿತ ಒಂದು ಲೇಖನ ಮಾಲೆ ಆ ಪತ್ರಿಕೆಯಲ್ಲಿ ಆಗ ಪ್ರಕಟವಾಗುತ್ತಿತ್ತು. ಆದ್ದರಿಂದ ಅವರು ಬಾಬಾ ಅವರನ್ನು ಆ ವಿಷಯವಾಗಿ ಹೆಚ್ಚು ಕೇಳಿದರು. ಶ್ರೀಯವರು ಕೂಡ, ಸಂತೋಷದಿಂದ ಸುಮುಖರಾಗಿಯೇ ಸೂಕ್ತ ಸಮಾಧಾನಗಳನ್ನು ದಯಪಾಲಿಸಿದರು.

ಚಮತ್ಕಾರವಿಲ್ಲದೆ ನಮಸ್ಕಾರವಿಲ್ಲ, ಎಂಬುದೊಂದು ಗಾದೆ. ಪವಾಡವೆಂದರೆ, ಅಜ್ಞರ ಕಲ್ಪನೆಗತೀತವಾದದ್ದು; ಸಾಮಾನ್ಯರಿಗೆ ಸಾಧ್ಯವಾದದ್ದು; ಕಾರಣ ತಿಳಿಯದ ಕಾರ್ಯ ಎಂಬುದೇ ಅರ್ಥ. ಅರೆ ಬೆಂದ ಸಾಧಕರೂ, ಅಸೂಯಪರರಾದ ಹಲವು "ಆನಂದ"ರೂ, ಬಾಬಾರವರ ದೈವೀ ಕೃತ್ಯಗಳನ್ನು ಹಳಿದು, ತಾವು ಅವುಗಳ ತಂಟೆಗೆ ಎಂದೂ ಹೋಗುವುದಿಲ್ಲವೆಂದು ಜಂಬ ಕೊಚ್ಚಿಕೊಳ್ಳುತ್ತಾರೆ. ಒಬ್ಬರಂತೂ, "ಪವಾಡಗಳನ್ನು ಯಾರೇ ಮಾಡಲಿ, ಏಸು ಕ್ರಿಸ್ತನಾಗಲಿ, ಕೃಷ್ಣನಾಗಲಿ, ಸಾಯಿಬಾಬಾನಾಗಲಿ, ನಾನು ಹೇಸಿಗೆ ಕೃತ್ಯಗಳೆಂದೇ ತಿಳಿಯುತ್ತೇನೆ. ಬುದ್ಧಿವಂತರೆಲ್ಲರ ಅಭಿಪ್ರಾಯವೂ ಇದೇ" - ಎಂದು ಬರೆದಿದ್ದಾರೆ. ಅಂದರೆ ಶುಕಮಹರ್ಷಿಗೆ ಬುದ್ಧಿ ಇಲ್ಲವೆಂದ ಹಾಗಾಯಿತು. ಕಣ್ಣಿಗೆ ಮಂಜು ಕವಿದ ಈ ಮಹಾನುಭಾವ, "ಪ್ರಕೃತಿ ನಿಯಮಗಳಿಗೆ ವಿರುದ್ಧವಾಗಿ ವರ್ತಿಸುವುದು ಮಹಾ ಪಾತಕ" - ಎಂದೂ ಬರೆದಿದ್ದಾರೆ.

ಈ ವಿರುದ್ಧ ಕಾರ್ಯವನ್ನು ಕುರಿತು ಡಾ| ಸೂರಿ ಭಗವಂತಂ, ೧೯೬೭ರಲ್ಲಿ ಮದ್ರಾಸ್ ನಗರದಲ್ಲಿ ನಡೆದ ಒಂದು ಸಭೆಯನ್ನುದ್ದೇಶಿಸಿ, ಹೀಗೆ ಹೇಳುತ್ತಾರೆ: "ಪ್ರೊ| ಗೋಕಾಕರು ನಿನ್ನೆ ಸಂಜೆ ನಿಮ್ಮೆದುರು ತಮ್ಮ ಒಂದು ಕವನವನ್ನೋದಿದರು. ಬಾಬಾರವರು "ಒಲವಿನ ಬಿರುಗಾಳಿ", "ಕರುಣೆಯ ಕಾರ್ಮುಗಿಲು" - ಎಂದೆಲ್ಲ ವಿವರಿಸಿದರು ಅದೆಲ್ಲ ಚಂದ. ನಾನೊಪ್ಪಿದೆ. ಆದರೆ, "ಭೌತಶಾಸ್ತ್ರ (ಫಿಜಿಕ್ಸ್), ರಸಾಯನಶಾಸ್ತ್ರ (ಕೆಮಿಸ್ಟ್ರಿ), ಮುಂತಾದವುಗಳನ್ನು ಲೆಕ್ಕಿಸದೆ, ಅವುಗಳನ್ನು ನಿರ್ಲಕ್ಷಿಸಿ ತನ್ನ ಸಂಕಲ್ಪವನ್ನು ನೆರವೇರಿಸುತ್ತಾರೆ" - ಎಂದರು. ಈ ಮಾತು ನನ್ನ ಸೈನ್ಸಿಗೆ ಸಂಬಂಧಿಸಿದ್ದು. ಅದರ ವಿಷಯವಾಗಿ ನನಗೆ ಕೊಂಚ ಹೇಳುವುದಿದೆ

ಆ ಎರಡು ಶಾಸ್ತ್ರಗಳನ್ನೂ ಚಿಕ್ಕಂದಿನಲ್ಲಿ ಕಲಿತೆ. ಅನೇಕ ದಶಕಗಳು ಕಲಿಸಿ, ಕಲಿಸುವಾಗ ಮತ್ತೆ ಕಲಿತೆ. ಆ ಅನುಭವದ ಮೇಲೆ ಇಷ್ಟು ಹೇಳಬಲ್ಲೆ. ಆ ಶಾಸ್ತ್ರ ನಿಯಮಗಳಿಗೆ ವಿರುದ್ಧ, ಪ್ರಪಂಚದಲ್ಲಿ ಯಾರೂ ಏನೂ ಮಾಡಲಾರರು".

ಇಷ್ಟು ಹೇಳಿದ ಡಾ| ಭಗವಂತಂ, ಮತ್ತೆ ಮುಂದುವರಿದು, ಬಾಬಾ ಅವರ ಪವಾಡಗಳನ್ನು ಶಾಸ್ತ್ರ ರೀತ್ಯಾ ಸಮರ್ಥಿಸಿದರು. ಅವರದು ತುಂಬು ಜ್ಞಾನ.

ಆದರೆ, ಅರೆಬೆಂದ ಅರಿವು ಪಡೆದ ಮಹಾನುಭಾವ ಏನು ಬರೆಯುತ್ತಾರೆ?" ಪ್ರಕೃತಿ ನಿಯಮಗಳಿಗೆ ವಿರುದ್ಧವಾದ ಕಾರ್ಯ ಮಾಡಿದ್ದರಿಂದ, ಕೃಷ್ಣ ಮೋಸದಿಂದ ಕಾಲವಾದ; ಏಸು ನೋವು ತಿಂದು ಸತ್ತ." ಸಾಯಿಬಾಬಾ ಅವರೂ ಇದರಿಂದ ಎಚ್ಚರಗೊಳ್ಳಲಿ, ಎಂಬುದು ಅವರ ಉಪದೇಶ!

ನಿಯಮ ವಿರುದ್ಧ ಶಿಕ್ಷೆ, ಪಾತಕ! - ಎಂಬ ಮಾತುಗಳನ್ನು ಡಾ| ಸೂರಿ ಭಗವಂತಂ ಅವರು ಉಪಯೋಗಿಸುವುದಿಲ್ಲ. ಅವರದು ಹಣ್ಣಾದ ಪರಿಜ್ಞಾನ. ಅವರೆಂದರು. "ನನ್ನ ಅನುಭವ ಇಷ್ಟೆ, ಬಾಬಾ ಪ್ರಕೃತಿ ನಿಯಮಗಳನ್ನು ಒಂದೊಂದಾಗಿ ಮುರಿಯುತ್ತಾ ಬಂದರು. ಒಂದೆರಡನ್ನು ನಿಮ್ಮೆದುರು ಹೇಳಲು ಅವರ ಸಮ್ಮತಿ ಪಡೆದಿದ್ದೇನೆ. ನನ್ನ ಅಭಿಪ್ರಾಯಕ್ಕೆ ನೀವು ಬೆಲೆ ಕೊಡಬೇಕಾದರೆ, ನಾನು ಅವನ್ನು ಈಗ ಹೇಳಲೇಬೇಕಾಗಿದೆ. ಅವರು ನಡೆಸಿದ ಒಂದು ಶಸ್ತ್ರಕ್ರಿಯೆಗೆ ನಾನು ಪ್ರತ್ಯಕ್ಷ ಸಾಕ್ಷಿ! ಅದನ್ನು ಮುಗಿಸಿದ ಕೂಡಲೇ ಬಾಬಾ ಅಲ್ಲೇ ಇದ್ದ ನನ್ನ ಮಗನ ಕಡೆ ತಿರುಗಿ, " ಒಂದಿಷ್ಟು ಬ್ಯಾಂಡೇಜ್ ಬಟ್ಟೆ ಬೇಕಾಗಿದೆಯಲ್ಲಾ" - ಎಂದರು. ಶಸ್ತ್ರ ಚಿಕಿತ್ಸೆಗೆ ಬೇಕಾಗಿದ್ದ ಕತ್ತಿ, ಕತ್ತರಿ, ಸೂಜಿ, ಎಲ್ಲವನ್ನೂ ಶೂನ್ಯದಿಂದಲೇ ಕೈಯಾಡಿಸಿ ತರಿಸಿದ ಪುಣ್ಯಾತ್ಮನಿಗೆ, ಬ್ಯಾಂಡೇಜ್ ಬಟ್ಟೆಗೆ ಬರಗಾಲವೆ? - ಎಂದು ನಾನು ಬೆರಗಾದೆ. "ಅದಕ್ಕೇನು ಸ್ವಾಮಿ?" - ಎಂದ ನನ್ನ ಮಗ. "ಅಪ್ಪ ಈ ಸೈನ್ಸ್ ಇನ್‌ಸ್ಟಿಟ್ಯೂಟ್ ಡೈರೆಕ್ಟರಲ್ಲವೆ! ಇಲ್ಲೊಂದು ಆಸ್ಪತ್ರೆ ಇದೆ. ಫೋನ್ ಮಾಡಿ, ಕ್ಷಣದಲ್ಲೇ ತರಿಸುತ್ತೇನೆ" - ಎಂದ. ಬಾಬಾ ಅಂದರು: "ಕ್ಷಣದಲ್ಲೆಂದರೆ, ತುಂಬಾ ಹೊತ್ತಾಗಬಹುದು. ಚಿಂತೆ ಇಲ್ಲ". ಕೂಡಲೇ ಕೈಯಾಡಿಸಿದರು; ಬ್ಯಾಂಡೇಜ್ ಬಟ್ಟೆ ಸಿದ್ಧ!;

"ಗೋಕಾಕರ ಪದ ಪ್ರಯೋಗ ಕುಶಲತೆಗೆ ಮೆಚ್ಚಿದೆನಾದರೂ, ಇವೆಲ್ಲ ಶಾಸ್ತ್ರ ನಿಯಮ ವಿರುದ್ಧ, ಎಂದು ಹೇಳಲು ಹಿಂಜರಿಯುತ್ತೇನೆ. ಬಾಬಾ ಅವುಗಳನ್ನೆದುರಿಸಿ ಸೋಲಿಸುವುದಿಲ್ಲ. ಅವರ ಶಕ್ತಿ ಶಾಸ್ತ್ರಗಳಿಗತೀತ. ನಿಯಮಗಳೆಲ್ಲ ಅವರ ಸಂಕಲ್ಪದೆದುರು ಅರ್ಥಹೀನ. ಬಾಬಾ ನನ್ನಂತೆ ನಿಮ್ಮಂತೆ ಆದರೆ, ಇದು ಸಾಧ್ಯವೆ? ಇಲ್ಲ. ಆದ್ದರಿಂದಲೇ ನಾನು ಈ ನಿರ್ಧಾರಕ್ಕೆ ಬಂದಿರುವುದು: ಬಾಬಾ ಸೈನ್ಸಿಸ ನಿಯಮಗಳಿಗೆಲ್ಲ ಅತೀತ. ಇದೊಂದು ಹೊಸ ನಿಯಮ. ಅವರು ಅವಾಂಗ್ಮಾನಸ ಗೋಚರರಾದ ಒಂದು ಶಕ್ತಿ, ದಿವ್ಯ ವ್ಯಕ್ತಿ".

ಶಾಸ್ತ್ರ ನಿಯಮಗಳನ್ನು ಉಲ್ಲಂಘಿಸಿದ ಮಹಾಪಾಪಕ್ಕೆ ಪ್ರಾಯಶ್ಚಿತ್ತವಾಗಿ, ಏಸು ಕೃಷ್ಣ ಮುಂತಾದವರು, ದೈಹಿಕ ಯಾತನೆ ಅನುಭವಿಸುಸಬೇಕಾಯಿತೆಂಬ ಉಲ್ಲೇಖವನ್ನು ಬಾಬಾ ಅವರೇ ಒಮ್ಮೆ ಪ್ರಸ್ತಾಪಿಸಿದರು! "ಹಿರಿಯರು ಹಲವು ನಿಮ್ಮನ್ನು ಭ್ರಾಂತಿಗೊಳಿಸುತ್ತಿರುವರು. ಕೃಷ್ಣನು ಲೀಲಾಜಾಲವಾಗಿ ಪವಾಡಗಳನ್ನು ಮೆರೆದನಾದ್ದರಿಂದ, ಬೇಡನ ಬಾಣಕ್ಕೆ ತುತ್ತಾದ; ಏಸು ಕ್ರಿಸ್ತನು ಸತ್ತವರನ್ನು ಬದುಕಿಸಿದ, ಆಹಾರವನ್ನು ಅಕ್ಷಯ ಮಾಡಿದ, ಕುಷ್ಠವನ್ನು ತೊಡೆದ - ಆದ್ದರಿಂದ ಪ್ರತೀಕಾರವಾಗಿ ಸಿಲುಬೆಯೇರಬೇಕಾಗಿ ಬಂತು, ಎನ್ನುತ್ತಾರೆ. ನಾನು ಸೈನ್ಸಿಗೆ ಬಗ್ಗಿ ಬಾಳುತ್ತಿಲ್ಲ. ಆದ್ದರಿಂದ ನನಗೂ ಇಂಥದ್ದೇ ಕಾದಿದೆ - ಎಂಬುದು ಇವರುಂಟು ಮಾಡಲು ಯತ್ನಿಸುವ ಭಯ! ಇವೆಲ್ಲ ಅಜ್ಞಾನದ, ಅಸೂಯೆಯ, ಅಜ್ಞಾನದ ಕುರುಹುಗಳು. ಈ ಮಹಿಮೆಯನ್ನೂ, ಮಹತ್ವದ ಆಳವನ್ನೂ ಅವರರಿಯರು".

೧೯೭೦ ಕ್ರಿಸ್‌ಮಸ್ ಹಬ್ಬ. ಆ ದಿನ ಬೊಂಬಾಯಿಯಲ್ಲಿ ಒಂದು ಭಾರೀ ಸಭೆ ಏರ್ಪಾಡಾಗಿತ್ತು. ಬಾಬಾ ಅದನ್ನುದ್ದೇಶಿಸಿ ಹೀಗೆಂದರು: "ನನ್ನ ತೇಜಸ್ಸಿಗೆ ಮನ ಕೊಟ್ಟ, ನನ್ನ ಕೀರ್ತಿಯಿಂದ ಮನ ನೊಂದ ಜನರನೇಕ. ನನ್ನ ನಡೆನುಡಿಯೊಂದರಲ್ಲೂ ಪ್ರಕಟವಾಗುವ ದೈವತ್ವವನ್ನು ಸಹಿಸಲಾರದ ಅಲ್ಪಮನಸ್ಕರೂ ಉಂಟು. ಅವರೆಲ್ಲ ನನ್ನನ್ನು ಮಾಟಗಾರ, ಮಂತ್ರಜ್ಞ, ಸಿದ್ಧ, ಮಾಂತ್ರಿಕ, ಮೆಸ್ಮರಿಸ್ಟ್ ಎಂದು ಗುರ್ತಿಸಿ ಸಮಾಧಾನ ಹೊಂದುತ್ತಾರೆ. ಅವರಿಗೆ ಅನುಭವ ಕಡಿಮೆ; ಆಧ್ಯಾತ್ಮಿಕದಲ್ಲಿ ಪ್ರವೇಶವೇ ಇಲ್ಲ. ದೊಡ್ಡದನ್ನು ತುಂಬಿಕೊಳ್ಳಲು ಹೃದಯ ವೈಶಾಲ್ಯ ಸಾಲದು. ಆದರೆ ನಾನು ಹೇಳುತ್ತೇನೆ, ಕೇಳಿ. ನನ್ನದು ಮಂತ್ರವೂ ಅಲ್ಲ, ಮೆಸ್ಮರಿಸಮೂ ಅಲ್ಲ. ನನ್ನದು ಅಪ್ಪಟ ದಿವ್ಯ ಶಕ್ತಿ. ಸಂಕುಚಿತ ಬುದ್ಧಿಗೆ, ಕಲುಷಿತ ಮನಸ್ಸಿಗೆ ಅರ್ಥವಾಗದು. ಅದಕ್ಕೆ ಬೇಕಾದ ದಾರ್ಢ್ಯ ಅವರಲಿಲ್ಲ. ಈಶ್ವರನಿಗೆಲ್ಲವೂ ಸಾಧ್ಯ. ಎಲ್ಲ ಶಕ್ತಿಗಳೂ ಅವನಿಗೆ ಕರಗತ. ಈ ದೇಹ ಮಾನವ ದೇಹ ಸರಿ. ಆದರೆ ಇದರೊಳಗಿನ ಶಕ್ತಿ ಅಪಾರ, ಅಖಂಡ, ದೇಶಕಾಲಾಬಾಧಿತ".

"ನವಕಾಲ" ಸಂಪಾದಕರು ಬಾಬಾ ಸಂಗಡ ಸಂಭಾಷಿಸುತ್ತಿದ್ದಾಗ, ಶ್ರೀ ಭಾವೆ ಎಂಬುವವರೂ ಅಲ್ಲಿ ಇದ್ದರು. ಅದೇ ಪತ್ರಿಕೆಯಲ್ಲಿ ಭಾರ್ದೆ ಅವರು ಕೆಲ ದಿನಗಳ ಹಿಂದೆ ಪವಾಡಗಳನ್ನು ಕುರಿತು ಲೇಖನ ಬರೆದಿದ್ದರು. ಇಷ್ಟು ಸಹಜವಾಗಿ, ಸಲೀಸಾಗಿ, ಸಂಕಲ್ಪಿಸಿದ ಕ್ಷಣದಲ್ಲೇ, ತಮಗೆ ಗೊತ್ತಿಲ್ಲದೆಯೇ ಎಂದು ಹೇಳಿದರೂ ಹೇಳಬಹುದು, ಅಷ್ಟು ಸ್ವಾಭಾವಿಕವಾಗಿ ಪವಾಡಗಳನ್ನು ಪತ್ಯಕ್ಷೀಕರಿಸುವವರನ್ನು ನಾನೆಂದೂ ಕಂಡಿಲ್ಲ. ಸತ್ಯಸಾಯಿ ಬಾಬಾ ಅವರು ಪಂಡರೀಕ್ಷೇತ್ರದಲ್ಲಿ, ರುಕ್ಮಿಣೀ ದೇವಿಯ ವಿಗ್ರಹದ ಮುಂದೆ ನಿಂತು "ಪಾಪ! ಮುಖ್ಯವಾದ ಒಡವೆಯೊಂದು ದೇವಿಯ ಕಂಠದಲ್ಲಿಲ್ಲ" - ಎನ್ನುತ್ತ ಕೈ ಆಡಿಸಿದರು. ಚಿನ್ನದ ಮಂಗಳ ಸೂತ್ರ ಸೃಷ್ಟಿ ಆಯಿತು. ಅದನ್ನವರು ವಿಗ್ರಹದ ಕತ್ತಿಗೆ ಹಾಕಿದರು. ಇವತ್ತಿಗೂ ಅದು ಅಲ್ಲೇ ಕಂಗೊಳಿಸುತ್ತಿದೆ".

ಸಂಭಾಷಣೆಯ ನಡುವೆ, ಭಾರ್ದೆ ಅವರೂ ಪ್ರಶ್ನಿಸಿದರು. "ಸ್ವಾಮಿ! ಹೀಗೆ ಪದಾರ್ಥಗಳನ್ನು ಸೃಷ್ಟಿಸುತ್ತೀರಲ್ಲಾ! ಈ ದಿವ್ಯ ಶಕ್ತಿ ಎಷ್ಟು ಕಾಲ ತಮ್ಮಲ್ಲಿರುತ್ತೆ?" "ಅದಕ್ಕೆ ಯಾವ ಮಿತಿಯೂ ಇಲ್ಲ. ಸಮುದ್ರದಂತೆ ಅದು ಅಕ್ಷಯ! ಯಾರಾದರೂ ಯಾವಾಗಲೂ ಎಲ್ಲಿದ್ದರೂ ಎಷ್ಟು ಬೇಕೋ ಅಷ್ಟು ಅದರಿಂದ ಪಡೆಯಬಹುದು" - ಎಂದರು ಬಾಬಾ.

ಆಗ, ಮಹಾರಾಷ್ಟ್ರದ ಗೃಹಮಂತ್ರಿ ಪಾಂಡುರಂಗ ಸಾವಂತ್ ಅವರು, ಅನಾದಿ ಕಾಲದಿಂದಲೂ ಅವತಾರಗಳ ಬೆನ್ನು ಹತ್ತಿ ಬರುತ್ತಿರುವ ಒಂದು ಪ್ರಶ್ನೆಯನ್ನು ಕೇಳಲು ಇದೇ ತಕ್ಕ ಸಮಯ ಎಂದು ಭಾವಿಸಿ, "ಹಾಗಾದರೆ, ನೀವೇಕೆ ಜಗತ್ತಿನಿಂದ ದಾರಿದ್ರ್ಯವನ್ನೂ, ದುಃಖವನ್ನೂ, ಒಂದೇ ಕ್ಷಣದಲ್ಲಿ ತೊಡೆದು ಹಾಕಬಾರದು?" - ಎಂದರು.

"ನವ ಕಾಲ" ಪತ್ರಿಕೆಯಲ್ಲಿ, ಈ ಸಂಭವವನ್ನು ವಿವರಿಸುತ್ತ, ಸಂಪಾದಕರು ಬರೆಯುತ್ತಾರೆ: "ಬಾಬಾ ಗಟ್ಟಿಯಾಗಿ ನಕ್ಕರು. ಬಡತನವೆಂದರೆ, ಆಸ್ತಿ ಇಲ್ಲದಿರುವುದು. ವಸ್ತುಗಳ ಅಭಾವ, ಎಂದು ಭಾವಿಸುತ್ತೀರಾ? ಪದಾರ್ಥಗಳನ್ನು ತುಂಬಾ ಕೊಟ್ಟರೆ, ಬಡತನ ಹೋಗುತ್ತದೆಯೆ? ದುಃಖ ಹೋದರೆ, ಸುಖವೂ ಹೋಗುತ್ತದೆ, ತಿಳಿಯದೆ? ಶ್ರೀಮಂತರಿಗೆ ಸುಖವುಂಟೆ? ಬಡವರಿಗೆ ಶಾಂತಿ ಇಲ್ಲವೆ? ಮನಶ್ಶಾಂತಿ, ಮನಸ್ಥೈರ್ಯ ನೀಡುವುದೇ ನನ್ನ ಕೆಲಸ. ಭಕ್ತಿ ಶ್ರದ್ಧೆಗಳನ್ನು ಬೆಳೆಸುವುದಕ್ಕಾಗಿಯೇ ನಾನು ಕೆಲವರಿಗೆ ವಸ್ತುಗಳನ್ನು ಸೃಷ್ಟಿಸಿಕೊಡುವುದು".

ಅಹುದು? ಬಾಬಾ ಅವರು ಸೃಷ್ಟಿಸಿ, ಅವರ ಉಂಗುರದ ಬೆರಳಲ್ಲಿ ತಾವೇ ಹಾಕಿದ (ಅಳತೆ ಸರಿಯಾಗಿತ್ತು!) ವಜ್ರದ ಉಂಗುರವನ್ನು ನನಗೆ ತೋರಿಸುತ್ತ, ಡುವಾ ಎಂಬ ಕಲ್ಕತ್ತಾದ ಭಾರೀ ಶ್ರೀಮಂತರೊಬ್ಬರು, "ಕಸ್ತೂರಿಗಳೇ, ಈ ವಜ್ರದುಂಗುರ ನನಗೆ ನಿಜಕ್ಕೂ ಒಂದು ಮಂತ್ರ ದೀಕ್ಷೆ; ಬಾಬಾ ಉಪದೇಶಿಸಿದ ಒಂದು ಉಪನಿಷತ್ತು. ಇದನ್ನು ನನ್ನ ಬೆರಳಿಗೆ ತಗಲಿಸಿದಾಗ, ಬಾಬಾ ಏನು ಹೇಳಿದರು ಗೊತ್ತೆ? ಇದು ಡೈ ಮಂಡ್ ಅಲ್ಲ, ಹುಷಾರ್, ಡೈ ಮೈಂಡ್! ನಿನ್ನ ಮನಸ್ಸು ನಿನ್ನನ್ನು ಹಳ್ಳ ಕೊಳ್ಳಗಳಿಗೆ ಎಳೆಯುತ್ತಿದೆ; ಕತ್ತಲೆ ಕೆಸರುಗಳಲ್ಲಿ ಬೀಳಿಸುತ್ತಿದೆ. ಮನೋನಾಶನ ಮಾಡುವ (ಡೈ ಮೈಂಡ್) ಸಾಧನೆಗಳನ್ನನುಸರಿಸು" - ಎಂದರು.

ಸಾವಂತರಿಗೆ ಬಾಬಾ ಉತ್ತರಿಸಿದರು: "ರೋಗಿಯೊಬ್ಬ, ನನ್ನ ಹತ್ತಿರ ಬರುತ್ತಾನೆ. ಅವನಿಗೆ ನಾನು ವಿಭೂತಿ ಸೃಷ್ಟಿಸಿ ಕೊಡುತ್ತೇನೆ. ಅಥವಾ, ಬೇರೆ ಯಾವುದಾದರೂ ಒಂದು ವಸ್ತು! ದಿವ್ಯ ಶಕ್ತಿ ಒಂದಿದೆ ಎಂದು ಆತನಿಗೆ ಸ್ಪಷ್ಟ ತಿಳಿಯುತ್ತದೆ. ಅವನ ಶ್ರದ್ಧೆ ಬಲಿಯುತ್ತದೆ. ದೈವಭಕ್ತಿಯನ್ನು ಉಂಟು ಮಾಡುವುದರಲ್ಲಿ ಇದೂ ಒಂದು ಸಾಧನ". "ನವ ಕಾಲ" ಸಂಪಾದಕರು, "ಸ್ವಾಮೀ ಈ ಪವಾಡಗಳನ್ನು ಯಾವ ಶಕ್ತಿಯಿಂದ ಸಾಧಿಸುತ್ತಿದ್ದೀರಿ?" ಬಾಬಾ, "ಪವಾಡ! ಚಮತ್ಕಾರ! ಎಂಬ ಮಾತುಗಳೇ ಇಡಕ್ಕನ್ನಯಿಸುವುದಿಲ್ಲ. ನಮಸ್ಕಾರಕ್ಕಾಗಿ

ಚಮತ್ಕಾರ ಅಂತಾರೆ; ಅದೂ ತಪ್ಪು. ಇದು ಪ್ರದರ್ಶನವಲ್ಲ; ನಿದರ್ಶನ. ಮಾಡುವುದಲ್ಲ ಆಗುವುದು. ಕೃತ್ರಿಮವಲ್ಲ, ಸಹಜ. ದಿವ್ಯ ಶಕ್ತಿಯ ಚರ್ಯೆಯೆಲ್ಲ ದಿವ್ಯ. ಮನದಲ್ಲಿ ಮೂಡಿ ಕೂಡಲೇ ಕರದಲ್ಲಿ ವಸ್ತು, ಅಥವಾ ನೆನೆದಾಗ ನೆನೆದದ್ದು ನೆನೆದ ಕಡೆ".

"ನೀವು ನಮಗೆ ಕೊಡುವ ವಸ್ತುಗಳು ಹೊಸದಾಗಿ ಸೃಷ್ಟಿಯಾಗುತ್ತವೋ, ಅಥವಾ ತಯಾರಾಗಿ ಎಲ್ಲೋ ಇರುವುದನ್ನು ಅಲ್ಲಿಂದ ನೀವು ನಿಮ್ಮ ಶಕ್ತಿಯಿಂದ ತರಿಸಿ ಕೊಡುತ್ತೀರೋ, ಹೇಗೆ"? - ಎಂದು ಸಂಪಾದಕರು ಕೇಳಿದರು.

ಇದು ಸಾಮಾನ್ಯವಾಗಿ ಎಲ್ಲರೂ ಕೇಳುವ ಪ್ರಶ್ನೆ. "ಭಾರತೀಯ ವಿದ್ಯಾ ಭವನ ಸಂಸ್ಥಾಪಕರು, ಸುಪ್ರಸಿದ್ಧ ಸಾಹಿತಿ, ರಾಜಕಾರಣಿ, ನ್ಯಾಯವಾದಿ, ರಾಜ್ಯಪಾಲನ ನಿಪುಣ ದಿಟ್ಟತನ ತುಂಬಿದ ದೇಶ ಸೇವಕ, ಶ್ರೀ ಕನ್ಹಾಲಾಲ್, ಎಂ. ಮುನ್ನಿ ಅವರು ಬರೆಯುತ್ತಾರೆ "ನನ್ನ ಕೈ ಯಾವಾಗಲೂ ಗಡ ಗಡನೆ ನಡುಗುವುದನ್ನು ಬಾಬಾ ಗಮನಿಸಿದರು. ತಮ್ಮ ಕುರ್ಚಿಯಿಂದ ಎದ್ದು ನಿಂತು, ಅವರು ನನ್ನ ಅಂಗೈಯನ್ನು ತಮ್ಮ ಕೈಗೆ ತೆಗೆದುಕೊಂಡರು. ಅವರ ಕೈಯಿಂದ ಉದುರಿದ ವಿಭೂತಿಯನ್ನು ನನ್ನ ಅಂಗೈ ತುಂಬ ಸವರಿದರು. ಅನಂತರ ಒಂದೆರಡು ಸಲ ಬಲಗೈಯನ್ನು ಬೀಸಿದರು. ಅದರಲ್ಲಿ ಒಂದು ಉಂಗುರ ಉತ್ಪತ್ತಿ ಆಯಿತು. ನನ್ನ ಬಲಗೈ ಕಿರು ಬೆರಳಿಗೆ ಅದನ್ನು ಅವರೇ ಇಟ್ಟರು. ಆ ಕ್ಷಣವೇ ಬೆರಳುಗಳನ್ನು ಸಡಿಲ ಮಡಿಸಲು ನನಗೆ ಸಾಧ್ಯವಾಯಿತು. ಕೈ ಕಾಲು ನಡುಕವೂ ನಿಂತಿತು. ಇನ್ನೂ ಕೊಂಚ ವಿಭೂತಿ ಸೃಷ್ಟಿಸಿ, ಅವರು ನನ್ನ ಅಂಗೈ ಮೇಲೆ ಬಳಿದರು. ಉಂಗುರವನ್ನವರು ತಮ್ಮ ಸಿದ್ಧಿಯ ಮೂಲಕ ಸ್ಥಳಾಂತರಿಸಿದರು, ಎಂದುಕೊಂಡೆ. ಆದರೆ ವಿಭೂತಿ! ದಿನವೊಂದಕ್ಕೆ ಹೆಚ್ಚು ಸುಮಾರು ಒಂದು ಪೌಂಡು ವಿಭೂತಿ ಸ್ಥಳಾಂತರಿಸಲು ಸಾಧ್ಯವಿಲ್ಲ. ಅದರ ಸೃಷ್ಟಿ ಹೇಗಾಯಿತು- ಎಂದು ಅಚ್ಚರಿಗೊಂಡೆ".

ಜನ ಜಂಗುಳಿ ಜಾಸ್ತಿಯಾದ ದಿನಗಳಲ್ಲಿ, ಪೌಂಡಿಗಿಂತ ಜಾಸ್ತಿ ವಿಭೂತಿ ಸೃಷ್ಟಿಯಾಗುತ್ತೆ. ಅದು ಒಂದೇ ತರನದಲ್ಲ. ಒರಟು, ಮೃದು, ಪುಡಿ, ವಾಸನೆಯದು, ಐಯೊಡಿನ್‌ವಾಸನೆಯದು - ಎಂಬ ವಿಷಯಗಳು ಮುನಿಯವರಿಗೆ ತಿಳಿಯದು. ಅವರ ಕೈಯಿಂದ ಮಾತ್ರವಲ್ಲ, ಪಾದಗಳಿಂದಲೂ, ಹಣೆಯಿಂದಲೂ, ವಿಭೂತಿ ಉದುರುವುದುಂಟು. ಸಾವಿರಾರು ಮೈಲಿ ದೂರದ ಮನೆಗಳಲ್ಲಿನ ಅವರ ಪಟಗಳಿಂದಲೂ, ತರತರದ ವಿಭೂತಿ ರಾಶಿ ರಾಶಿ ಬೀಳುತ್ತಿದೆ! ಸ್ಥಳಾಂತರಿಸುವುದು, ಎಂದರೆ ಹೇಗೆ? ಅದರ ಕ್ರಮ ಹೇಗೆ? ಆ ಮಾತನ್ನುಪಯೋಗಿಸುವುದರಿಂದ, ಸಮಸ್ಯೆಯನ್ನು ಬಿಡಿಸಿದ ಹಾಗಾಯಿತೆ? ಪಪ್ಪಾ ಶಾಸ್ತ್ರಿಯ ಮಗಳಾಗಿ, ಅಪ್ಪಾ ಶಾಸ್ತ್ರಿಯ ಸೊಸೆಯಾಗಿ, "ಲವಣ" ಅಂದರೆ ಏನು ಅಂತ ನಿನಗೆ ಗೊತ್ತಿಲ್ಲವೆ? ದೊಡ್ಡಮ್ಮ ಸಗಣಿ - ಎಂದು ಒಬ್ಬಳು ಹೆಣ್ಣು ಮಗಳು ವಿವರಿಸಿದ ಹಾಗೆ ಅಷ್ಟೆ. ಉದಾಹರಣೆಗೆ ಹಾವರ್ಡ್ ಮರ್ಫೆಟ್ ಎಂಬ ಮಹಾನುಭಾವ, ತನ್ನ, "ಸಾಯಿಬಾಬಾ

ಪವಾಡ ಪುರುಷ" - ಎಂಬ ಪುಸ್ತಕದಲ್ಲಿ "ಸ್ಥಳಾಂತರಿಸುವುದೆಂದರೆ ಇಷ್ಟೆ: ಪದಾರ್ಥವಿರುವ ಸ್ಥಳದಲ್ಲೇ ಅದನ್ನು ಸೂಕ್ಷ್ಮಾತಿ ಸೂಕ್ಷ್ಮ ಕಣಗಳಾಗಿ ವಿಂಗಡಿಸುವುದು. ಆ ಕಣಗಳನ್ನು ತನ್ನ ಮನೋ ನಿಶ್ಚಯದಿಂದ ಆಧ್ಯಾತ್ಮಿಕ ಶಕ್ತಿಯಿಂದ, ತಾನಿರುವ ಕಡೆಗೆ (ಎಷ್ಟೋ ದೂರದಿಂದಲಾದರೂ) ತರಿಸಿ ಬಿಡುವುದು. ತಕ್ಷಣವೇ ಕಣಗಳನ್ನು ಜೋಡಿಸಿ, ಪೂರ್ವದ ಪದಾರ್ಥವಾಗಿ ಪುನಃ ಘಟಿಸುವುದು." ಎಂತಹ ಸುಲಭ! ಎಷ್ಟು ಸಲೀಸು! ಇದನ್ನು ಪವಾಡ ಎಂದು ಹೇಳುವುದು ಹೇಗೆ? ಲವಣ ಎಂದರೆ ದೊಡ್ಡಮ್ಮ ಸಗಣಿ, ಗೊತ್ತಾಯಿತೆ?

ಹೀಗೆ ವಸ್ತುಗಳನ್ನು ಅವು ಇದ್ದ ಕಡೆ ಪುಡಿ ಮಾಡಿ, ಆ ಪುಡಿಗಳನ್ನು ಗಗನ ಮಾರ್ಗದಿಂದ ಕೊಂಚವೂ ನಷ್ಟವಾಗದಂತೆ, ಅದಲು ಬದಲಾಗದಂತೆ, ಯಾರಿಗೂ ಕಾಣಿಸದಂತೆ ತರಿಸಿ, ಮತ್ತೆ ಆ ಪುಡಿಗಳನ್ನೇ ಉಪಯೋಗಿಸಿ, ಅದೇ ಕ್ಷಣದಲ್ಲೇ ಆ ಹಳೇ ವಸ್ತುವನ್ನು ತಯಾರಿಸುವುದಕ್ಕಿಂತ, ಇದ್ದಲ್ಲೇ ಇದ್ದು, ಎಲ್ಲಿಂದಲೂ ತರಿಸದೆ, ಬೇಕಾದ ವಸ್ತುವನ್ನು ಸೃಷ್ಟಿಸುವುದೇ ಸುಲಭದ ಕೆಲಸ, ಅನಿಸುತ್ತದೆ ನನಗೆ, ಶ್ರೀ ಮರ್ಫೆಟ್‌ರವರ ದ್ರಾವಿಡ ಪ್ರಾಣಾಯಾಮ ರೀತಿಯ ವೈಜ್ಞಾನಿಕ ವಿವರಣೆಯನ್ನೋದಿದಾಗಲೆಲ್ಲ!

ಆದ್ದರಿಂದ ಭಗವಾನರು ಆ ಸಂಪಾದಕರಿಗೆ ಹೀಗೆ ಹೇಳಿದರು: "ಆ ವಸ್ತುಗಳೆಲ್ಲ ಹೊಸದಾಗಿ ಸೃಷ್ಟಿಯಾಗುವವೇ! ಮತ್ತೊಂದು ಕಡೆಯಿಂದ ತರಿಸುವುದು ಎಂದರೆ, ಅಲ್ಲಿ ಅದು ನಷ್ಟವಾದ ಹಾಗೆ! ಅಲ್ಲದೆ, ಅದು ಮೋಸಕ್ಕೆ ಸೇರಿದ್ದು. ನಾನು ಸಂಕಲ್ಪಿಸುತ್ತೇನೆ, ಪದಾರ್ಥ ತಯಾರಾಗುತ್ತದೆ. ಎಲ್ಲೂ ಇಲ್ಲದ, ಯಾರೂ ಕಂಡರಿಯದ ವಸ್ತುಗಳನ್ನು ನಾನು ಕೊಡುತ್ತಿದ್ದೇನಲ್ಲಾ! ನನ್ನ ಸಂಕಲ್ಪ ಶಕ್ತಿಯನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ".

ಯಾರೂ ಎಂದೂ ಕಂಡರಿಯದ ಪದಾರ್ಥಗಳನ್ನು, ಅವರು ಸೃಷ್ಟಿ ಮಾಡಿರುವುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಶ್ರೀ ರಾಮಕೃಷ್ಣ ಪರಮಹಂಸರ ಭಾವಚಿತ್ರದ ನಾಲ್ಕು ಮೂಲೆಗಳಲ್ಲೂ, ಬಾಬಾ ಅವರ ಭಾವ ಚಿತ್ರ! ಗೋಕಾಕರ ತಂದೆಯವರೂ ಅಜ್ಜನವರೂ ಆರಾಧಿಸುತ್ತಿದ್ದ ಗುರುಗಳ ಚಿತ್ರ ನೋಡಿದ ಕೂಡಲೇ, ಆ ಮಹನೀಯರ ಚಿಕ್ಕ ಭಾವ ಚಿತ್ರವನ್ನು ಸೃಷ್ಟಿಸಿ, ಬಾಬಾ ಅವರು ಗೋಕಾಕರಿಗಿತ್ತರು.

"ಎಂದಿನಿಂದ ಈ ವಸ್ತು ನಿರ್ಮಾಣ?" - ಎಂದು 'ನವಕಾಲ'ದವರು ಕೇಳಿದರು. "ಕೇವಲ ಹುಡುಗನಾಗಿದ್ದಾಗಿನಿಂದ" - ಎಂಬ ಉತ್ತರ ಬಂತು. "ಸ್ಕೂಲಲ್ಲಿ ಓದುತ್ತಿದ್ದಾಗ, ಜತೆ ಹುಡುಗರಿಗೆ ಆಟಕ್ಕೆ ಗೋಲಿಗಳು, ಬಾಯಿ ಚಪಲಕ್ಕೆ ಚಾಕಲೇಟುಗಳು, ಎಲ್ಲವನ್ನು ಕೊಡುತ್ತಿದ್ದೆ" - ಎಂದರು. "ಈ ದಿವ್ಯಶಕ್ತಿ ನಿಮ್ಮಲ್ಲಿ ಯಾವ ವಯಸ್ಸಿನಿಂದ ಪ್ರಕಟವಾಯಿತು?" "ಹುಟ್ಟಿದಾಗಿನಿಂದಲೇ," ಎಂಬ ಉತ್ತರ ಬಂತು. ಎರಡು ನಿಮಿಷದ ನಂತರ, "ಅದಕ್ಕೂ ಮುಂಚಿನಿಂದ," ಎಂದು ಹೇಳಿದರು! ಅಹುದು, ಕೃಷ್ಣಾವತಾರದಲ್ಲೂ, ಶಿರ್ಡಿಯಲ್ಲೂ, ಇವರೇ ತಾನೆ!

ಸಂಪಾದಕರು ಬೆಚ್ಚಿಬಿದ್ದರು! "ಅಂದರೆ, ತಾವು....?" - ಎನ್ನುವುದರೊಳಗೆ ಬಾಬಾ, "ಅಂದರೆ ಜನ್ಮ ತಾಳುವುದು ಎಂಬುದನ್ನು ನಾನೇ ನಿರ್ಣಯಿಸಿದೆ. ತಾಯಿಯನ್ನು ನಾನೇ ಆರಿಸಿಕೊಂಡೆ. ನೀವು ಸತಿ ಪತಿಯರನ್ನಾಗಿಸಿಕೊಳ್ಳಬಹುದು. ರಾಮ ಕೃಷ್ಣಾದಿಗಳು ಯಾರ ಗರ್ಭದಲ್ಲಿ ಹುಟ್ಟುವುದೆನ್ನುವುದನ್ನು ತಾವೇ ನಿಶ್ಚಯಿಸಿಕೊಂಡರು. ಅವತಾರ ಕಾರ್ಯವನ್ನು ಕೂಡ ನಾನೇ ನಿರ್ಧರಿಸಿದೆ. ಪ್ರೇಮದಿಂದ ಪ್ರೇಮ ಬೆಳೆಸಿ, ಪ್ರೇಮ ಮಾರ್ಗದಲ್ಲಿ ಧರ್ಮಾಭಿವೃದ್ಧಿ"

ಬೃಂದಾವನಂ (ವೈಟ್ ಫೀಲ್ಡ್)ಗೆ ಬಂದ ನಂತರ, ಬಾಬಾ ಅವರು, ಅಲ್ಲೊಂದು ಕಾಲೇಜು ಸ್ಥಾಪಿಸುವುದರಲ್ಲೇ ಉತ್ಸುಕರಾದರು. ೧೯೬೪ ಜೂನ್ ೯ನೆ ತಾ| ಅದರ ಪ್ರಾರಂಭೋತ್ಸವ ನಡೆಯಿತು. ೧೮ ತಾ| ಅಲ್ಲಿ ಒಂದು ಮಹತ್ವಪೂರ್ಣ ಕವಿ ಸಮ್ಮೇಳನವನ್ನೇರ್ಪಡಿಸಲಾಗಿತ್ತು. ದ.ರಾ. ಬೇಂದ್ರೆಯವರು, ವೈಟ್‌ಫೀಲ್ಡ್‌ನ್ನು ಪಾಂಡುರಂಗ ಎಂದು ಸಂಬೋಧಿಸಿ, ಶ್ರೀಯವರನ್ನು ಕುರಿತು ತಮ್ಮ ಅಚ್ಚ ಹಸುರು ವಾಣಿಯಲ್ಲಿ ಕೊಂಡಾಡಿದರು. ಗೋಕಾಕರು, ಆರ್.ಎಸ್. ಮುಗಳಿಯವರು, ಜಿ.ಪಿ. ರಾಜರತ್ನಂ ಅವರು, ಆರ್.ಜಿ. ಕುಲಕರ್ಣಿ, ಜಿ.ಎಸ್. ಶಿವರುದ್ರಪ್ಪ, ಕೆ.ಎಲ್. ಶಿವಪ್ಪ ಮುಂತಾದವರು ಕಾವ್ಯಧಾರೆಯಿಂದ ಸಭಿಕರನ್ನಾನಂದಿಸಿದರು. ಬಾಬಾ ಅವರು ಕೂಡ, ತಾವೇ ರಚಿಸಿದ "ಶಿವ ತಾಂಡವ" - ಎಂಬ ಮಾಧುರ್ಯಪೂರ್ಣ ತೆಲುಗು ಕವನವನ್ನು ಹಾಡಿದರು. "ಕವಿಂ ಕವೀನಾಂ" - ಎಂಬ ಹೆಸರು ಇವರಿಗೆ ಸರ್ವಥಾ ಅನ್ವಯಿಸುತ್ತದೆ.

ಜೂನ್ ಕೊನೆಯವಾರದಲ್ಲಿ, ಬಾಬಾ ಮದ್ರಾಸ್ ನಗರಕ್ಕೆ ತೆರಳಿದರು. ೧೮ ವರ್ಷದ ಯುವಕನಾಗಿದ್ದಾಗಲೇ, ಬಾಬಾ ಒಮ್ಮೆ ಮದ್ರಾಸಿನಲ್ಲಿದ್ದಾಗ, ಲೋಕನಾಥ ಮುದಲಿಯಾರ್ ಎಂಬವರ ಮನೆಗೆ, ಆ ರಸ್ತೆಯ ಮೂಲಕ ಎಲ್ಲಿಗೋ ಹೋಗುತ್ತಿದ್ದಾಗ, ಪ್ರಯಾಣ ಮಧ್ಯೆ ಹಠಾತ್ತನೆ ಪ್ರವೇಶಿಸಿ, ಅವರಿಗೆ ತಗುಲಿದ್ದ ಮನೋರೋಗವನ್ನು ಸಂಪೂರ್ಣ ವಾಸಿ ಮಾಡಿದ್ದರು. ಇದರಿಂದಾಗಿ ಅವರು ಸತ್ಯ ಸಾಯಿಬಾಬಾನಿಗೆ ಒಂದು ಮಂದಿರ ಕಟ್ಟಲು ನಿಶ್ಚಯಿಸಿದರು. ಗಿಂಡಿ ರೈಲು ಸ್ಟೇಷನ್ ಬಳಿ, ತಮ್ಮ ಒಂದು ಸೈಟನ್ನು ಅದಕ್ಕಾಗಿ ಮೀಸಲಿರಿಸಿದರು. ಆದರೆ, ಪೂರ್ವ ಶರೀರವಾದ ಶಿರ್ಡಿ ಸಾಯಿ ಬಾಬಾ ವಿಗ್ರಹವನ್ನೇ ಅಲ್ಲಿ ಪ್ರತಿಷ್ಠೆ ಮಾಡುವಂತೆ, ಮುದಲಿಯಾರಿಗೆ ಬಾಬಾ ಆದೇಶ ಕೊಟ್ಟರಂತೆ (ಕನಸಿನಲ್ಲಿ). ಬಾಬಾ ಅವರು ಪತ್ರ ಮುಖೇನ, ಆ ಕನಸು ನಿಜ ಎಂದು ತಿಳಿಸಿದರು.

ಅಂತೂ, ೧೯೪೮ರಲ್ಲಿ ಮಂದಿರ ಸಿದ್ಧವಾಗಿ, ಬಾಬಾ ಅವರೇ ಸ್ವತಃ ಶಿರ್ಡಿ ಬಾಬಾ ಶಿಲಾ ವಿಗ್ರಹವನ್ನು ಅಲ್ಲಿ ಪ್ರತಿಷ್ಠಿಸಿದರು. ಆ ವಿಗ್ರಹದ ತೇಜಸ್ಸನ್ನು ಕುರಿತು, ಹಾವರ್ಡ್ ಮರ್ಫೆಟ್ ಬರೆಯುತ್ತಾರೆ: "ರೋಂ ನಗರದಲ್ಲಿ ಒಂದು ಚಿಕ್ಕ ಚರ್ಚಿನಲ್ಲಿ, ಜಗದ್ವಿಖ್ಯಾತ ಮೈಕೆಲ್ ಏಂಜಲೋ ಅಮೃತ ಶಿಲ್ಪವಾದ, 'ಮೋಸಸ್' ನ ವಿಗ್ರಹವಿದೆ. ಅದರಂತೆ ಈ ವಿಗ್ರಹ ಕೂಡ, ನನಗೆ ಸಜೀವವಾಗಿಯೇ ಕಂಡಿತು".

ಪ್ರತಿಷ್ಠಾಪನಾ ಸಮಾರಂಭದ ದಿನ, ಸತ್ಯಸಾಯಿಗೆ ಅವರು "ಪಾದ ಪೂಜೆ" ಮಾಡಿದರು. ಅಂಗಾಲಿಗೆ ಗಂಧ, ಅರಶಿನ ಬಳಿದು, ಬಿಳಿ ರೇಷ್ಮೆ ಬಟ್ಟೆಯ ಮೇಲೆ ನಿಂತು, ಪಾದದ ಗುರುತು ಕೊಡುವಂತೆ ಬೇಡಿಕೊಂಡರು. "ನನ್ನ ಪಾದವೇಕೆ? ಶಿರ್ಡಿ ರೂಪದ ಪ್ರತಿಷ್ಠೆಯಾಗಿದೆ - ಆದ್ದರಿಂದ ಶಿರ್ಡಿ ಪಾದವನ್ನೇ ಕೊಡುತ್ತೇನೆ, ಇಗೊ!" - ಎನ್ನುತ್ತ ಬಾಬಾ, ಆ ಬಟ್ಟೆಯ ಮೇಲೆ ನಿಂತರು. ಪಾದ ಮುದ್ರೆ ಮಾತ್ರ, ಅವರ ಸಣ್ಣ ಸುಕೋಮಲ ಪಾದಗಳದ್ದಲ್ಲ! ಬೃಹದಾಕಾರದ ಶಿರ್ಡಿ ಸಾಯಿಬಾಬಾ ಅವರ ಪಾದದ ಗುರುತುಗಳು! ಈಗಲೂ ಆ ಪಾದಮುದ್ರೆಗಳನ್ನು ನಾವು ಆ ಗುಡಿಯ ಗರ್ಭ ಗೃಹದಲ್ಲಿ ನೋಡಬಹುದು.

ಬಾಬಾ, ಆ ಗುಡಿಯ ಪ್ರಾಂಗಣದಲ್ಲಿ ಸಭೆ ಸೇರಿದ ಸಾವಿರಾರು ಮಂದಿಯನ್ನುದ್ದೇಶಿಸಿ, "ವಿಷ್ಣು ಎಂದರೆ ಸರ್ವವ್ಯಾಪಿ. ಮತ್ತೆ ಸರ್ವವ್ಯಾಪಿಯನ್ನು ಒಂದು ಶಿಲಾವಿಗ್ರಹದಲ್ಲಡಗಿಸಿ ಆರಾಧಿಸುವುದು ತಪ್ಪಲ್ಲವೆ? - ಎಂದರೆ, ಅಮೃತವನ್ನು ಪಾನ ಮಾಡಲು, ಆನಂದವನ್ನಾಸ್ವಾದಿಸಲು, ಒಂದು ಚಮಚ ಗ್ಲಾಸು ಬೇಕಾಗುವುದಿಲ್ಲವೆ? ಅಂಥ ಉಪಕರಣ ಈ ವಿಗ್ರಹ ರಸೋ ವೈ ಸಃ - ಆ ರಸವನ್ನು ತುಂಬಿಟ್ಟು ಪಾನ ಮಾಡಲು, ತರ ತರಹದ ಪಾತ್ರೆಗಳು, ವಿಗ್ರಹಗಳು, ರೂಪನಾಮಗಳು! ಸಾಯಿಬಾಬಾ ರೂಪದ ಪಾತ್ರೆಯಿಂದ ಆನಂದ ಪಾನ ಮಾಡಿದರೆ ನಿಮಗೆ ತೃಪ್ತಿ. ಆದ್ದರಿಂದ ನಾಸಿದನ್ನು ಇಲ್ಲಿ ನೆಲೆಗೊಳಿಸಿದೆ".

ಜುಲೈ ೨೯: ಗುರು ಪೌರ್ಣಿಮೆ. ಬಾಬಾ ಅವರು, ಆ ದಿನ ಸೇರುವಂತೆ, ಭಾರತದ ಹೊರ ದೇಶಗಳ ಸತ್ಯಸಾಯಿ ಸೇವಾ ಸಮಿತಿಗಳಿಗೆಲ್ಲ, ಒಂದು ಸಂದೇಶ ಕಳುಹಿಸಿದರು. "ಕಾಮಯೇ ದುಃಖ ತಪ್ತಾನಾಂ ಪ್ರಾಣಿನಾಂ ಅರ್ತಿನಾಶನಂ" - ಎಂಬ ಪ್ರಹ್ಲಾದನ ಪ್ರಾರ್ಥನೆಯನ್ನು, ಬಾಬಾ ಎಲ್ಲರ ನೆನಪಿಗೂ ತಂದರು. "ಪ್ರೇಮವನ್ನು ಬೀರುತ್ತ ಏಳಿರಿ; ಪ್ರೇಮದಿಂದಲೇ ದಿನ ಕೃತ್ಯಗಳನ್ನು ನಿರ್ವಹಿಸಿರಿ. ಪ್ರೇಮದಿಂದ ಇಡೀ ದಿನವನ್ನು ತುಂಬಿರಿ. ಪ್ರೇಮದಿಂದಲೇ ದಿನಾವಸಾನವಾಗಲಿ" - ಎಂದರು. ಆ ದಿನ, ಸಂಜೆ, ಪ್ರಶಾಂತಿ ನಿಲಯದಲ್ಲಿ ಅಪರಿತ್ತ ಪ್ರವಚನದಲ್ಲಿ, "ಮತ ಧರ್ಮವನ್ನು ಸಂಸ್ಥೆ ಎಂಬ ಪಂಜರದ ಒಳಗೆ ಬಂಧಿಸಬಾರದು. ಮಾನವ ಸಮಾಜವನ್ನು ತುಂಡರಿಸಿ ಪ್ರತ್ಯೇಕಿಸಬಾರದು" - ಎಂದು ಬೋಧಿಸಿದರು.

ಆ ವರ್ಷದ ಕೃಷ್ಣಜನ್ಮಾಷ್ಟಮಿ ದಿನವನ್ನು, ಭಕ್ತರು ಸಾಯಿ ಕೃಷ್ಣನ ಸಮ್ಮುಖದಲ್ಲೇ ಕೊಂಡಾಡಿದರು. ಶೃಂಗಾರ ಲೋಲುಪರಾದ ಕವಿಗಳ ಚಾತುರ್ಯದಿಂದ, ಭೋಗಲಾಲಸರಾದ ವ್ಯಾಖ್ಯಾನಕಾರರ ಜಿಹ್ವಾಚಾಪಲ್ಯದಿಂದ, ಶ್ರೀಕೃಷ್ಣನನ್ನು ಬಹು ಮಂದಿ, ಜಾರ ಶಿಖಾಮಣಿ ಎಂದು ಭಾವಿಸಿದ್ದಾರೆ. ಆದರೆ, ಸಾಯಿಕೃಷ್ಣ ಈ ಭಾವನೆಯನ್ನು ಸಂದರ್ಭ ಸಿಕ್ಕಾಗಲೆಲ್ಲ

ಖಂಡಿಸಿ, ನಿಜತತ್ತ್ವವನ್ನು ಬೆಳಗಿಸುತ್ತಿದ್ದಾರೆ. ಪಂಡಿತರುಗಳು, ಕವಿಗಳು, ಟೀಕಾಕರ್ತರು, ಉಪನ್ಯಾಸಕರು, ಉಪಾಧ್ಯಾಯರು, ಅನ್ಯಮತಸ್ಥರು, ಅರೆ ವಿದ್ಯಾನಿಪುಣರು, ಮುರುಕಲು ವಿಜ್ಞಾನಿಗಳು, ಕುಯುಕ್ತಿ ಪಟುಗಳು, ಎಲ್ಲರನ್ನೂ ಅವರು ತಿದ್ದುವರು. ಸರ್ವ ಭೂತಾಂತರಾತ್ಮನಾದ ಕೃಷ್ಣನು ಪಾಲಿಸಿದ ಗೋವುಗಳು, ನಿಜಕ್ಕೂ ಜೀವಿಗಳು! ಕೃಷ್ಣ ತಸ್ಕರಿಸಿದ ಬೆಣ್ಣೆ, ನಿಜಕ್ಕೂ ಹೃದಯ ಮಂಥನದಿಂದ ಬರುವ ನವನೀತ! - ಎಂದೆಲ್ಲ ಅವರು ವಿವರಿಸಿದಾಗ, ಗೀತಾಚಾರ್ಯರೇ ಎದುರಿಗಿದ್ದಂತೆ ಭಾಸವಾಯಿತು.

ನ್ಯೂಯಾರ್ಕ್ ನಗರದ ಹಿಲ್ಡಾ ಚಾರ್ಲಟನ್ ಎಂಬ ಭಕ್ತೆ ಸ್ವಾಮಿಯ ಸ್ವರೂಪವನ್ನು ಹೀಗೆ ವಿವರಿಸುತ್ತಾಳೆ:

ನಿಮ್ಮ ವದನ ಕಮಲದಿಂದ ಹೊರ ಬರುವ ತಂಗಾಳಿಗೆ
ವನ ವನದ ತರುಲತೆಗಳಾನಂದ ನೃತ್ಯ!
ಸಕಲ ಜೀವಿಗಳ ಚೇತನವೂ ನೀವಾಗಿರಲು
ನಿಮ್ಮನ್ನೇ ನೆನೆನೆನೆದು ಕುಣಿಯುತಿದೆ ನೋಡಿ
ಜಗದಾದಿ ಸ್ಪಂದನ ಅದರಂತ್ಯ ಮಿಲನ
ನಿಮ್ಮಿಂದ, ನಿಮ್ಮಲ್ಲಿ, ನೀವೆ ನಾವು
ನೀವಲ್ಲದೆ ನಮ್ಮಲ್ಲಿ ಇಲ್ಲಿಲ್ಲ ಏನೂ
ಎದೆ ಬಡಿತ, ಸುಧೆ ಕುಡಿತ, ನಿಮ್ಮಿಂದಲೇ.

# ಪ್ರೇಮ ಗೋದಾವರಿ

ಒಲವು ನಲಿವುಗಳಿಗಾಗಿ, ನಲ್ಮೆ ಬಲ್ಮೆಗಳಿಗಾಗಿ, ಬಯಸಿ ಬಳಲುವವರು ನಿಜಕ್ಕೂ ಪುಣ್ಯವಂತರು. ಅಂಥವರಲ್ಲಿ ಸಚ್ಚಿದಾನಂದ ಸ್ವರೂಪಿಯಾದ ಸ್ವಾಮಿಯ ದರ್ಶನ, ಅವರ ಅಮೃತೋಪದೇಶದ ಶ್ರವಣ ಪಡೆದವರು ಹೆಚ್ಚು ಭಾಗ್ಯವಂತರು. ಅವರ ಪೈಕಿ, ಆ ದಿವ್ಯ ಸಂದೇಶವನ್ನಾಚರಿಸಿ, ಆತ್ಮೋನ್ನತಿಯನ್ನೂ ಜಗತ್ಕಲ್ಯಾಣವನ್ನೂ ಕಿಂಚಿತ್ ಸಾಧಿಸಿದವರು ಪೂಜಾರ್ಹರು. ಇಂಥವರಿಗೆ ಸ್ವಾಮಿಯ ಜನ್ಮ ದಿನೋತ್ಸವವೇ ತಮ್ಮ ಜನ್ಮೋತ್ಸವ ಕೂಡ. ಚಾರ್ಲ್ಸ್ ಪೆನ್ ಎಂಬ ಭಕ್ತ ಬರೆಯುತ್ತಾನೆ: "ನಾನು ಹುಟ್ಟಿದ್ದು ೧೯೬೫ರಲ್ಲಿ. ಆಗಲೇ ನನಗೆ ಭಗವಾನರ ಅವತಾರ ವಾರ್ತೆ ತಿಳಿದದ್ದು".

೧೯೬೮ ನವೆಂಬರ್ ೨೩ರಂದು, ಸ್ವಾಮಿಯ ೪೩ನೆ ವರ್ಧಂತಿ. ಭಕ್ತರಿಗೆ ಪರಮಾನಂದ. ಮನೆ ಮನೆಯಲ್ಲೂ ಮಂಗಳ. ಕಾಕಿನಾಡಾ ಎಂಬ ನಗರದಲ್ಲಿ, ೪೨ ದಿನಗಳ ಅಖಂಡ ಭಜನೆಯನ್ನು, ಆ ದಿನ ೪೩ನೆ ದಿನ, ಅತ್ಯುತ್ಸಾಹದಿಂದ ಪೂರ್ಣಗೊಳಿಸಿದರು. ಅನೇಕ ಆಸ್ಪತ್ರೆಗಳಲ್ಲಿ, ಕಾರಾಗೃಹಗಳಲ್ಲಿ, ವಿಶೇಷ ಭಜನೆ, ಮಿಠಾಯಿ ಹಂಚಿಕೆ, ಅಂಗವಿಕಲರಿಗೆ ಅನ್ನ-ವಸ್ತ್ರದಾನ, ಹಿರಿಯರಿಂದ ಭಾಷಣಗಳು, ಮಕ್ಕಳ ನೃತ್ಯ ನಾಟಕಗಳು, ಗೀತಾ ಪಠನ, ಇತ್ಯಾದಿ ಕಾರ್ಯಕ್ರಮಗಳಿಂದ, ನಾಡೆಲ್ಲ ಹಾಡು ತುಂಬಿತು; ನಲಿಯಿತು. ವ್ಯಾಸಂಗ ಗೋಷ್ಠಿಗಳು, ಸಂಸ್ಕೃತ ಬೋಧಿಸುವ ತರಗತಿಗಳು, ವೇದ ಪಾಠ ಶಾಲೆಗಳು, ಚಿಕಿತ್ಸೆ ಕೇಂದ್ರಗಳು, ಆಧ್ಯಾತ್ಮಿಕ ಗ್ರಂಥಾಲಯಗಳು, ದೀನ ದಲಿತರ ಸೇವಾ ಸಂಸ್ಥೆಗಳು, ನೂರಾರು ಪ್ರಾರಂಭವಾದುವು. ಹಲವಾರು ರೀತಿಯಲ್ಲಿ, ಸ್ವಾಮಿ ಅಲ್ಲಲ್ಲೇ, ಅಂದಂದೇ, ತಮ್ಮ ಅಭಯದ ಹಸ್ತದ, ಪಾದ ಪಂಕಜದ, ಮಂದಸ್ಮಿತ ವದನದ ಗುರುತು ತೋರಿಸಿ, ಭಕ್ತರನ್ನು ಆನಂದಗೊಳಿಸಿದರು.

ಪ್ರಶಾಂತಿ ನಿಲಯ ದೈವ ಸಾನ್ನಿಧ್ಯದಿಂದ ಶೋಭಿಸಿತು. ಆಂಧ್ರ ಪ್ರದೇಶದಲ್ಲಿನ ಸೇವಾ ಸಮಿತಿಗಳ ಕಾರ್ಯನಿರ್ವಾಹಕರ ಮಹಾಸಭೆ ಅಲ್ಲಿ ಜರುಗಿತು. ಅವರನ್ನುದ್ದೇಶಿಸಿ ಮಾತನಾಡುತ್ತ, "ಭಗವಂತನ ಪಾದಗಳನ್ನು ಬಲವಾಗಿ ಹಿಡಿದು, ಅವುಗಳನ್ನನುಸರಿಸಿ ನಡೆದರೆ, ಅವನ ನೆರಳಿನಂತಾದರೆ, ಹಳ್ಳ ಕೊಳ್ಳ ಮುಳ್ಳು ಪೊದೆ, ಎಲ್ಲದರ ಮೂಲಕವೂ ನೆರಳು ಹೊರಳಿದಂತೆ, ನೀವೂ ಅಪಾಯಕ್ಕೊಳಗಾಗದೆ ಜೀವನಯಾತ್ರೆಯನ್ನು ಪೂರೈಸಬಹುದು." "ನೀವು ಧ್ಯಾನ ಮಾಡುವಾಗಲೂ, ಭಜನೆ ಹಾಡುವಾಗಲೂ, ಭಾಷಣ ಮಾಡುವಾಗಲೂ, ಅನ್ನದಾನಗೈಯ್ಯುವಾಗಲೂ, ಇಂಥ ಚರ್ಯೆಗಳ ಮೂಲೋದ್ದೇಶವನ್ನು ನೆನಪಿನಲ್ಲಿರಿಸಬೇಕು. ಕಾಮ ಕ್ರೋಧಾದಿಗಳನ್ನು ಹೊರದೂಡಿ, ಚಿತ್ತವನ್ನು ಪ್ರೇಮಮಯವಾಗಿಸುವುದೇ ಅವುಗಳೆಲ್ಲದರ ಗುರಿ".

ಪತಾಕೋತ್ಸವ ಸಂದರ್ಭದಲ್ಲಿ ಸ್ವಾಮಿ, "ನನ್ನ ವಿಷಯ ಮಾತಾಡುವಾಗ, ನಿಮ್ಮ ವೀರಾವೇಶವನ್ನು ಪ್ರಕಟಿಸಬಾರದು. ಉಳಿದವರನ್ನು ದೂಷಿಸಿ ನನ್ನನ್ನು ಭೂಷಿಸಬಾರದು. ನನ್ನನ್ನು ಹೊಗಳಿ, ತೆಗಳಿ - ನಾನು ನಿಮ್ಮವನೇ ನನ್ನನ್ನು ದ್ವೇಷಿಸಿದರೂ, ನಾನು ನಿಮ್ಮವನೇ. ನಾನು ಯಾರನ್ನೂ ನನ್ನೆಡೆಗೆ ಎಳೆದುಕೊಳ್ಳಲು ಪ್ರಯತ್ನಿಸಬೇಕಾಗಿಲ್ಲ. ಎಲ್ಲರೂ, ಎಂಥವರೂ, ಎಲ್ಲಿಯವರೂ ನನ್ನವರೇ ಆಗಿದ್ದಾರೆ. ನಿಮ್ಮಲ್ಲಿರುವುದು ನಾನೇ! ನನ್ನಲ್ಲಿರುವುದು ನೀವೇ! ಈ ಪ್ರಶಾಂತಿ ನಿಲಯ ನಿಮ್ಮ ಮನೆ! ನನ್ನ ಮನೆ ನಿಮ್ಮ ಹೃದಯ," ಎಂದರು.

ಜನ್ಮೋತ್ಸವ ೨೧ರಂದೇ ಪ್ರಾರಂಭವಾಯಿತು. ಗೋಕಾಕರು, "ಬಾಬಾ ಅವರು ಸತ್ಯ ಸ್ವರೂಪ, ಶಿವ ಸ್ವರೂಪ, ಸುಂದರ ಸ್ವರೂಪ" - ಎಂದರು. "ನಮಗಾಗಿ ನರ ವಸ್ತ್ರ ಧರಿಸಿ ಬಂದಿದ್ದಾರೆ" - ಎಂದರು. ಆ ದಿನ ನಿಲಯದಿಂದ ಪೂರ್ಣಚಂದ್ರ ಸಭಾಭವನದವರೆಗೂ, ಸ್ವಾಮಿ ಮೆರವಣಿಗೆಯಲ್ಲಿ ಬಂದರು. "ಭಕ್ತೆ" ಎಂಬ ಬಿರುದು ಪಡೆದಿರುವ ಆನೆ, 'ಸಾಯಿಗೀತೆ'ಯ ಹಿಂದೆ, ವೇದ ಪಂಡಿತರು, ವೇದ ಪಾಠಶಾಲೆಯ ವಟುಗಳು, ನಾದಸ್ವರದವರು, ಭಜನೆ ಹಾಡುವವರು ಮುಂತಾದವರು ನಡೆದು ಬರಲು, ಸ್ವಾಮಿ ತಮ್ಮ ತಾಯಿಯೊಂದಿಗೆ, ಭಕ್ತರೊಂದಿಗೆ ಕುಸುಮದಳಾಲಂಕೃತ ದಾರಿಯುದ್ದ ನಡೆದು ಬಂದರು. ರಜತ ಸಿಂಹಾಸನದಲ್ಲಾಸೀನರಾದರು. ಜಗತ್ತಿಗೆ ಜಗದೀಶ್ವರನನ್ನರ್ಪಿಸಿದ ಜನನಿ ಈಶ್ವರಾಂಬ, ಪ್ರಪ್ರಥಮದಲ್ಲಿ ಸ್ವಾಮಿಯ ಪಾದದಲ್ಲಿ ಪುಷ್ಪವನ್ನಿರಿಸಿ, ಅವರ ಶಿರಸ್ಸಿಗೆ ತೈಲಾರ್ಪಣ ಮಾಡಿದರು. ಅನಂತರ, ಜಾಂನಗರದ ರಾಜಮಾತಾ, ಸಿರೋಹಿ ಸಂಸ್ಥಾನದ ರಾಜಮಾತಾ ಇಂದ್ರಾದೇವಿ ಎಂಬ ಮೆಕ್ಸಿಕೋ ದೇಶದ ಯೋಗ ಶಿಕ್ಷಕಿ, ಬೇಗಂ ತಹೀರಾ ಸಯ್ಯೀದ್ ಎಂಬ ಉರ್ದು ಕವಯಿತ್ರಿ, ಮತ್ತು ಹಲವಾರು ವೃದ್ಧ ದಂಪತಿಗಳು ತೈಲಾರ್ಪಣ ಮಾಡಿದರು.

ತೈಲ ಪಾತ್ರೆಯನ್ನು ಹಿಡಿದು, ನಾನು ಸ್ವಾಮಿಯ ಸಮೀಪದಲ್ಲೇ ನಿಂತಿದ್ದೆ. ಇಂದ್ರಾದೇವಿಯ ಸರದಿ ಮುಗಿದಾಗ, ಸ್ವಾಮಿಯ ಕರುಣಾದೃಷ್ಟಿ, ಶ್ರೀಮತಿ ಆಂಡರ್ಸನ್ ಎಂಬ ಅಮೇರಿಕಾ ದೇಶದ ಮಹಿಳೆ, ಚಕ್ರದ ಗಾಡಿಯಲ್ಲಿ ಕುಳಿತಿರುವುದನ್ನು ನೋಡಿತು. ಆಕೆಯನ್ನು ಹೇಗೋ ಸಾಹಸಪಟ್ಟು, ಸಪ್ತ ಸಾಗರದಾಚೆಯಿಂದ ಗಂಡ ಇಲ್ಲಿಯವರೆಗೂ ಸಾಗಿಸಿದ್ದ. ನಿಲಯ ಸೇರಿದ ಕೂಡಲೇ, ಅನುಕೂಲವಾದ ಬಸದಿ ಬೇರೆ ಇಲ್ಲವಾದ್ದರಿಂದ ಆಕೆ ಆಸ್ಪತ್ರೆಯಲ್ಲೇ ಇರಬೇಕಾಯಿತು. ಸ್ವಾಮಿ ಆಕೆಗೆ, ೨೨ನೆ ತಾ| ಒಂದು ರೇಷ್ಮೆ ಸೀರೆ ಕಳುಹಿಸಿ, ಹಬ್ಬದ ದಿನ ಅದನ್ನಾಕೆಗೆ ಉಡಿಸಿ ಕರೆ ತರುವಂತೆ, ಕೆಲವರು ಮಹಿಳೆಯರಿಗೆ ಆಜ್ಞೆ ಮಾಡಿದ್ದರು. ಹೊರದೇಶಗಳಿಂದ ಬಂದ ಹೆಂಗಸರೆಲ್ಲರಿಗೂ, ಜನ್ಮ ದಿನೋತ್ಸವದ ಉಡುಗೊರೆ ದೊರೆಯಿತು.

ನನ್ನನ್ನು ಹತ್ತಿರ ಕರೆದು ಸ್ವಾಮಿ, "ಪಾಪ! ಆಕೆ ತನಗೆ ಈ ಭಾಗ್ಯ ಇಲ್ಲವಲ್ಲಾ ಎಂದು ನೊಂದುಕೊಳ್ಳುತ್ತಿದ್ದಾಳೆ. ಅವಳ ಹತ್ತಿರಕ್ಕೆ ಹೋಗಿ, ಅವಳ ಕೈಲಿ ಈ ಗುಲಾಬಿ ಹೂವನ್ನು ಎಣ್ಣೆ ಪಾತ್ರೆಯಲ್ಲಿ ಮುಳುಗಿಸಿ, ತೆಗೆದುಕೊಂಡು ಬಾ" - ಎಂದರು. ನಾನು

ಹೊರಟಾಗ, "ತಾಳು, ನಾನೇ ಹೋಗುತ್ತೇನೆ. ಅವಳ ಸಮೀಪಕ್ಕೆ ಬಾ, ನೀನೂವೇ" - ಎಂದು ಎದ್ದು, ೩೦-೪೦ ಅಡಿ ನಡೆದು, ಅವಳ ಚಕ್ರದ ಕುರ್ಚಿ ಹತ್ತಿರ ನಿಂತರು. ನಾನು ಆಕೆ ಕೈಗೆ ಗುಲಾಬಿ ಹೂವು ಕೊಟ್ಟು, ಪಾತ್ರೆ ತೋರಿಸಿದೆ. ಆಕೆಯ ಆನಂದಕ್ಕೆ ಪಾರವೇ ಇಲ್ಲ. ಸ್ವಾಮಿ ಬಗ್ಗಿ, "ಹೂವಿಂದ ಒತ್ತು, ಹೆದರಬೇಡ" - ಎಂದರು. ಆನಂದಭಾಷ್ಪ ಪ್ರವಾಹ. ಆಗ ಸ್ವಾಮಿ, "ಗೆಟ್ ಅಪ್" ಎನ್ನುತ್ತ, ತಾವು ರಜತ ಸಿಂಹಾಸನದತ್ತ ನಡೆದರು. ಸಂವತ್ಸರಗಳಿಂದ ನೆಲದ ಮೇಲೆ ಹೆಜ್ಜೆಯಿಡಲಾರದೆ ನರಳುತ್ತಿದ್ದ ಆಕೆ, ಸ್ವಾಮಿಯ ಜತೆ ಬಿರುಸಾಗಿಯೇ ನಡೆದಳು!

ಮೂವತ್ತು ಸಾವಿರ ಜನ ಸಾಕ್ಷಿ! ನಾನು ನಿಲ್ಲಲಾರದೆ ಹೋದೆ. ಕುಣಿದು ಕುಣಿಸಬೇಕು, ಈ ಜನಸ್ತೋಮವನ್ನು ಎಂದೆನಿಸಿತು. ಅಧಿಕ ಪ್ರಸಂಗ ಆರೋಪಣೆಯನ್ನು ಲೆಕ್ಕಿಸದೆ, ಮೈಕ್ ಹಿಡಿದು, ಗಟ್ಟಿ ಕೂಗಿದೆ: "ನೋಡಿದಿರಾ! ಭಗವಂತನ ಕೃಪೆ! ಏಳು ವರ್ಷಗಳಿಂದ ಕುರ್ಚಿಯಿಂದೇಳದ ಈ ಅಮೇರಿಕಾ ಮಹಿಳೆಗೆ, ಇನ್ನು ಯಾವ ಅಡೆತಡೆಯೂ ಇಲ್ಲ. ಎಲ್ಲರ ಹಾಗೆ ನಡೆಯುವ ಶಕ್ತಿ ಉತ್ಸಾಹಗಳನ್ನು, ಸ್ವಾಮಿ ಒಂದೇ ಕ್ಷಣದಲ್ಲಿ ಅನುಗ್ರಹಿಸಿದ್ದಾರೆ."

ಆ ಸಂಜೆ ಸ್ವಾಮಿ, ಸಂತಾನ ಲಾಭಕ್ಕೆ ಐದು ಕಾರಣಗಳಿವೆ ಎಂದರು. ಹಿಂದಿನ ಜನ್ಮದಲ್ಲಿ, ನಮ್ಮಲ್ಲಿ ಅವರು ಒತ್ತೆಯಿಟ್ಟಿದ್ದ ಹಣವನ್ನು, ನಮ್ಮಿಂದ ಪಡೆಯುವುದಕ್ಕಾಗಿ ಜನಿಸುವ; ನ್ಯಾಸಪುತ್ರರು ಹಿಂದಿನ ಜನ್ಮದಲ್ಲಿ ಪಡೆದು ಹಿಂದಕ್ಕೆ ಕೊಡದ ಸಾಲವನ್ನು ವಸೂಲು ಮಾಡಲು, ಈ ಜನ್ಮದಲ್ಲಿ ಕಾಡುವ ಋಣ ಪುತ್ರರು; ಭಗವದನುಗ್ರಹದಿಂದ ಜನಿಸುವ ಸುಪುತ್ರರು; ತಂದೆತಾಯಂದಿರೆಂಬ, ಬಂಧುಬಳಗವೆಂಬ ಮಮತಾಭಾವವಿಲ್ಲದ ಉಪೇಕ್ಷಾ ಪುತ್ರರು, ಅಂದರೆ ಅವತಾರ. ಇದನ್ನು ಕೇಳಿದವರಿಗೆ, ವೆಂಕಮರಾಜು ಅವರನ್ನೂ, ಈಶ್ವರಮ್ಮ ಅವರನ್ನೂ, ಸ್ವಾಮಿ ವೇದ ವಿಹಿತ ರೀತಿಯಲ್ಲಿ ಗೌರವಿಸದೆ ಇರುವುದರ ಮರ್ಮ ತಿಳಿದಂತಾಯಿತು.

ಡಿಸೆಂಬರ್ ೪ನೆ ತಾ| ಸ್ವಾಮಿ ಬೆಂಗಳೂರು ಹತ್ತಿರ "ಬೃಂದಾವನ"ಕ್ಕೆ, ಹಲವಾರು ಪಾಶ್ಚಾತ್ಯ ಭಕ್ತರೊಂದಿಗೆ ತೆರಳಿದರು. ಅಲ್ಲೊಂದು ಬಾಲಕರ ಕಾಲೇಜು ಸ್ಥಾಪಿಸಲು ಸಂಕಲ್ಪಿಸಿ, ಅದ ನಿರ್ಮಾಣದಲ್ಲಿ ತೊಡಗಿದರು. ಪಾಶ್ಚಾತ್ಯರಿಗೆ ಸಾಧನೆಗಳನ್ನು ಬೋಧಿಸಿದರು. ಕ್ರಿಸ್‌ಮಸ್ ಹಬ್ಬದಲ್ಲಿ, ಅವರಿಗೆ ಪ್ರತ್ಯೇಕ ಉಡುಗೊರೆಗಳನ್ನಿತ್ತರು. ಜನವರಿ ಮೊದಲನೆಯ ದಿನ, ಅಂತಃಕರಣದಿಂದ ಕಸವನ್ನು ಹೊರದೂಡಿ, ಪ್ರೇಮರಸವನ್ನು ಅಲ್ಲಿ ತುಂಬಬೇಕೆಂದು ಎಚ್ಚರಿಸಿದರು. ಜನವರಿ ಒಂದನೆಯ ತಾರೀಖು, ಹೊಸ ಹರ್ಷದಲ್ಲಿ ಹೊಸ ಹರ್ಷ ಸಂಪಾದಿಸಲು ಮಾಡಬೇಕಾದ ಹೊಸ ದೀಕ್ಷೆಯನ್ನು ವಿವರಿಸಿ, ಸತ್ಸಂಗದ ಮಹತ್ವವನ್ನು ವಿವರಿಸಿದರು. ಸಂಕ್ರಾಂತಿ ಹಬ್ಬದ ದಿನ ಸ್ವಾಮಿ ಪ್ರಶಾಂತಿ ನಿಲಯದಲ್ಲಿದ್ದರು. ಸೂರ್ಯ

ಉತ್ತರಾಭಿಮುಖವಾಗಿ ಪ್ರಯಾಣ ಮಾಡುವುದು ಹಾಗಿರಲಿ; ನಿಮ್ಮ ನಿಮ್ಮ ಪ್ರಯಾಣ ಎತ್ತಣಿಂದೆತ್ತಣಕೆ? ಜನನದಿಂದ ಜನನಕ್ಕೆ, ಮರಣದಿಂದ ಮರಣಕ್ಕೆ ಮುಂದುವರಿಯದಂತೆ ನಿಮ್ಮನ್ನು ನೀವು ತಿದ್ದಿಕೊಳ್ಳಿ, ಎಂದು ಅಂದು ಸಂಜೆ ದಿವ್ಯೋಪದೇಶವಿತ್ತರು.

೬೯ ಜನವರಿ ೧೬ನೆ ತಾ| ,ಬಾಬಾ ಅವರು ತಮಗೆ ಶಿರ್ಡಿಯಲ್ಲಿದ್ದಾಗಿನಿಂದ ಪ್ರಿಯವಾದ, ಗೋದಾವರಿ ನದೀ ತೀರದ, ರಾಜ ಮಹೇಂದ್ರಿಗೆ ಆಗಮಿಸಿದರು. ಪೂರ್ವ - ಪಶ್ಚಿಮ ಗೋದಾವರಿ ಜಿಲ್ಲೆಗಳೆರಡರಲ್ಲೂ ಸತ್ಯಸಾಯಿ ಸೇವಾಸಮಿತಿಗಳೂ ಭಜನ ಮಂಡಲಿಗಳೂ ಹಳ್ಳಿ ಹಳ್ಳಿಗಳಲ್ಲೂ ಸ್ಥಾಪಿತವಾಗಿವೆ. ಅಮಲಾಪುರವಾಸಿಯೊಬ್ಬರು, "ಸ್ವಾಮಿ ಈ ಪ್ರಾಂತದಲ್ಲಿ, ಮನೆ ಮನೆಯಲ್ಲೂ ತಮ್ಮ ನಾಮ ಜಪ; ಮನೆ ಮನೆಯಲ್ಲೂ ತಮ್ಮ ಪಟದ ಪೂಜೆ' - ಎಂದು ಬರೆದಾಗ, ಸ್ವಾಮಿ ಅವರಿಗೆ, "ಇಷ್ಟಕ್ಕೇ ಪಾಪ, ನಿನಗೆ ಇಷ್ಟು ಸಂತೋಷವೇ! ನೋಡುತ್ತಿರು. ಮನೆ ಮನೆ ಅಲ್ಲ, ಇಂಚು ಇಂಚು ಭೂವಲಯದಲ್ಲೆಲ್ಲ ನನ್ನ ನಾಮದ ಜಪ, ಪಟದ ಪೂಜೆ, ನೋಡುವಿಯಂತೆ" - ಎಂದು ಉತ್ತರಿಸಿದರು.

ತಾ| ೩೦ರವರೆಗೂ ಭಗವಾನ್ ಆ ಪಟ್ಟಣದಲ್ಲೇ ಇದ್ದರು. ೧೬ರಂದೂ, ೧೭ರಂದೂ ಜನ ಕಿಕ್ಕಿರಿದು ತುಂಬಿದ ಸಭೆಗಳನ್ನುದ್ದೇಶಿಸಿ ಭಾಷಣಗಳನ್ನನುಗ್ರಹಿಸಿದರು. ಮನಸ್ಸಿನ ಚಂಚಲತ್ವವನ್ನು ನಿಯಂತ್ರಿಸಿ, ಕೇವಲ ಸಾಕ್ಷಿಯಂತೆ, ಅಪೇಕ್ಷೆ ತಗ್ಗಿಸಿ ಉಪೇಕ್ಷೆಯನ್ನು ಬೆಳೆಸಿಕೊಂಡು, ಜೀವನ ನಾಟಕದಲ್ಲಿ ತಮ್ಮ ತಮ್ಮ ಪಾತ್ರವನ್ನು ನಿರ್ವಹಿಸಬೇಕೆಂದರು. ಆಂಗ್ಲರ ಅಕ್ಷರಮಾಲೆಯಲ್ಲಿರುವುದು ಬರೀ ೨೬ ಅಕ್ಷರಗಳು ಮಾತ್ರವೇ. ಅವುಗಳಲ್ಲಿ ಯಾವುದೂ ಅಧಮ, ಉತ್ತಮ, ಮಧ್ಯಮ ಎಂದಿಲ್ಲ. ಅವುಗಳನ್ನಳವಡಿಸಿಕೊಂಡು ಹೊಲಸು ಸಾಹಿತ್ಯವನ್ನೂ ಬರೆಯಬಹುದು; ಹಾಲು ಜೇನು ಸಾಹಿತ್ಯವನ್ನೂ ಬರೆಯಬಹುದು. ಹಾಗೆಯೇ ಮನೋವಿಕಾರಗಳನ್ನುಪಯೋಗಿಸಿ, ಅಳಿಯಲೂಬಹುದು, ಉಳಿಯಲೂಬಹುದು. "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋ" ಎಂದು ಉಪದೇಶಿಸಿದರು.

ಆಂಧ್ರ ಕಾಗದ ಕಾರ್ಖಾನೆಗೆ ಭೇಟಿ ಇತ್ತು, ಅಲ್ಲಿಯ ಅಧಿಕಾರಿಗಳಿಗೂ ಕೆಲಸಗಾರರಿಗೂ ಸದ್ಬೋಧೆ ನೀಡಿದರು. ಇಬ್ಬರೂ ಆ ಉದ್ಯಮದಲ್ಲಿ ಪಾಲುದಾರರೆಂಬುದನ್ನು ಮರೆಯಬಾರದೆಂದರು. ಆ ಸಂಜೆ, ತಮ್ಮ ಹೆಸರ ಬಲದಿಂದ ಆ ಪಟ್ಟಣದಲ್ಲಿ ಭಕ್ತರು ನಡೆಸುತ್ತಿರುವ ಒಂದು ಶಾಲೆಯನ್ನು ಸಂದರ್ಶಿಸಿದರು. ಅಲ್ಲಿ ನೆರೆದಿದ್ದ ನೂರಾರು ಮುದ್ದು ಮರಿಗಳನ್ನು, ತಮ್ಮ ಕೃಪಾ ದೃಷ್ಟಿಯಿಂದವಲೋಕಿಸಿ, ಬಾಬಾ ಅವರು ಹೀಗೆಂದರು: "ಮುಂದಿನ ಜನಾಂಗ ಸುಖಶಾಂತಿಗಳಿಂದ ಬಾಳಿ, ಜನ್ಮ ಸಾರ್ಥಕ ಪಡೆಯಲಿ ಎಂಬ ಅನುಗ್ರಹ ಬುದ್ಧಿಯಿಂದ ಪ್ರಾಚೀನ ಋಷಿಗಳು ನಿರ್ಮಿಸಿದ ಸನಾತನ ಧರ್ಮ ಸೌಧವನ್ನು ಈಗ ನಿವಾಸಯೋಗ್ಯವಲ್ಲವೆಂದು ತ್ಯಜಿಸಿ, ರಷ್ಯಾ ಮಾದರಿ, ಅಮೆರಿಕನ್ ಮಾದರಿ ಹೊಸ ಕಟ್ಟಡ ನಿರ್ಮಿಸಬೇಕೆಂದು ಹಾತೊರೆಯುತ್ತಿದ್ದಾರೆ. ಅವರು ಆಶಿಸಿದ ಸುಖಶಾಂತಿಗಳು ಈ ಎಳೆಯರ ವದನಗಳಲ್ಲಿ ಹೊಳೆಯುತ್ತಿವೆ. ಇವರಲ್ಲಿ ಅಸೂಯೆ, ದುರಹಂಕಾರ, ದುರಾಸೆ

ದ್ವೇಷ ಮುಂತಾದುವು ಇಲ್ಲವೇ ಇಲ್ಲ. ಆದರೆ, ಬೆಳೆಯುತ್ತ ಬೆಳೆಯುತ್ತ, ಶಿಕ್ಷಣ ಕ್ರಮದಿಂದ ಹೆತ್ತವರ ಹಾಗೂ ಹಿರಿಯರ ಅನುಕರಣೆಯಿಂದ, ಅನುಸರಣದಿಂದ, ಇವರ ಚಿತ್ತದಲ್ಲಿ ಭಯ, ಆಂದೋಲನ, ಅಪನಂಬಿಕೆ ಮುಂತಾದವು- ಬೇರೂರಿ ಬಿಡುತ್ತವೆ" ಎಂದು ಹೇಳಿದರು. "ಮಕ್ಕಳು ಸಹಕಾರ, ಸೌಜನ್ಯ, ಸೌಶೀಲ್ಯಗಳ ವಾತಾವರಣದಲ್ಲಿ ಬೆಳೆಯಬೇಕು. ತಂದೆ ತಾಯಂದಿರು ಪರದೂಷಣ ಮಾಡುತ್ತ, ಪರಮತ ಖಂಡನೆ, ಜಾತ್ಯಭಿಮಾನಗಳನ್ನು ಪ್ರಕಟಿಸುತ್ತ ಲಂಚ ಸ್ವೀಕಾರ, ಕುಡಿತ, ಜೂಜು, ಸುಳ್ಳಾಡುವಿಕೆ, ಇತ್ಯಾದಿ ದುರಭ್ಯಾಸಗಳಲ್ಲಿ ಮೆರೆದರೆ, ಮಕ್ಕಳಿಗೆ ವಿಷ ಉಣಿಸಿದಂತೆಯೇ ಸರಿ," ಎಂದರು.

"ಈ ಶಾಲೆಗೆ ನನ್ನ ಹೆಸರಿಟ್ಟಿದ್ದೀರಿ. ಆದ್ದರಿಂದ ನಿಮ್ಮ ಜವಾಬ್ದಾರಿ ತುಂಬ ಹೆಚ್ಚಿದೆ. ಮಕ್ಕಳನ್ನು ಇಲ್ಲಿ ಪ್ರೀತಿ ವಿಶ್ವಾಸಗಳಿಂದ ಶುಶ್ರೂಷಿಸಿ, ದೈವೀ ವಾತಾವರಣದಲ್ಲಿ ಅವರ ಅಂತಶ್ಶಕ್ತಿಯನ್ನು ನೀವು ವಿಕಾಸಗೊಳಿಸಬೇಕು. ಈ ಪ್ರಾಂತ್ಯದ ಇತರ ಶಾಲೆಗಳಿಗೆ ಅವರು ಆದರ್ಶ ಬಾಲಬಾಲಿಸಿಕೆಯರಾಗಿ ಕಂಗೊಳಿಸಬೇಕು" - ಎಂದರು.

ರಾಜಮಹೇಂದ್ರದಲ್ಲಿನ ಧವಳೇಶ್ವರ ಅಣೆಕಟ್ಟಿಂದ, ಗೋದಾವರಿ ನದಿಯ ನೀರು ಹತ್ತಾರು ಕಾಲುವೆಗಳ ಮೂಲಕ, ಲಕ್ಷಾಂತರ ಚದರ ಮೈಲಿಗಳಷ್ಟು ಪ್ರದೇಶದ ನದೀ ಮುಖಜ ಭೂಮಿಗೆ ಚೊಕ್ಕ ಭೋಜನವಿತ್ತು, ಧನ ಧಾನ್ಯಗಳನ್ನು ಹೆಚ್ಚಿಸುವ ರೀತಿಯಲ್ಲೇ, ಸ್ವಾಮಿ ಕೂಡ ಆ ಕಾಲುವೆಗಳ ಅಕ್ಕಪಕ್ಕದ ರಸ್ತೆಗಳ ಮೇಲೆ ಕಾರು ನಡೆಸಿ, ನೂರಾರು ಹಳ್ಳಿಗಳಿಗೆ ದರ್ಶನ ಭಾಗ್ಯ ಒದಗಿಸಿ, ಅಸಂಖ್ಯಾತ ಜನರ ಆಧ್ಯಾತ್ಮ ದಾಹವನ್ನು ನಿವಾರಿಸಿದರು. ಸುಮಾರು ೨೦ ಕಾರುಗಳ ಸಾಲು, ಸ್ವಾಮಿಯ ಕಾರನ್ನು ದಿನವೂ ಹಿಂಬಾಲಿಸಿದುವು. ಮುಂಜಾನೆ ಹೊರಟವರು, ಹತ್ತಿರ ಹತ್ತಿರ ನೂರು ಮೈಲಿ ಪ್ರಯಾಣ ಮುಗಿಸಿ, ಹತ್ತಿಪ್ಪತ್ತು ಗ್ರಾಮಗಳಿಗಾನಂದವನ್ನನುಗ್ರಹಿಸಿ, ರಾತ್ರಿ ೯.೦೦ ಗಂಟೆಗೆ ಭಗವಾನರು ಮತ್ತೆ ರಾಜಮಹೇಂದ್ರಿ ಸೇರುವರು. ೫ ದಿನಗಳು ಇದೇ ಕಾರ್ಯಕ್ರಮ ಅಖಂಡವಾಗಿ ಜರುಗಿತು. ಇಡೀ ಜಿಲ್ಲೆ ತದೇಕ ಧ್ಯಾನದಲ್ಲಿ, ತನುಮನಗಳ ಪರಿವೆ ಇಲ್ಲದೆ ತನ್ಮಯವಾಯಿತು, ಚಿನ್ಮಯಗೊಂಡಿತು.

ಸರ್ಕಾರಿ ರಸ್ತೆ ಆದರೂ, ಗ್ರಾಮಸ್ಥರು ಗುಡಿಸಿ ತೊಳೆದು ರಂಗವಲ್ಲಿ ಅಲಂಕಾರ ಮಾಡಿ, ಉದ್ದಕ್ಕೂ ನಿಂತಿದ್ದರು ಭಜನೆ ಮಾಡುತ್ತ, ಗ್ರಾಮದ ಗುಡಿ ಎದುರು, ಆಲದ ಮರದಡಿಯಲ್ಲಿ, ಹಸಿರು ಚಪ್ಪರ ಸಿದ್ಧ ಮಾಡಿ, ಕೊಂಬು ಕಹಳೆ ಊದುತ್ತ, ಟಮಟೆ ಬಡಿಯುತ್ತಾ, ಯುವಕರು ಕಾರು ಶಬ್ದಕ್ಕೆ ಕಿವಿ ಎತ್ತಿ ಕಾದಿದ್ದರು.

ಹತ್ತಾರು ಕಡೆಗಳಲ್ಲಿ, ಸ್ವಾಮಿ ಕಾರೊಂದು ಮಾತ್ರ, ಹಳ್ಳಿ ದಾರಿ ಹಿಡಿದು ಒಳಗೆ ಪ್ರವೇಶಿಸತು. "ನೀವು ದೊಡ್ಡ ರಸ್ತೆಯಲ್ಲೇ, ಇರಿ. ಇಷ್ಟು ಕಾರುಗಳನ್ನು ನಿಲ್ಲಿಸಲು ಜಾಗ ಸಿಗದು ಈ ಹಳ್ಳಿಯಲ್ಲಿ" - ಎಂದು ಸ್ವಾಮಿ ಹೇಳಿಬಿಡುವರು. ಕೇಶಾವರಂನಲ್ಲಿ ಹೀಗೆ ಹೇಳಿ, ತಾವು ಮಾತ್ರ ಗ್ರಾಮಸ್ಥರ ಸಭೆಯನ್ನುದ್ದೇಶಿಸಿ, ನಾಮಸ್ಮರಣೆ ಭಜನೆ ಇವುಗಳ

ಅವಶ್ಯಕತೆಯನ್ನು ಕುರಿತು ಮಾತನಾಡಿದರು. ಸಾಲಾಗಿ ಕುಳಿತಿದ್ದ ಸ್ತ್ರೀ ಪುರುಷರ ನಡುವಣ ಮ ಮಡಿ ಮೇಲೆ ಹೆಜ್ಜೆಯಿಡುತ್ತಾ, ಎಲ್ಲರಿಗೂ ದರ್ಶನ ಲಭಿಸುವಂತೆ ಮಾಡಿದರು. ಪಾಲತ್ತೊಂಡು ಗ್ರಾಮದಲ್ಲಿ ವಿಸ್ತಾರವಾದ ಜಾಗ ಇತ್ತು. ಜ್ಞಾನಪಕ್ಷಿ ಆತ್ಮ ಸಾಕ್ಷಾತ್ಕಾರದ ಗುರಿಯತ್ತ ಹಾರುತ್ತದೆ. ಅದಕ್ಕೆ ಭಕ್ತಿ ಶ್ರದ್ಧೆಗಳು ಎರಡು ರೆಕ್ಕೆಗಳು ಎಂದು ತಿಳಿಸಿದರು. ಗೋದಾವರಿ ಜಿಲ್ಲಾ ಪ್ರದೇಶಕ್ಕೆ ಕೋನ ಸೀಮೆ ಎಂಬುದು ಊರವರ ನಾಮಧೇಯ. ಅದು ಆಂಧ್ರಪ್ರದೇಶದ ಕಣಜ; ಭತ್ತದ ಬೆಳೆಗೆ ಹೆಸರುವಾಸಿ. ಅಂಗೈಯಷ್ಟಗಲದ ಭೂಮಿಯಲ್ಲೂ ಭತ್ತ ಬೆಳೆಯುತ್ತಾರೆ. ಸಣ್ಣ ಹಳ್ಳಿಗಳು ಹತ್ತಾರು, ಮೈಲು ಮೈಲಿಗೂ ಅವರೆಲ್ಲ ಸ್ವಾಮಿಯನ್ನು ದೊಡ್ಡ ರಸ್ತೆಯ ಪಕ್ಕದಿಂದಲೇ ದರ್ಶಿಸಿದರು. ಭಜನೆ ಮಾಡುತ್ತ ಶಿಸ್ತಿನಿಂದ ನಿಂತರೆ, ಸ್ವಾಮಿ ತಮ್ಮ ಕಾರು ನಿಲ್ಲಿಸಿ, ಬಾಗಿಲು ತೆಗೆದು, ಕೆಳಗಿಳಿದು ಅವರತ್ತ ನಡೆದು, ಎರಡು ಮಾತನಾಡಿ ತೃಪ್ತಿಪಡಿಸುತ್ತಾರೆ, ಎಂದು ಅವರ ನಂಬಿಕೆ. ಗುಮ್ಮಲೂರು, ಪಿನಪಲ್ಲಿ, ಕುತ್ತುಕುಲೂರು, ಸೋಮೇಶ್ವರಗಳನ್ನು ದಾಟಿ, ಸ್ವಾಮಿ ಸಂಪರ ಗ್ರಾಮಕ್ಕೆ ಬಂದರು, ಗೋಪಾಲ ಮತ್ತೆ ಗೋಕುಲಕ್ಕೆ ಬಂದ ಹಾಗೆ! ಹೌದು. ಆ ಗ್ರಾಮ ಎಂದೋ ಶ್ರೀಕೃಷ್ಣನ ಬಾಲ್ಯದ ಕ್ರೀಡಾಂಗಣದಂತಾಗಿತ್ತು. ಶ್ರೀ ಮದ್ಭಾಗವತವನ್ನು ಪ್ರತಿವರ್ಷ ಪಾರಾಯಣ ಮಾಡಿ ಹೇಳಿ, ಅದರ ಮೇಲೆ ಅಭಿರುಚಿ, ಅಭಿಮಾನ, ಅಭಿಲಾಷೆಗಳನ್ನು ರೈತ ಜನಾಂಗದಲ್ಲಿ ಬ್ರಹ್ಮ ಶ್ರೀ ಕಡಿಯಾಲ ಸೀತಾರಾಮ ಶಾಸ್ತ್ರಿಗಳು ಮೂಡಿಸಿ, ಬೆಳೆಸಿದ್ದರು. ತನ್ನನ್ನು ತಾನೇ ಸಂಪರ ಕೃಷ್ಣಾರ್ಪಣ ಮಾಡಿಕೊಂಡಿತ್ತು. ಆ ದಿನ ನಾವು ಅಲ್ಲಿ ದಶಮ ಸ್ಕಂಧದ ಪುಟಪುಟಗಳನ್ನು ಆವಿಷ್ಕರಿಸಿದೆವು. ಸ್ವಾಮಿ ನಾಲ್ಕಾರು ಗಂಟೆಗಳ ಕಾಲ ಅಲ್ಲಿ ತಂಗಿದರು. ಹಲವು ಗುಡಿಸಲುಗಳೊಳಗೂ ಪಾದ ಬೆಳೆಸಿದರು. ನವನೀತ ಚೋರನಲ್ಲವೆ, ಸ್ವಾಮಿ? ಭಗವಂತನನ್ನು ಹೃದಯವಾಸಿ, ಭಾವಗೋಚರನಾಗಿ, ಮನುಜರ ಮಾನಸದಲಿಹ ಪರಮಹಂಸನಾಗಿ, ಧ್ಯಾನ ಮಾಡಿ ಒಲಿಸಿಕೊಳ್ಳಬೇಕೆಂದು ಬೋಧಿಸಿದರು.

೨೨ನೆ ತಾ|| ತಾಮರಾಡದ ರಸ್ತೆ ಹಿಡಿದರು, ಬಾಬಾ. ಆ ಊರಲ್ಲಿ ಕೊಂಚ ಹೊತ್ತು ಇದ್ದು, ಅನತಿ ದೂರದ ಪೆದ್ದಾಪುರ ಸೇರಿ, ಅನೇಕ ವರ್ಷಗಳಿಂದ ಭಕ್ತಿಯನ್ನು ಪೋಷಿಸಿಕೊಂಡು ಬಂದಿರುವ, ಚಲ್ಲಾ ಅಪ್ಪಾರಾವು ಅವರ ಮನೆ ಪ್ರವೇಶಿಸಿದರು. ಆತ ರಕ್ತ ಬಲ ಕುಗ್ಗಿ, ಅನೀಮಿಯಾ ರೋಗದಿಂದ ಮೂರು ಸಂವತ್ಸರಗಳು ನರಳಿ, ಅಂತ್ಯಾವಸ್ಥೆಯಲ್ಲಿ ಮಲಗಿದ್ದ. ಅಲ್ಲಿದ್ದ ಡಾ | ಕೇಶವರಾಯರು, "ಬಾಬಾ ಅವರು ನನ್ನನ್ನು ಬದುಕಿಸಲಿ ಸಾಯಿಸಲಿ; ನಾನು ಔಷಧಿ ಸೇವಿಸುವುದಿಲ್ಲ. ನನಗೆ ವೈದ್ಯರ ಚಿಕಿತ್ಸೆ ಬೇಕಿಲ್ಲ ಎಂಬುದು ಇವರ ಹಟ" - ಎಂದು ಹೇಳಿದರು. ಪುಟ್ಟಪರ್ತಿಗೂ ಬಂದಿದ್ದರು ಕೇಶವರಾಯರು. ಆದರೆ ಸ್ವಾಮಿ, "ಔಷಧಿ ಕುಡಿಯುತ್ತಿಲ್ಲ ಅಂತ ನಿಮಗೆ ಭಯ ಯಾಕೆ ? ಔಷಧಿ ಕುಡಿದವರು ಸಾಯುವುದಿಲ್ಲವೇನು?" - ಎಂದರಂತೆ. ಅಪ್ಪಾ ರಾವು ಮಲಗಿದ್ದ ಮಂಚದ ಬಳಿಕೂತು ಸ್ವಾಮಿ ಅವರ ತಲೆಯ ಮೇಲೆ ಕೈ ಇರಿಸಿ, ಧೈರ್ಯ ಹೇಳಿ, ಒಂದು ಲಿಂಗ ಸೃಷ್ಟಿಸಿ ಅವರಿಗಿತ್ತು ಅಭಿಷೇಕ ತೀರ್ಥವನ್ನು ಸೇವಿಸಬೇಕೆಂದು ಆಜ್ಞಾಪಿಸಿದರು. ತಿಂಗಳಾಗುವುದರಲ್ಲಿ ಅವರು ನಡೆ

ಒಂದು ಪತ್ರ ಬರೆದರು: " ಭಗವಾನರು ಬರುವ ಮುನ್ನ ಶವವಾಗಿದ್ದೆ; ಈಗ ಮೃತ್ಯುಂಜಯನಾಗಿದ್ದೇನೆ.ಆ ಊರಲ್ಲಿ ಭಕ್ತರ ಕೋರಿಕೆಯಂತೆ, ಸೇವಾ ಸಮಿತಿಯ ಕಾರ್ಯಕಲಾಪಗಳ ಕೇಂದ್ರದ ಕಟ್ಟಡಕ್ಕೆ ಸ್ವಾಮಿ ಶಂಕುಸ್ಥಾಪನೆ ಮಾಡಿದರು. ಸುದೀರ್ಘವಾದ ದಿವ್ಯೋಪನ್ಯಾಸವೂ ಅವರಿಗೆ ದೊರೆಯಿತು. ಹಾಗೆಯೇ ಮೇಡ, ಪಾಡು, ವಡ್ಲಮೂರು ಗ್ರಾಮಗಳಲ್ಲೂ, ಭಜನ ಮಂದಿರ ನಿರ್ಮಾಣ ಕೈಂಕರ್ಯವನ್ನಾಶೀರ್ವದಿಸಿದರು.

ಕೊತ್ತಪೇಟೆಯಲ್ಲಿ ಕಾಲೇಜು ಆಟದ ಬೈಲಲ್ಲಿ, ಸುಮಾರು ಇಪ್ಪತ್ತು ಸಹಸ್ರ ಜನ ಸೇರಿದರು. ದೋಣಿ, ಬಸ್ಸು, ಬಂಡಿ, ಸೈಕಲ್ ಇವುಗಳನ್ನಾಶ್ರಯಿಸಿ ಬಂದವರೂ, ನಡೆದು ಬಂದವರೂ ಅಸಂಖ್ಯಾತ. ಒಂದೆರಡು ನಾಮಾವಳಿಯನ್ನು ಅವರಿಗೆ ಸ್ವಾಮಿ ಬೋಧಿಸಿದರು. ದೊಡ್ಡ ರಸ್ತೆಯಿಂದ ಒಂದೂವರೆ ಮೈಲಿ ದೂರದಲ್ಲಿ ಮುದುರಿ ಕುಳಿತಿದ್ದ ಪರಿವೇಲಿ ಗ್ರಾಮಕ್ಕೂ, ಆ ಹಳ್ಳಿಯವರ ಪ್ರಾರ್ಥನೆಯ ಮೇರೆಗೆ ಹೋಗಿ ಬಂದರು. ಅಂಬಾಜಿ ಪೇಟೆಯ ಹೊರ ಮೈದಾನದಲ್ಲಿ ಸೇರಿ, ಆಶಾಭಂಗದ ಕಾರ್ಮೋಡದ ಕೆಳಗೆ ಕಂಗಾಲಾಗಿ ಕುಳಿತಿದ್ದ ಸಾವಿರಾರು ಮಂದಿಗೆ, ಆನಂದೋದಯ ದಯಪಾಲಿಸಿದರು.

ಬಂದರ್ಲಂಕ ಎಂಬುದು ನೆಯ್ಗೆಯವರ ನೆಲೆವೀಡು. ಊರಿನ ಪ್ರಮುಖರು ತಳಿರು ತೋರಣಗಳಿಂದಲಂಕೃತವಾದ ಚಪ್ಪರ ನಿರ್ಮಿಸಿ, ಸ್ವಾಮಿಯನ್ನು ಸ್ವಾಗತಿಸಿದರು. ಹಲವಾರು ಹಿತವಚನಗಳಿಂದ ಅವರಲ್ಲಿ ಆಧ್ಯಾತ್ಮಿಕ ಪಿಪಾಸೆಯನ್ನು ಪ್ರಚೋದನೆ ಮಾಡಿದರು. ಮುಂದುವರಿದು ಸ್ವಾಮಿ, ಅಮಲಾಪುರಂ ಪಟ್ಟಣ ಸೇರಿದರು. ತಮ್ಮ ನಯನ ದಾಹವನ್ನು ದರ್ಶನದಿಂದ ತೀರಿಸುವ ಸಲುವಾಗಿ, ಅಲ್ಲಿ ಅರ್ಧ ಲಕ್ಷ ಆಸ್ತಿಕರು ನೆರೆದಿದ್ದರು. ಅಲ್ಲಿಯ ಕಾರ್ಯಕ್ರಮ ಹಿರಿಯರೊಬ್ಬರ ಸ್ವಾಗತ ಭಾಷಣದೊಂದಿಗೆ ಮೊದಲಾಯಿತು. ಆ ಪದ್ಧತಿ ತಮಗನ್ವಯಿಸಬಾರದೆಂದು ಸ್ವಾಮಿ ಖಂಡಿಸಿದರು. ಸದಾಸರ್ವತ್ರ ಸನ್ನಿಹಿತರಾಗಿರುವ ಸ್ವಾಮಿಯನ್ನು ಸ್ವಾಗತಿಸುವುದೇಕೆ? ಅವರನ್ನು ಬೀಳ್ಕೊಡುವುದು ಹೇಗೆ? ಅಲ್ಲದೆ ಮತ್ತೊಂದು ವಿಷಯ. ಆತ ಸ್ವಾಗತಿಸಿದ್ದು ಆಂಗ್ಲಭಾಷೆಯಲ್ಲಿ! "ಕೋನ ಸೀಮೆ! ಸಾಲದ್ದಕ್ಕೆ ಪಂಡಿತರೂ, ಪಾಠ ಶಾಲೆಗಳೂ ಇದನ್ನು ವೇದ ಸೀಮೆಯಾಗಿ ಪರಿವರ್ತಿಸಿದ್ದಾರೆ. ಈ ಜನರ ಕಿವಿಗಳಲ್ಲಿ, ಅವರಿಗರ್ಥವಾಗದ ಅನ್ಯಭಾಷೆಯನ್ನೇಕೆ ಹುಯ್ಯಬೇಕಾಯಿತು?" - ಎಂದು ಟೀಕಿಸಿದರು.

ಆ ರಾತ್ರಿ ಅಲ್ಲೇ ತಂಗಿದ್ದರು. ೨೪ನೆ ತಾ| ಮಾನೇಪಳ್ಳಿ, ತಾಟಿಪಾಕ (ರೋಗ ಗ್ರಸ್ತ ಭಕ್ತನೊಬ್ಬನಿಗೆ ದರ್ಶನ ನೀಡಲೋಸುಗ), ದಾಟಿ, ರಾಜೋಲು ಗ್ರಾಮ ತಲುಪಿಸಿದರು. ಅಲ್ಲಿ ಅರ್ಧ ಗಂಟೆ ಅವಕಾಶ ಮಾಡಿಕೊಂಡು, ಹಳ್ಳಿಯ ಜನರ ಸಭೆಗೆ ಆನಂದವಿತ್ತರು; ಪ್ರಯಾಣವನ್ನು ಮತ್ತೆ ಸಾಗಿಸಿದರು. ಅದು ಯಾವ ಹಳ್ಳಿಯೋ ಏನೋ, ಹೇಳ ಹೆಸರಿಲ್ಲದ ಜಾಗ. ಆದರೆ ರಸ್ತೆಗೆ ಅಡ್ಡವಾಗಿ ಬಿಳಿಯ ಕಾಗದದ ತೋರಣವನ್ನು ಯಾರೋ ಪುಣ್ಯಾತ್ಮರು ಕಟ್ಟಿದ್ದರು. ಒಂದು ಕಡೆಯ ತೆಂಗಿನ ಮರಕ್ಕೂ ಮತ್ತೊಂದು ಕಡೆಯ ಬೇವಿಗೂ! ತೋರಣದ ನಟ್ಟನಡುವಣ ಸ್ಥಾನದಲ್ಲಿ "ತೆಲುಗು ಲಿಪಿಯಲ್ಲಿ" "ಸ್ವಾಗತಮು" ಎಂದು ಬರೆದಿದ್ದ ಕಾಗದವೂ

ಕಾಣಿಸಿತು. ೬೦ ಮೈಲಿ ವೇಗದಲ್ಲಿ ಓಡುತ್ತಿದ್ದ ಕಾರು, ಸ್ವಾಮಿಯ ಆಜ್ಞೆಗನುಸಾರವಾಗಿ ತೋರಣದ ಅಡಿಯಲ್ಲಿ ನಿಲ್ಲಲಾರದಾಯಿತು. ನಲವತ್ತು ಗಜ ಮುಂದೆ ಹೋಯಿತು. "ಬ್ಯಾಕ್" ಮಾಡು ಎಂದರು ಸ್ವಾಮಿ. ಏಕೆಂದರೆ ಇಬ್ಬರು ವೃದ್ಧ ಸ್ತ್ರೀಯರು, ಅವರ ಬಳಿಗೆ ಓಡೋಡಿ ಬರುತ್ತಿದ್ದರು. ಬಾಗಿಲು ತೆಗೆದು ಕಾಲು ನೀಡಿ ಅವರಿಬ್ಬರಿಗೂ ಪಾದಸ್ಪರ್ಶನ ಲಾಭ ಕೊಟ್ಟರು; ಕತ್ತು ನೀಡಿ ಮಾಲಾರ್ಪಣ ಮಾಡಿಸಿಕೊಂಡರು. ಹಸ್ತಚಾಲನದಿಂದ ವಿಭೂತಿ ಸೃಷ್ಟಿಸಿ, ಇಬ್ಬರಿಗೂ ಕೊಟ್ಟರು. ಅವರು ತಂದ ಹೂವನ್ನೇ ಅವರ ಕೈಯಲ್ಲಿರಿಸಿ, "ತೆಗೆದುಕೊಳ್ಳಿ ಪ್ರಸಾದ" - ಎಂದರು. "ಬರ್ತೇನೆ ತಾಯಿ" - ಎಂದು ನುಡಿದಾಗಂತೂ, ಅವರು ಆನಂದಾಶ್ಚರ್ಯಗಳಿಂದ ಸ್ತಂಭೀಭೂತರಕಾದರು. "ಕರುಣಾ ವರುಣಾ ಲಯ " - ಎಂದು ನಾವು ಸ್ವಾಮಿಯನ್ನು ಆರಾಧಿಸುವುದರಿಂದಲೇ ಎಂದು ನನಗೂ ಮನವರಿಕೆಯಾಯಿತು.

ಲಕ್ರವರಂ ಗ್ರಾಮ ಸಮೀಪಸುತ್ತಲೇ, ಸ್ವಾಮಿ ಕಾರನ್ನು ಬಲಕ್ಕೆ ತಿರುಗಿಸುವಂತೆ ಅಪ್ಪಣೆ ಮಾಡಿದರು. ನಿಲ್ಲಿಸು ಎಂಬ ಆಜ್ಞೆ ಹೊರಡುವ ತನಕ ಕಾರು, ಆ ಹೊಲದ ಮೇಲಿನ ಹೊಲಸು ದಾರಿಯಲ್ಲೇ ಹಳ್ಳ ಕೊಳ್ಳಗಳನ್ನು ಹಾದುಹೋಯಿತು. "ಎಲ್ಲಿಗೆ ಸ್ವಾಮಿ" - ಎಂದು ಕೇಳಲು ಕಾರಲ್ಲಿದ್ದವರಾರಿಗೂ ಧೈರ್ಯ ಬರಲಿಲ್ಲ. ಸ್ವಾಮಿಯೂ ಹೇಳಲಿಲ್ಲ. ಮೈಲಿ ದೂರ ದಾಟಾಯಿತು. ಕತ್ತಿಮಂಡ ಎಂಬ ಒಂದು ಕುಗ್ರಾಮ ಕಾಣಿಸಿತು. ಅಲ್ಲೊಂದು ಮನೆಯ ಮುಂದೆ ಕಾರು ನಿಲ್ಲಿಸಿದರು. ಆ ಮನೆಯೊಳಗಿಂದ ಭಕ್ತರೊಬ್ಬರು ಮಕ್ಕಳು ಮರಿಗಳು, ಮುದುಕರು, ಮೋಟರು ಎಲ್ಲ ಕಾರು ಹತ್ತಿರಕ್ಕೆ ಧಾವಿಸಿ ಬಂದರು. ಆತನನ್ನು ನಾನು ಬಲ್ಲೆ. ಭಾರ್ಯೆ ತೀರಿಕೊಂಡಾಗ, ಎರಡನೆಯ ಮದುವೆ ಮಾಡಿಕೊಂಡಿದ್ದ. ಆಕೆಯನ್ನು ಮೊದಲನೆಯವಳು ಕಾಡಿಸಿ ಪೀಡಿಸುತ್ತಿದ್ದಳಂತೆ. ಐದು ಬಾರಿ ಗರ್ಭಸ್ರಾವ ಸಂಭವಿಸಿ, ಆರನೆಯ ಬಸುರಿನಲ್ಲಿ ಆತ ಪುಟ್ಟಪರ್ತಿಗೆ ಬಂದು ಹೆಂಡತಿಯನ್ನು ಸ್ವಾಮಿಯ ಆಸ್ಪತ್ರೆಗೆ ಸೇರಿಸಿದ. ಸ್ವಾಮಿಯ ಆಶೀರ್ವಾದ ಬಲದಿಂದ ಏಳನೆಯ ತಿಂಗಳಲ್ಲೇ ಹೆರಿಗೆ ಆಯಿತಾದರೂ, ಹುಟ್ಟಿದ ಗಂಡು ಮಗು ಬದುಕಿ ಬೆಳೆದು ಗುಂಡು ಗುಂಡಾಗಿ ಮೈಕೈ ತುಂಬಿಕೊಂಡು, ನೆಲದ ಮೇಲೆ ಈಜು ಕಲಿಯಿತು. ಆಗ ಅವರನ್ನು ಸ್ವಗ್ರಾಮಕ್ಕೆ ಹಿಂತಿರುಗಲು ಸ್ವಾಮಿ ಸಮ್ಮತಿಸಿದರು. ತಮ್ಮ ಮನೆ ಬಾಗಿಲಲ್ಲೇ, ತಮ್ಮ ಇಷ್ಟ ದೇವತಾ ದರ್ಶನ ದೊರಕಿದಾಗ, ಮೂರು ವರ್ಷದ 'ಸಾಯಿ ಪ್ರಸಾದ್' ಹುಡುಗ, ಸ್ವಾಮಿಯ ಪಾದಗಳನ್ನು ತಾನೇ ಓಡಿ ಹೋಗಿ ಹಿಡಿದಾಗ, ಆತನಿಗೂ, ಮನೆಯವರಿಗೂ, ಗ್ರಾಮಸ್ಥರಿಗೂ ಅಮಿತಾನಂದ.

ವಾಪಸ್ ದೊಡ್ಡ ರಸ್ತೆಗೆ ಬಂದು, ಕಡಲಿ ಗ್ರಾಮದ ತಲುಪಿದರು. ಪುಟ್ಟಪರ್ತಿಯಲ್ಲಿ ಸ್ವಾಮಿ ಸ್ಥಾಪಿಸಿದ್ದ ವೇದಶಾಸ್ತ್ರ ಪಾಠಶಾಲೆಯ ಮುಖ್ಯಾಧಿಕಾರಿ, ವೇದ ಸಾಮ್ರಾಟ್ ಬ್ರಹ್ಮಶ್ರೀ ಕಾಮೇಶ್ವರ ಘನಪಾಠಿ (ಕಾಮಾವಧಾನಿ ಅವರು)ಗಳ ಸ್ವಗ್ರಾಮ ಅದು. ಅವರ ಮನೆಗೆ ಸ್ವಾಮಿ ಭೇಟಿ ಇತ್ತರು. ಪ್ರಥಮ ದರ್ಶನ ಮುಹೂರ್ತದಿಂದಲೇ ಕಾಮಾವಧಾನಿಗಳು, ಸ್ವಾಮಿಯ ಅವತಾರ ತತ್ವವನ್ನರಿತು, ಸನ್ನಿಧಿಯಲ್ಲೇ ನಿಂತರು.

ಕಡಲಿ ಸೇರುವುದಕ್ಕೆ ಇನ್ನೂ ಒಂದು ಮೈಲಿ ದೂರ ಎನ್ನುವಾಗ, ನಡೆದ ಒಂದು ಸಂಭವವನ್ನು ಆಗಲೇ ಹೇಳಬೇಕಾಗಿತ್ತು; ಮರೆತೆ. ಆ ರಸ್ತೆ ಮೇಲೆ ಮೂರು ನಾಲ್ಕು ಹೆಂಗಸರು-ಆ ಪೈಕಿ ಕೋಲೂರಿಕೊಂಡು ನಡೆಯುತ್ತಿದ್ದ ಇಬ್ಬರು ಅಜ್ಜಿಯರು-ಕಡಲಿಗೆ ಹೋಗುತ್ತಾ ಇದ್ದರು, ತಮ್ಮ ತಮ್ಮಲ್ಲೇ ಮಾತನಾಡುತ್ತಾ. ಸ್ವಾಮಿ ಕಾರು ನಿಲ್ಲಿಸಿ, "ಎಲ್ಲಿಗೆ ಹೊರಟಿದ್ದೀರಿ?" - ಎಂದು ಕೇಳಿದರು. "ಸಾಯಿಬಾಬಾ ದರ್ಶನಕ್ಕೆ" - ಎಂದರವರು. ಬಾಬಾ ನಕ್ಕರು. ಬಾಗಿಲು ಕೆಳಗಿಳಿದರು. "ನಾನೇ ಸಾಯಿಬಾಬಾ. ಅಲ್ಲಿಯ ತನಕ, ಪಾಪಾ ನೀವೇಕೆ ನಡಿಯಬೇಕು?" - ಎಂದರು. ಅವರು ನಂಬಲಿಲ್ಲ. "ಬಿಡಿರಿ! ಸಾಯಿಬಾಬಾ ಅಲ್ಲೇ ಇದ್ದಾರೆ. ಇಲ್ಲಿ ನಿಂತುಕೊಂಡು ನೀವೇ ಸಾಯಿಬಾಬಾ ಅಂತ ನಿವಂದರೆ, ನಂಬುವವರು ಯಾರು?" - ಎಂದು ಹೇಳುತ್ತ ಅವರು ಬಿರು ಬಿರನೆ ಕಡಲಿ ಕಡೆ ಮುಂಬರಿದರು. ಆಗ ನಾವು ಅವರ ಹಿಂದೆ ಹೋಗಿ, ನಿಜ ತಿಳಿಸಿ, ಹಿಂದಕ್ಕೆ ತಂದು ಸ್ವಾಮಿಯ ಮುಂದೆ ನಿಲ್ಲಿಸಿದೆವು. "ತಪ್ಪಾಯ್ತು ಸ್ವಾಮಿ"- ಎಂದು ಅವರು ಕಾಲಿಗೆ ಬಿದ್ದರು. ಸ್ವಾಮಿ ಅವರನ್ನು ಸಮಾಧಾನ ಪಡಿಸಿ, ಅವರಿಗೆ ವಿಭೂತಿ ಸೃಷ್ಟಿಸಿ ಕೊಟ್ಟು, "ಅಷ್ಟು ದೂರ ಇನ್ನು ಏಕೆ ನಡೆಯಬೇಕು? ಊರಿಗೆ ಹಿಂತಿರುಗಿ" - ಎಂದರು. "ಬಯಸಿದ ಭಾಗ್ಯ ದೊರೆಯಿತಲ್ಲಾ!" - ಎಂದು ನಾವು ದನಿ ಗೂಡಿಸಿದೆವು.

ಜೊತೆ ಕಾರುಗಳನ್ನೆಲ್ಲ ಕಾಲುವೆ ಸಮೀಪದಲ್ಲೇ ಉಳಿಯಲು ಹೇಳಿ, ಸ್ವಾಮಿ ಸಿಖಿನೇಟಪಲ್ಲಿ (ದೇವಾಲಯ ಮಂತ್ರಿ ರಾಮಲಿಂಗ ರಾಜು ಅವರ ಊರು)ಗೆ ತೆರಳಿದರು. ನಾಲ್ಕು ಗಂಟೆಗಳ ಕಾಲ ನಾವು, ಸ್ವಾಮಿ ಕಾರು ಹಾರನ್ ಶಬ್ದ ಯಾವ ಗಳಿಗೆಯಲ್ಲಿ ಕೇಳಿ ಬರುತ್ತದೋ ಎಂದು, ಕಿವಿ ಉದ್ದ ಮಾಡಿ ಕತ್ತಲೆಯಲ್ಲಿ ಕುಳಿತಿದ್ದೆವು. ಅರ್ಧರಾತ್ರಿ ಆಯಿತು, ಕರ್ಣ ಪುಳಕಗೊಂಡಾಗ! ರಾಜಮಹೇಂದ್ರಾಭಿಮುಖವಾಗಿ ಕಾರುಗಳು ಕಾಲಿರಿಸಿದಾಗ!

ಜನವರಿ ೨೫ ರಾಜಮಹೇಂದ್ರಿ ನಗರದ ಭಕ್ತರಿಗೆ ಭಾರೀ ಹಬ್ಬ. ಮೂರು ಮೋಟಾರ್ ಬೋಟುಗಳ ತುಂಬ ಭಕ್ತರು, ಸ್ವಾಮಿಯ ಸಂಗಡ ಗೋದಾವರಿಯ ಎಡಗಡೆಯ ಪ್ರವಾಹ ಬಾಹುವನ್ನು ದಾಟಿ, ಅದಕ್ಕೂ, ಬಲಗಡೆಯ ಪ್ರವಾಹ ಬಾಹುವಿಗೂ ಮಧ್ಯ ಹರಡಿರುವ ಮರುಳು ದಿಣ್ಣೆಯ ಮೇಲೆ ಕುಳಿತರು. ಭಜನೆಗಾನ ಮಾಡಿದರು. ಒಂದೂವರೆ ಮೈಲಿ ಆಚೆ ರಾಜಮಹೇಂದ್ರಿಪುರ ಮಿಣಕುತ್ತಿತ್ತು. ಒಂದೂವರೆ ಮೈಲಿ ಈಚೆ ಕೊವ್ವೂರು ಎಂಬ ಪಟ್ಟಣ ಮಿಣುಕುತ್ತಿತ್ತು. ನಡುವೆ ನಾವು, ಶೀತಳ ಚಂದ್ರಿಕೆ, ಮಂದಮಾರುತ, ಸುಮಧುರಗಾನ, ದೈವಸನ್ನಿಧಿ.

ನವನೀತಚೋರ ಎಂಬ ತತ್ವದ ಗೂಢಾರ್ಥವನ್ನು ವಿವರಿಸುತ್ತ, ಮರಳಲ್ಲಿ ಕೈ ಆಡಿಸುತ್ತ ಬಲಗೈಯಲ್ಲಿ ಬೆಣ್ಣೆ ಮುದ್ದೆ ಹಿಡಿದ ಅಂಬೆಗಾಲು ಕೃಷ್ಣ ವಿಗ್ರಹವನ್ನು ಸೃಷ್ಟಿಸಿದರು. ದ್ವಾದಶ ಲಿಂಗಗಳು ಎಲ್ಲೆಲ್ಲಿ ಎಂದು ವರ್ಣಿಸಿದರು. ಆಕಾಶಲಿಂಗ ಹಾಗೆ ಕೆಳಕ್ಕೂ ಬೀಳದೆ ಮೇಲಕ್ಕೂ ಏಳದೆ ನಿಂತಿರುವುದಕ್ಕೆ, ವೈಜ್ಞಾನಿಕ ರಹಸ್ಯವೇ ಕಾರಣ. ನೇರ ಮೇಲುಭಾಗದಲ್ಲೂ,

ನೀರ ತಳದಲ್ಲೂ, ಆಯಸ್ಕಾಂತ ಶಿಲೆಗಳಿವೆ ಎಂದೂ, ಆ ಲಿಂಗ ಕಬ್ಬಿಣದ್ದೆಂದೂ ಅವರು ಹೇಳಿದಾಗ, ಅದರ ಗುಟ್ಟು ಎಲ್ಲರಿಗೂ ಮನದಟ್ಟಾಯಿತು. ಆ ಗುಡಿಯಿಂದ, ಹಿಡಿತದಿಂದ ತಪ್ಪಿಸಿ ಇಲ್ಲಿಗೆ ಬರ ಮಾಡುತ್ತೇನೆ, ನಿಮಗೆ ನೋಡುವ ಆಸೆ ಇದ್ದರೆ, ಎಂದರು. ನಾವು 'ಆಸೆ ಇಲ್ಲ' ಎಂದು ಹೇಳುತ್ತೇವೆಯೇ, ಇಂಥ ಅನುಗ್ರಹ ಲಗ್ನ ಪ್ರಾಪ್ತಿಸಿರುವಾಗ? ಕೈ ಆಡಿಸಿ, ಇಗೋ ಎಂದರು. ನಾವೆಲ್ಲರೂ ಅದನ್ನು ಶಿರದ ಮೇಲಿರಿಸಿ, ಕಣ್ಣಿಗೊತ್ತಿ, ಮನಸ್ಸಿಲ್ಲದ ಮನಸ್ಸಿನಿಂದ ಪಕ್ಕದವರ ಕೈಯಲ್ಲಿರಿಸಿದೆವು. ಅದನ್ನು ಕರವಸ್ತ್ರದಲ್ಲಿ ಸುತ್ತಿ ಸಮೀಪದಲ್ಲೇ ಕುಳಿತಿದ್ದ ಒಬ್ಬ ಯುವಕನಿಗೆ ಕೊಟ್ಟು, 'ಭದ್ರ' ಎಂದು ಎಚ್ಚರಿಸಿದರು. ಒಂದೆರಡು ನಿಮಿಷ ಕಳೆದು, "ಎಲ್ಲಿ ? ಕೊಡು" - ಎಂದು ಕೈ ನೀಡಿದರು. ಲಿಂಗ ಮಂಗಮಾಯ. "ಸ್ವಸ್ಥಾನ ಸೇರಿತು. ಬಿಡು" - ಎಂದು ಸ್ವಾಮಿ ಅವನನ್ನು ಸಾಮಾಧಾನಗೊಳಿಸಿದರು.

ಮರುದಿನ ಸ್ವಾಮಿ ಆ ಪಟ್ಟಣದ "ಲಯನೆಸ್ ಕ್ಲಬ್" ಸದಸ್ಯರ ವಿಶೇಷ ಸಭೆಯಲ್ಲಿ ಮಾತನಾಡಿದರು. "ಲಯನ್ ಎಂದರೆ ಸಿಂಹ. ಸಿಂಹಕ್ಕೂ ಗಜಕ್ಕೂ ಅಜನ್ಮ ವೈರ, ಎಂದು ಜನಜನಿತ ಅಭಿಪ್ರಾಯ. ಆನೆ ಮಾನವನ ಮನಸ್ಸಿನಂತೆ. ಮಾಯಾಂಧಕಾರದ ಅರಣ್ಯದಲ್ಲಿ ಸ್ವೇಚ್ಛಾ ಸಂಚಾರ ಮಾಡುತ್ತದೆ. ಸಿಂಹ ಮಾನವನ ಬುದ್ಧಿಯ ಪ್ರತೀಕ. ಬುದ್ಧಿಶಕ್ತಿ ಸ್ಫುಟವಾಗಿ, ಸೂಕ್ಷ್ಮವಾಗಿ, ಸನ್ಮಾರ್ಗದಲ್ಲಿದ್ದರೆ, ಮನೋವಿಕಾರಗಳನ್ನು ಜಯಿಸಬಹುದು. ನಮ್ಮ ಕ್ಲಬ್‌ನ ಪರಮೋದ್ದೇಶ ಜನ ಸೇವೆ ಎಂದು ನಾನು ಬಲ್ಲೆ. ಆದರೆ ಸೇವೆ ಮಾಡುವಾಗ, ವಿವೇಕ, ವಿಚಕ್ಷಣೆ ಇರಬೇಕು. ಮನ ಬಂದಂತೆ ಸಲ್ಲಿಸುವ ಸೇವೆ, ಅಪಕಾರವಾದೀತು. ದೀನ ದಲಿತರನ್ನುದ್ಧರಿಸುವಾಗ, ಅವರು ಶ್ರೀಮಂತರು ನೀಡುವ ಭಿಕ್ಷೆಗಾಗಿ ಕೈಚಾಚಿ ನಿಲ್ಲುವಂತೆ ಮಾಡಬಾರದು. ಅವರ ಆತ್ಮಾಭಿಮಾನವನ್ನು ಅಪಮಾನಗೊಳಿಸಬಾರದು. ಅವರಲ್ಲಿ ಆತ್ಮ ವಿಶ್ವಾಸವನ್ನು ಬಿತ್ತಿ ಬೆಳೆಸಬೇಕು" - ಎಂದು ಉಪದೇಶಿಸಿದರು.

ಗೋದಾವರಿ ತೀರದಿಂದ ಸ್ವಾಮಿ ಏಲೂರು, ಗುಡುವಾಡ ಮಾರ್ಗ ವಿಜಯವಾಡಕ್ಕೆ ಬಂದರು. ಅಲ್ಲಿ ೨೦-೩೦ ಸಹಸ್ರ ಆಸ್ತಿಕರು ಅವರನ್ನು ಬರಮಾಡಿಕೊಂಡರು. ಅವರ ದಿವ್ಯೋಪನ್ಯಾಸದಿಂದ ಸ್ಫೂರ್ತಿ ಪಡೆದರು. ಅಲ್ಲಿಂದ ಸ್ವಾಮಿ ಆವಿರಿಪಲ್ಲಿಗೂ ಹೋಗಿ ಬಂದರು. ತರುವಾಯ ಮದ್ರಾಸ್ ನಗರಾಭಿಮುಖವಾಗಿ ಪ್ರಯಾಣ ಮಾಡಿದರು.

ಮರ್ಫೆಟ್ ಎಂಬ ಆಸ್ಟ್ರೇಲಿಯಾ ದೇಶದ ಭಕ್ತ ಬರೆಯುತ್ತಾನೆ" "ಏಸುಕ್ರಿಸ್ತ 'ನಾನೇ ನಿಮ್ಮ ದಾರಿ' - ಎಂದರು. ನಾನ್ಯಃ ಪಂಥಾ ಅಯನಾಯ ವಿದ್ಯತೆ, ಎಂದು ಋಗ್ವೇದದ ಪುರುಷಸೂಕ್ತ ಪುರುಷೋತ್ತಮನನ್ನು ಕುರಿತು ಘೋಷಿಸುತ್ತದೆ. ಅಂಥ ಪುರುಷೋತ್ತಮ ರೂಪತಾಳಿ ಬಂದಿರುವುದನ್ನರಿತ ನಾವು ಎಂಥ ಭಾಗ್ಯವಂತರು! ಅವರ ಸನ್ನಿಧಿಯಲ್ಲಿರುವಾಗ ಲೌಕಿಕ ವಿಷಯ ವಾಂಛೆಗಳೆಲ್ಲವೂ ತಗ್ಗಿ, ಭವ್ಯ ದಿವ್ಯ ಸ್ಪಂದನದಿಂದ ನಾವು ಆನಂದಭರಿತರಾಗುತ್ತೇವೆ. ಡಾ|| ಹಿಸ್ಲಾಪ್ ಎಂಬ ಅಮೆರಿಕನ್ ಸಮಾಜ ಶಾಸ್ತ್ರಜ್ಞ "ಭಾರತ

ದೇಶ ಸ್ವಭಾವತಃ ಭಗವದವತಾರಗಳಿಗೆ ಅತ್ಯುತ್ತಮ ಯೋಗ್ಯಕ್ಷೇತ್ರ. ರಾಮ, ಕೃಷ್ಣ, ಬುದ್ಧ, ಸತ್ಯಸಾಯಿಬಾಬಾ ಎಲ್ಲರೂ ಭಾರತೀಯರಾಗಿಯೇ ಬರಬೇಕಾಯಿತು. ಭಾರತ, ಲೋಕದ ಹೃದಯ. ಅಮೆರಿಕನಾದ ನನ್ನ ಹೃದಯು ಕೂಡ ಭಾರತೀಯ ಹೃದಯವಾಗಿದೆ. ಹಾಗಿಲ್ಲದಿದ್ದರೆ ನನ್ನ ಬದುಕು ಬರಡು ಬೂದಿ.

ಮತ್ತೊಂದು ವಿಷಯ ಕಡೆಗೂ ವಾಚಕರ ಗಮನ ಸೆಳೆಯಬೇಕಾಗಿದೆ. ಸಾಯಿ ಅವತಾರದ ಹಿರಿಮೆಯನ್ನು ಕುರಿತದ್ದು. "ಶ್ರೀ ಅರವಿಂದರು ಮತ್ತು ಶ್ರೀ ಮಾತಾ" - ಎಂಬ ಗ್ರಂಥದಲ್ಲಿ ಹೀಗೆ ಪ್ರಕಟವಾಗಿದೆ. - ೧೯೨೬ ನವೆಂಬರ್ ೨೪ರಂದು, ಕೃಷ್ಣ ಪಾರ್ಥಿವ ದೇಹ ವಾಶ್ರಯಿಸಿ ಇಳಿದ. ವಿರೋಧಿಸಲೂ ನಿರೋಧಿಸಲೂ ಸಾಧ್ಯವಾಗದ ಒಂದು ಮಹಾಶಕ್ತಿಯ ಮಾನವ ಹೃದಯಗಳಲ್ಲಿ ಅಮರಜ್ಯೋತಿಯನ್ನು ಬೆಳಗಿಸುತ್ತದೆ. ಆ ಶಕ್ತಿಯ ವಿಜಯಧ್ವನಿಯನ್ನು ಕೋಟಿ ಜನರು ಕೂಡಿ ಕೇಳುತ್ತಾರೆ. ಹಿಂದಿನ ದಿನ ಅವತಾರ ನೆರವೇರಿಸಿದ ಸಾಯಿಕೃಷ್ಣನನ್ನು ಕುರಿತೇ ಈ ಘೋಷಣೆ, ಎಂಬುದು ನಿಸ್ಸಂದೇಹ.

ಶಿವರಾತ್ರಿ ಉತ್ಸವ. ಬೆಳಿಗ್ಗೆ ಸ್ವಾಮಿ ಧ್ವಜಾರೋಹಣ ಮಾಡುವ ಮೊದಲು ಡಾ| ಹಿಸ್ಲಾಪ್, ಮಂದಿರದ ಅಂಗಳದಲ್ಲಿ ಸೇರಿದ್ದ ೨೦ ಸಾವಿರ ಜನರಿಗೆ, "ಎಂಥ ಅದ್ಭುತ ಸನ್ನಿವೇಶವಿದು! ಈ ಸುಂದರ ಸುಕೋಮಲ ವಿಗ್ರಹ, ಸರ್ವಜ್ಞ, ಸರ್ವಶಕ್ತಿ, ಸರ್ವವ್ಯಾಪಿ, ಸರ್ವಸಾಕ್ಷಿ, ಸೃಷ್ಟಿ ಸ್ಥಿತಿಯ ಕರ್ತ, ನಮ್ಮ ಮಧ್ಯೆ ನಡೆದು, ನಮ್ಮೊಂದಿಗೆ ನುಡಿದು, ನಮ್ಮನ್ನು ದುಃಖದಿಂದ ಪಾರು ಮಾಡಲು ಪ್ರಯತ್ನಿಸುತ್ತಿದೆ!" - ಎಂದರು. ಅವರ ಭಾಷಣ ಮುಗಿದ ಮೇಲೆ ಸ್ವಾಮಿ, ರಾತ್ರಿ ಎಂದರೆ ಕತ್ತಲೆ ಕವಿದಿರುವ ಮನಸ್ಸನ್ನು, ಶಿವಂ ಎಂದರೆ ಜ್ಞಾನ ಜ್ಯೋತಿಯಿಂದ ಬೆಳಗಿಸಬೇಕೆಂದುದ್ಬೋಧಿಸಿದರು. ಜಾಗರಣೆಯ ಅರ್ಥ, ಸದಾ ಜಾಗರೂಕರಾಗಿರಬೇಕೆಂಬುದೇ. ಉಪವಾಸವೆಂದರೆ, ಭಗವಚ್ಚಿಂತನೆಯಿಂದ ಅಂತಃಕರಣವನ್ನು ದಿವ್ಯ ಸನ್ನಿಧಿಯಲ್ಲೇ ವಾಸಮಾಡಿಸಬೇಕೆಂಬುದೇ ಅರ್ಥ. ಆಹಾರ ತಿನ್ನಬಾರದೆಂದರೆ, ಹೊಟ್ಟೆಯ ಆಹಾರವನ್ನು ಮಾತ್ರ ನಿಷೇಧಿಸಿದರೆ ಪೂರ್ಣ ಫಲ ಸಿಗದು. ಇಂದ್ರಿಯಗಳಿಗೂ ಆ ಪುಣ್ಯ ದಿನದಲ್ಲಿ ಆಹಾರ ತಿನ್ನಿಸಬಾರದು. ಅವುಗಳ ನಿಗ್ರಹಕ್ಕೆ ಬೇಕಾದ ಸಾಧನೆಗಳನ್ನು ಕಲಿತು ಅಭ್ಯಾಸ ಮಾಡಬೇಕು, ಎಂದರು.

ಪ್ರಶಾಂತಿ, ಧ್ವಜದ ಅಂತರಾರ್ಥ, ದಶೋಪನಿಷತ್ತುಗಳ ಸಾರವೇ ಆಗಿದೆ. ಕಾಮ, ಕ್ರೋಧ, ಲೋಭಗಳನ್ನು ಗೆದ್ದ ಸಾಧಕ, ವಿಶಾಲ ಪ್ರೇಮದಲ್ಲಿ ನೆಲೆಗೊಂಡ ನಂತರ, ಧ್ಯಾನದಲ್ಲಿ ಕುಳಿತು, ಯೋಗದಲ್ಲಿ ಮುಂಬರಿದು, ಪ್ರಾಣ ಶಕ್ತಿಯನ್ನು ಪ್ರಣವನಾದದಿಂದ ಪ್ರವರ್ಧಮಾನವಾಗಿಸಿ, ಪ್ರಕಾಂತಿಯನ್ನು ಪಡೆಯುತ್ತಾನೆ. ಅವನ ಹೃದಯ ಕಮಲ, ಆ ಕಾಂತಿಗೆ ಅರಳುತ್ತದೆ. ಅವನು ಪ್ರಶಾಂತಿಯನ್ನು ಹೊಂದಿ, ತಾನೆ ಪರಂಜ್ಯೋತಿಯಾಗಿ, ಬೆಳಕು ಬೆಳಕಲ್ಲಿ ಬೆರೆಯುತ್ತದೆ. ಇದೇ ಆ ಧ್ವಜದ ಸಂದೇಶ.

ಬೆಳಗ್ಗೆ ಸಭಾಭವನದಲ್ಲಿ, ಅಖಂಡ ವಿಭೂತಿ ವರ್ಷದಿಂದ ಸ್ವಾಮಿ, ಶಿರ್ಡಿ ಸಾಯಿ ವಿಗ್ರಹಕ್ಕೆ ಅಭಿಷೇಕ ಮಾಡಿದರು. ಅಂದರೆ, ತಾವು ವಿಭೂತಿ ಅಭಿಷೇಕ ಮಾಡಿಕೊಂಡು ಸಂತೋಷಿಸಿದರು. ಸಂಜೆ ಶಾಂತಿ ವೇದಿಕೆಯ ಮುಂದಿನ ವಿಶಾಲಾಂಕಣದ ತುಂಬ, ಭಕ್ತರು ಕಿಕ್ಕಿರಿದು ಸೇರಿದರು. ಲಿಂಗೋದ್ಭವ ಸಮಯಕ್ಕೆ ಸರಿಯಾಗಿ, ನಿಲಯದಲ್ಲಿರಬೇಕೆಂಬ ಆತುರದಿಂದ, ಬೆಂಗಳೂರು, ಹೈದರಾಬಾದ್, ಮದ್ರಾಸ್, ಬೊಂಬಾಯಿ, ಧಾರವಾಡಗಳಿಂದ ಬಸ್ಸುಗಳೂ ಕಾರುಗಳೂ ಸಾಲಾಗಿ ಒಂದನ್ನೊಂದು ಹಿಂದಿಕ್ಕಿ, ಅತಿ ವೇಗದಿಂದ ಬರುತ್ತಿದ್ದುವು. ಮಾರ್ಗ ಬಂಧುವಾದ ಬಾಬಾ ಅವರು, ಆ ವಾಹನಗಳ ಸಂಗಡವೇ ಇದ್ದಿರಬೇಕಲ್ಲವೆ? ಪ್ರಖ್ಯಾತ ನೇತ್ರ ವೈದ್ಯ ಡಾ| ಎ. ರಂಗರಾವು ಅವರು ತಮ್ಮ ಕಾರಿನಲ್ಲಿ ಬೆಳಗ್ಗೆ ೬ ಗಂಟೆಗೆ ಮದ್ರಾಸ್ ನಗರದಿಂದ ಹೊರಟರು. ಆದರೆ ಅಲ್ಲಲ್ಲಿ ಆಗಾಗ, ಆ ಕಾರು ತುಂಟತನ, ಮೊಂಡತನ ಮಾಡುತ್ತಲೇ ಇತ್ತು. ಎಂದೂ ಇಲ್ಲದ ಗಂಡಾಂತರ. ಧ್ವಜಾರೋಹಣ ನಡೆಯುತ್ತಿರುವಾಗ, ರಂಗರಾಯರು ರಾಣಿಪೇಟೆಯಲ್ಲಿ. ವಿಭೂತಿ ಅಭಿಷೇಕ ಸಮಯ, ಅವರು ಪಲಮನೇರು ಸೇರಿದಾಗಲೇ ದಾಟಿ ಹೋಯಿತು. ಎರಡು ಗಂಟೆಗೆ ಅವರು ಚಿಕ್ಕಬಳ್ಳಾಪುರ ತಲುಪಿರಲಿಲ್ಲ. ಆದರೂ ಕಾರು ಗಟ್ಟಿ ಕೂತೇ ಬಿಟ್ಟಿತು. ನೂಕಿದರೂ ಕದಲದು, ಎಳೆದರೂ ಕದಲದು. ಕೊಂಚ ಹೊತ್ತಿನಲ್ಲಿ ಬೆಂಕಿ ಹತ್ತಿಕೊಂಡಿತು. ರಂಗರಾಯರು ಬರೀತಾರೆ. "ಡ್ರೈವರ್ ಮಹಾಶಯ, ಅವನ ಹಣೆಯ ಬರಹ ಚೆನ್ನಾಗಿತ್ತು: ಹೌಹಾರಿ ಹೊರಕ್ಕೆ ಬಿದ್ದು ಉಳಿದುಕೊಂಡ. ಉರಿಯುತ್ತಿದ್ದ ಷರಾಯಿಯನ್ನು ಹಿಸುಕಿ ಆರಿಸಿದಾಗ, ತೊಡೆ, ಅಂಗೈಗಳಲ್ಲಿ ಸುಟ್ಟ ಗಾಯ ಜಾಸ್ತಿ. ನಾನು ಸಾಯಿರಾಂ ಸಾಯಿರಾಂ ಎಂದು ಕೂಗಿಕೊಂಡೆ. ರಸ್ತೆ ಪಕ್ಕ ನಿಂತು, ಮಣ್ಣು ತೆಗೆದು, ಹಿಡಿ ಹಿಡಿ ಬೆಂಕಿಯ ಮೇಲೆ ಎರಚಿದೆ. ನಂಬುವುದಿಲ್ಲ ಯಾರೂ! ಆದರೂ ನಂಬಬೇಕು. ನಡೆದದ್ದನ್ನು ಇಲ್ಲವೆನ್ನುವುದು ಹೇಗೆ? ಬೆಂಕಿ ಆರಿತು ! ಪೆಟ್ರೋಲ್ ಟ್ಯಾಂಕಲ್ಲಿ ಅದರ ಮುಕ್ಕಾಲು ಭಾಗ ತುಂಬಿತ್ತಾದರೂ, ಬೆಂಕಿ ಹರಡಲಿಲ್ಲ. ನಾನು ಯಾವುದೋ ಲಾರಿ ಹಿಡಿದು, ೧೨ ಮೈಲಿ ದೂರದ ಚಿಕ್ಕಬಳ್ಳಾರಿಪುರದಿಂದ, ಒಬ್ಬ ಮೆಕ್ಯಾನಿಕ್ಕನ್ನು ಕರೆದುತಂದೆ. ಅವನು ತನ್ನ ಕೆಲಸ ಬೇಗ ಬೇಗ ಪೂರೈಸಿದ. ೨-೩೦ಕ್ಕೆ ನಾವಿನ್ನೂ ೫೦ ಮೈಲಿ ದೂರದಲ್ಲಿದ್ದೆವು. ಚಕ್ರ ಹಿಡಿದು ನಾನೇ ಕುಳಿತಿದ್ದೆ. ನನ್ನ ಡ್ರೈವರ್ ಡಿಕ್ಕಿಯೊಳಗೆ ಕೂತು, ಆಗಾಗ ಪಂಪು ಅಲ್ಲಾಡಿಸಿ ಕಾರಿಗೆ ಜೀವ ಕೊಡುತ್ತಿದ್ದ. ಮಂದಿರದ ಮುಂದಿನ ಕಮಲ ಸ್ತಂಭವನ್ನು ನಾವು ಸಮೀಪಿಸಿದಾಗ, ಬಾಬಾ ಆಗ ತಾನೆ ಭಕ್ತ ವೃಂದ ಸಹಿತ ನಿಲಯದಿಂದ ಶಾಂತಿ ವೇದಿಕೆಗೆ ತೆರಳುತ್ತಿದ್ದರು." "ಬಂದಿರಾ? ಸಂತೋಷ, ಸಂತೋಷ" - ಎಂದರು ಬಾಬಾ ನಮ್ಮನ್ನು ಕಂಡಾಗ. ಕರೆತಂದವರು ಅವರೇ, ಸಂತೋಷವೂ ಅವರದೇ. ನಾನು ನನ್ನಲ್ಲೇ ಹೇಳಿಕೊಂಡೆ: "ಸಾಯಿ ದೇವಾ! ನೂರಾರು ದೇಶಗಳಿಂದ ಬಂದ ಜನರು, ನಿನ್ನನ್ನಿಲ್ಲಿ ಆರಾಧಿಸುತ್ತಿದ್ದಾಗ್ಯ, ಬಡಪಾಯಿ ನನ್ನ ಮೊರೆಯನ್ನು ಕೇಳಿ, ನನ್ನ ಮೇಲೆ ಕರುಣಾ ದೃಷ್ಟಿ ಬೀರಿ, ಕಾರಿಗೆ ಹೊತ್ತಿದ್ದ ಬೆಂಕಿಯನ್ನಾರಿಸಿದೆ; ಡ್ರೈವರ್ ಪ್ರಾಣ ಉಳಿಸಿದೆ. ನಿನ್ನ ಮುಖಮಂಡಲವನ್ನು ಕಣ್ಣಾರೆ ಕಂಡು ಆನಂದಿಸಲು, ನಮ್ಮನ್ನು

ಸಮಯಕ್ಕೆ ಸರಿಯಾಗಿ ಇಲ್ಲಿಗೆ ತಂದೆ. ಇಗೋ, ನನ್ನ ಶಕ್ತಿ ಸಾಮರ್ಥ್ಯ, ಆಸ್ತಿ ಪಾಸ್ತಿ, ಮನೆ ಮಠ ಎಲ್ಲವೂ ನಿನಗರ್ಪಿಸುತ್ತೇನೆ" - ಎಂದು ಶಪಥ ಮಾಡಿದೆ.

ಪ್ರಖ್ಯಾತ ಭೌತಿಕ ಶಾಸ್ತ್ರ ಸಾಮ್ರಾಟ್, ಡಾ| ಸೂರಿ ಭಗವಂತಂ ಅವರು, ಭಕ್ತ ವತ್ಸರಾದ ಸ್ವಾಮಿ, ಹೇಗೆ ಅವರ ಕಷ್ಟನಷ್ಟಗಳನ್ನು ನಿವಾರಣೆ ಮಾಡಲು, ರಾತ್ರಿ ಹಗಲೆನ್ನದೆ ಶ್ರಮಿಸಿ ಅನುಗ್ರಹಿಸುತ್ತಾರೆ ಎಂದು ವಿವರಿಸಿದರು. ಜೀವ ವಿಜ್ಞಾನ ಶಾಸ್ತ್ರದಲ್ಲಿ, ಅಖಿಲ ರಾಷ್ಟ್ರ ಸ್ಥಾಯಿಯಲ್ಲಿ ಖ್ಯಾತಿ ಪಡೆದಿರುವ ಡಾ| ಭಾಸ್ಕರನ್ ನಾಯರ್ ಅವರು, "ಸ್ವಾಮಿಯ ಪಾದ ಪಂಕಜಗಳಿಗೆ ಶರಣು ಹೋದ ನಂತರ, ನನ್ನ ಜೀವನ ಅರ್ಥಪೂರ್ಣವಾಯಿತು; ವಿಕಾಸಗೊಂಡಿತು. ಭಾರತ ದೇಶ, ಧನಬಲ, ಭುಜಬಲ, ಬುದ್ಧಿಬಲಗಳಿಗಿಂತ, ಆಧ್ಯಾತ್ಮಿಕ ಬಲಕ್ಕೆ ಹೆಚ್ಚು ಮನ್ನಣೆ ಕೊಡುತ್ತಾ ಬಂದಿದೆ. ಶಿವಾಜಿಯು ತನ್ನ ಗುರು ರಾಮದಾಸ್ ಎದುರು, ತಲೆ ಬಗ್ಗಿ ನಿಂತ ; ಕೇರಳದ ಮಾರ್ತಾಂಡವರ್ಮ ಮಹಾರಾಜ, ಇಡೀ ರಾಜ್ಯವನ್ನೇ ಅನಂತ ಪದ್ಮನಾಭ ಸ್ವಾಮಿ ಎಂಬ ಇಷ್ಟದೇವತೆಯ ಅಡಿದಾವರೆಗರ್ಪಿಸಿದ. ರಣರಂಗದಲ್ಲಿ ಮಡಿದು ಬಿದ್ದ ಕಳಿಂಗ ಯೋಧರನ್ನು ವೀಕ್ಷಿಸಿ, ಮನ ಮರುಗಿ, ಮುಂದೆ ಒರೆಯಿಂದ ಖಡ್ಗ ತೆಗೆಯಲಾರೆ ಎಂದು ತಪಿಸಿ, ಯುದ್ಧವನ್ನೇ ತೊರೆದ, ಅಶೋಕ ಚಕ್ರವರ್ತಿ. ಈಗ ಈ ದೇಶದಲ್ಲಿ ದ್ವೇಷಾಸೂಯೆಗಳು, ಕ್ರೂರ ಕೃತ್ಯಗಳು ಹೊಗೆಯಾಡುತ್ತಿವೆ. ಲೋಕದ ಮೂಲೆ ಮೂಲೆಗಳಲ್ಲೂ ಭಯ, ಅಶಾಂತಿ, ಅವಿಧೇಯತೆ, ಬಂಡಾಯ ಪ್ರಬಲಿಸುತ್ತಿದೆ. ಸಾಯಿ ಅವತಾರ, ಶಾಂತಿ ಸ್ಥಾಪನೆಗಾಗಿ ಎಂಬುದು ಸ್ಪಷ್ಟ" ಎಂದರು.

ಸುಮಾರು ೪೦ ನಿಮಿಷಗಳ ಕಾಲ, ಸ್ವಾಮಿ ತಮ್ಮ ಅಮೃತವಾಣಿಯಿಂದ ಜನಸ್ತೋಮವನ್ನು ತಣಿಸಿದರು. ಮನಸ್ಸಿನ ಚಂಚಲತ್ವವನ್ನೂ ಚಪಲತೆಯನ್ನೂ ಅಡಗಿಸಲು, ಅದನ್ನು ಇಂದ್ರಿಯಗಳ ಕಡೆ ಹರಿಯಬಿಡದೆ, ಬುದ್ಧಿಯ ಕಡೆಗೆ ತಿರುಗಿಸಬೇಕೆಂದು ಉಪದೇಶಿಸಿದರು. ಮಾತಿನ ನಡುವೆ ಆಗೊಮ್ಮೆ ಈಗೊಮ್ಮೆ ಕೆಮ್ಮಿದರು. ನಿಟ್ಟುಸಿರು ಬಿಡಬೇಕಾಯಿತು. ಕೊಂಚ ಹೊತ್ತು ಹಾಗೂ ಹೀಗೂ ವಾಕ್ಯಗಳನ್ನು ಮುಗಿಸಿದರು. ಭಜನೆ ಪ್ರಾರಂಭಿಸಿ ಎಂದು ಸನ್ನೆ ಮಾಡಿ, ಕುರ್ಚಿಯಲ್ಲಿ ಕುಳಿತು, ಮೇಜಿನ ಮೇಲೆ ಮೊಣಕೈ ಊರಿದರು. ಲಿಂಗೋದ್ಭವದ ಪುಣ್ಯ ಮುಹೂರ್ತ ಎಂದರಿತು, ೫೦ ಸಾವಿರಕ್ಕೂ ಹೆಚ್ಚಿನ ನಯನ ದೃಷ್ಟಿ ಸ್ವಾಮಿಯ ವದನಾರವಿಂದದಲ್ಲೇ ಕೇಂದ್ರೀಕೃತವಾಯಿತು. ಬಾಯಲ್ಲಿ ಭಜನೆ, ಕಣ್ಣಲ್ಲಿ ಸ್ವಾಮಿಯ ಶಿವಸ್ವರೂಪ !

ಚಂದ್ರನಂತಹ ವಿದ್ಯುದ್ದೀಪಗಳ ಬೆಳಕಿನಲ್ಲಿ, ಲಿಂಗೋದ್ಭವದ ಮಹಾಮಹಿಮೆಯನ್ನೂ ತಮ್ಮ ತತ್ವವನ್ನು ಪ್ರಜೆಗಳು ತಿಳಿದುಕೊಳ್ಳಬೇಕು ಎಂಬ ಅವತಾರ ಪುರುಷನ ಆತುರತೆಯನ್ನು ಜನ ಅರಿತುಕೊಂಡರು. ಹದಿನೈದು ನಿಮಿಷಗಳ ಪ್ರಯಾಣ ಕಾಲ, ನಾಭಿಯಿಂದ ಅಧರ ಸೇರಲು !

ಅಗೋ ! ನೀಲಿ ಬಣ್ಣದ ಭಾರೀ ಮಿಂಚು.. ಕಣ್ಣು ಕೋರೈಸುವ ಬೆಳ್ಳಿ ಮಿಂಚು ಮಾತ್ರವಲ್ಲ. ನೀಲಿ ಬಣ್ಣದ ಲಿಂಗ, ಸ್ವಾಮಿ ಕೈಯಲ್ಲಿ ಕಂಗೊಳಿಸುತ್ತಿದೆ. ಶಿಲ್ಪ ರತ್ನ.... ಕೋಳಿ ಮೊಟ್ಟೆಯ ಒಂದೂವರೆಯಷ್ಟು ಅದರ ಗಾತ್ರ. ಅಗೋ ಕುರ್ಚಿಯಲ್ಲಿ ಕುಳಿತೇ, ಬಲಗೈ ಬೆರಳಲ್ಲಿ ಹಿಡಿದು, ಎಲ್ಲರಿಗೂ ತೋರಿಸುತ್ತಿದ್ದಾರೆ. ಓಂ ಶಿವಾಯ, ಓಂ ಶಿವಾಯ, ಶಂಭೋ ಶಂಕರ ಓಂ ಶಿವಾಯ - ಧ್ವನಿ ಗಗನಕ್ಕೇರಿದೆ. ಸಭಾ ಮಂಟಪದ ಆಚೆ ತುದಿಯಲ್ಲಿ ಕುಳಿತಿರುವ ಮಂದದೃಷ್ಟಿ ಮುದುಕಿಗೂ, ಅದರ ದರ್ಶನ - ಏಕೆಂದರೆ ಅದು ನಕ್ಷತ್ರದಂತೆ ಶೋಭಿಸುತ್ತಿದೆ, ಆ ಬೆಳಕಿನ ಒತ್ತಪದಲ್ಲೂ !

"ಮಾಮೂಲಿನಂತೆ ಸ್ವಾಮಿ ಏಳಲಿಲ್ಲ ; ಮಂದಿರದ ಕಡೆಗೆ ನಡೆಯಲಿಲ್ಲ, ಅಲುಗಾಡದೆ ಅಲ್ಲೇ ಆಸೀನರಾಗಿದ್ದಾರೆ. ಏಕೆ ? ಮತ್ತೊಂದು ಲಿಂಗ ಕೂಡ ಉದರದಲ್ಲಿ ನಾಭೀ ಕಮಲದಲ್ಲಿ ಉದ್ಭವವಾಗಿ, ಪ್ರತ್ಯಕ್ಷಕ್ಕೆ ಬರಲು ಉತ್ಸಾಹ ತಾಳಿದೆ ಎಂದು ನಾವು ಅನುಮಾನಿಸಿದೆವು. ಹಾಗಾಗಿದ್ದೂ ಉಂಟು, ಹಿಂದೆ ಎರಡು ಮೂರು ಶಿವರಾತ್ರಿಗಳಲ್ಲಿ.'

ಆದರೆ ಐದು ಹತ್ತು ನಿಮಿಷಗಳಾಗಿ ಹೋದರೂ, ಎರಡನೆಯದರ ಚಿಹ್ನೆಗಳೊಂದೂ ಇಲ್ಲ. ಸ್ವಾಮಿ ಸೆಟೆದು ಕುಳಿತಿದ್ದಾರೆ ; ಚಲನ ಇಲ್ಲ. ಬಲಗೈ ಮೇಜಿನ ಮೇಲೆ ಬಿದ್ದಿದೆ. ಎರಡೂ ಮೊಣಕೈಗಳನ್ನೂ ಭದ್ರವಾಗಿ ಊರಿದ್ದಾರೆ. ಎಡಗೈ ಮಾತ್ರ ನೆಟ್ಟಗೆ, ಎರಡು ಬೆರಳುಗಳು ಕಣ್ಣಿನ ಹತ್ತಿರ, ಉಳಿದವು ಬಿಡಿಯಾಗಿ, ಬೇರೆಯಾಗಿ, ಬಿಗಿಯಾಗಿ ಕಾಣಿಸುತ್ತಿವೆ. ಉಂಗುರದ ಬೆರಳೂ, ಕಿರುಬೆರಳೂ ಕೊಂಚ ಬಗ್ಗಿವೆ. ಉಸಿರು ನಿಧಾನವಾಗುತ್ತಾ, ನಿಧಾನವಾಗುತ್ತಾ, ನಿಂತೇ ಹೋಗಿದೆ ಎಂಬ ಭಯ ಉಂಟು ಮಾಡುತ್ತಿದೆ.

ಅವರ ಕೈ ಹಿಡಿದು ರಕ್ತದ ಓಟವನ್ನು ಎಣಿಸುವ ಧೈರ್ಯ ಯಾರಿಗಿದೆ ! ಎಲ್ಲಿಗೆ ಹೋದರೋ ? ಏತಕ್ಕಾಗಿ ಹೊರಟರೋ ? ಸ್ವಾಮಿಯ ಎಡಗಡೆ ನಾನು ನೆಲದಲ್ಲಿ ಕುಳಿತಿದ್ದೆ. ಡಾ | ಭಗವಂತಂ ಅವರೂ, ಡಾ | ಭಾಸ್ಕರನ್ ನಾಯರ್ ಅವರೂ ಬಲಗಡೆ ಕುಳಿತಿದ್ದರು. ಐದು ನಿಮಿಷಗಳು ಕಳೆದರೂ ಸ್ವಾಮಿ ಹಾಗೆಯೇ ಇದ್ದರು. ಹೆಚ್ಚು ತಡಮಾಡದೆ ಹಿಂತಿರುಗುತ್ತಾರೆ ಎಂದು ನಾನು ಆಶಿಸಿದ್ದೆ. ಏಕೆಂದರೆ ಅಂಥ ಭಾರೀ ಜನಸಾಗರದೆದುರು ಅವರು ಎಂದೂ ಹೀಗೆ ದೇಹದಿಂದ ಬೇರೆಯಾಗಿ, ಇಚ್ಛೆ ಬಂದಂತೆ ಸಂಚಾರ ಮಾಡಿರಲಿಲ್ಲ. ಆದರೆ ಸ್ವಾಮಿಯ ಕರುಣೆ, ಎಷ್ಟು ಬೇಗ, ಎಷ್ಟು ದೂರ, ಯಾರ ಬಳಿಗೆ ಧಾವಿಸುತ್ತದೆ ಎಂದು ಯಾರು ಹೇಳಬಲ್ಲರು? ಯಾವ ಊರಿನ ಯಾವ ಮನೆಯಿಂದ ಯಾರು ಆರ್ತರಾಗಿ ಕೊರಳೆತ್ತಿ ಕರೆದರೂ ! ಹಿಂದೆ ಇಂಥ ರೋದನಕ್ಕೆ ಕಿವಿಗೊಟ್ಟು, ಭಕ್ತ ರಕ್ಷಣೆಗೆಂದು ಹೋದಾಗ, ಸ್ವಾಮಿ ನೆಲದಲ್ಲಿ ಪವಡಿಸುತ್ತಿದ್ದರು. ಆದರೆ ಈಗ ?

ಇಪ್ಪತ್ತು ಮಿನಿಟುಗಳು ! ನನ್ನಿಂದ ತಡೆಯಲಾಗಲಿಲ್ಲ. ಮಂಡಿಯೂರಿ ಕಿವಿಯ ಹತ್ತಿರ ಬಾಯಿರಿಸಿ, ಕೇಳಿಸಲೂ ಬೇಕು, ಕೂಗಲೂಬಾರದು, ಎಂಬ ಸಾಹಸ ಭೀತಿಗಳಿಂದ ಸ್ವಾಮಿ ಸ್ವಾಮಿ ಎಂದು ತೊದಲಿದೆ, ಹತ್ತಾರು ಬಾರಿ. ಭಗವಂತಂ ಅವರು, ಸ್ವಾಮಿ

ಎಚ್ಚರ ಮಾಡಿರಿ, ಎಂದು ಸನ್ನೆ ಮಾಡಿದರು. ಅಯ್ಯೋ ! ಸಮಸ್ತಾಪರಾಧ್ಯಂ ಎಂದು ನಾನು ಮರು ಸನ್ನೆ ಮಾಡಿದೆ.

ಮೂವತ್ತು ಮಿನಿಟುಗಳು, ಅರ್ಧ ಗಂಟೆ. ಆದರೆ ಭಕ್ತ ಸಮೂಹಕ್ಕೆ, ರಾತ್ರಿ ಪೂರ ಎಂದೆನಿಸಿರಬೇಕು. ಎಲ್ಲರ ಮುಖದಲ್ಲೂ ಆತಂಕ ; ಎಲ್ಲರ ಕಣ್ಣಲ್ಲೂ ನೀರು ; ಎಲ್ಲರ ಬಾಯಲ್ಲೂ ಸಾಯಿರಾಮಾ, ಸ್ವಾಮಿ ಮಾತ್ರ ಶಿಲಾ ವಿಗ್ರಹ.

ರಾಜಾರೆಡ್ಡಿ ಕೆಳಗೆ ಭಜನೆ ಗುಂಪಲ್ಲಿ ಕುಳಿತಿದ್ದವನು, ಏನಾದರೂ ಆಗಲಿ ಎಂದು ಶಾಂತಿ ವೇದಿಕೆ ಮೇಲೆ ಬಂದೇಬಿಟ್ಟ ! ಕೆಳಗೆ ಕುಳಿತಿದ್ದ ಮೆಕ್ಸಿಕೊ ದೇಶದ ಇಂದ್ರಾದೇವಿ ಅನಂತರ ನನಗೆ ಹೇಳಿದ್ದು. "ನಾನು ಸ್ವಾಮಿಯನ್ನು ನೋಡಲಿಲ್ಲ. ಭಯ, ದುಃಖ, ಭಕ್ತಿಭಾವಗಳ ಆವೇಶದಿಂದ ಅವರ ಕಡೆಗ ದೃಷ್ಟಿ ಹಾಯಿಸಲು ಮನ ಬರಲಿಲ್ಲ. ಆದರೆ ನಿಮ್ಮ ಮುಖವನ್ನೇ ನೋಡುತ್ತಿದ್ದೆ. ನಿಮ್ಮ ಮುಖಭಾವದಲ್ಲಾದ ಆಂದೋಳನದ ಅಲೆಗಳಿಂದಲೇ ನಾನು ಸ್ವಾಮಿಯ ವಿಚಿತ್ರ ಲೀಲೆಯ ಪರಿಳಿತವನ್ನರಿತುಕೊಂಡೆ" ಎಂದರು.

ಐವತ್ತೈದು ಮಿನಿಟುಗಳು .... ಆ! ಎಡಗೈ ಕಿರುಬೆರಳು ಅಲುಗಾಡಿತು. ಐದು ಬೆರಳೂ ಸೇರಿಕೊಂಡುವು. ಬಲಗೈ ಮೇಜಿನ ಮೇಲಿಂದ ತುಸು ಮೇಲೆದ್ದಿತು. ನಾನು ಜೋರಾಗಿ ಅತ್ತುಬಿಟ್ಟೆ. ಅವರ ಕಣ್ಣು ತೆರೆಯಿತು ; ನೋಡಿದರು. ಕಿರುನಗೆ ಚಿಮ್ಮಿತು. ಜನಕ್ಕೆ ಜೀವ ಬಂತು. ಸ್ವಾಮಿ ಎದ್ದರು. ನಿಲಯದ ಕಡೆ ಪಾದ ಬೆಳೆಸಿದರು. ನಾವು ಕೆಲವರು ಅವರ ಸಂಗಡ ಹೋದೆವು. "ಪ್ರಪಂಚದ ಸುತ್ತ ಮಾನಸ ಸಂಚಾರ ಮಾಡಿ ಬಂದೆ. ನಿಮಗೇಕೆ ಭಯ?" ಎಂದು ಡಾ | ಭಗವಂತಂ ಹತ್ತಿರ ಹೇಳಿದರು ಸ್ವಾಮಿ. ರಜಸ್ತಮೋಗುಣಗಳಿಂದ ಕಲುಷಿತ ಜಗತ್ತನ್ನು ಶಿವಮಯವಾಗಿ ಮಾರ್ಪಡಿಸಲು ಮಾಡಿದ ಭೂಪ್ರದಕ್ಷಿಣ ಅದು, ಲಿಂಗೋದ್ಭವದೊಂದಿಗೆ ಪ್ರೇಮೋದ್ಭವವೂ ಆ ದಿನ ನಡೆಯಿತು.

ಓದಿ ಓದಿ ತಲೆ ಕೆಡಿಸಿಕೊಂಡಿರುವ ಕೆಲವರು ಬುದ್ಧಿವಂತರು ಇವೆಲ್ಲ ನಿಜವಿರಲಾರದು ಎಂದು ರಾಗ ಎಳೆಯಬಹುದು. ಅಂಥವರೊಬ್ಬರಿಗೆ (ನ್ಯೂಯಾರ್ಕ್‌ನಿಂದ ಬಂದ ಖ್ಯಾತ ಸಾಹಿತಿ ಹಲ್ಮೈನ್‌ರಿಗೆ) ಸ್ವಾಮಿ ಹೇಳಿದ ಮಾತು ಗಮನಾರ್ಹ. "ನಿಮಗೆ ನಾನು ಹೇಗೆ ಅರ್ಥವಾದೇನು ? ಮೀನಿಗೆ ಆಕಾಶದ ಸ್ವರೂಪ ಸ್ವಭಾವಗಳು ಹೇಗೆ ಅರ್ಥವಾದೀತು ?" ಎಂದರು ಸ್ವಾಮಿ ಆ ಮಹಾಸಂದೇಹಿಗೆ. ನೀರೊಳಗೆ ಅದಕ್ಕು ವಿದ್ಯುಲ್ಲತೆಯ ಪ್ರತಿಬಿಂಬ ಕಾಣಿಸಬಹುದು ; ಸಿಡಿಲಿನ ಪ್ರತಿಧ್ವನಿ ಕೇಳಿಸಬಹುದು, ಅಷ್ಟೇ. ನೀರಿಂದೀಚೆಗೆ ಬಂದರೆ, ಅದು ಬದುಕಲಾರದು. ನಾವು ಮಾಯೆಯೊಳಗೆ ನಾವೇ ಕಲ್ಪಿಸಿಕೊಂಡಿರುವ ಗೂಡಿನೊಳಗೆ ಸಿಕ್ಕಿರುವ ಹುಳುಗಳು, ಹೊರ ಬಂದರೆ, ಉಳಿಯಲಾರೆವು. ಸ್ವಾಮಿ ಅಪ್ರಾಪ್ಯ ಮನಸಾಸಹ !

# ಸಂತೋಷ-ಸಂತೃಪ್ತಿ

ಎಮಿನ್ ರಾಂಡ್ ಎಂಬ ಪಾಶ್ಚಾತ್ಯ ತತ್ವಜ್ಞಾನಿ ಹೀಗೆ ಬರೆಯುತ್ತಾಳೆ "ಸದಾಚಾರ, ಸತ್ಸಂಪ್ರದಾಯಗಳನ್ನು ಮಕ್ಕಳಿಗೆ ಬೋಧಿಸಿದರೆ, ಅದರಿಂದ ಅವರಿಗೆ ತಮ್ಮ ಜೀವನದ ಗುರಿ ಏನು ಎಂಬುದು ನಿರ್ಣಯವಾಗದು. ಹೀಗೇಕೆ ಮಾಡಬಾರದು, ಹಾಗೇಕೆ ನಡೆಯಬೇಕು ಎಂದು ಅರ್ಥವಾಗದೆ, ಮಂಕು ಬಡಿದಂತೆ, ಅವು ಹಿರಿಯರಿಗೆ ಹೆದರಿ ಅವರನ್ನನುಸರಿಸುತ್ತವೆ. ಸಮಾಜ ಹೇರುವ ವಿಧಿ-ನಿಷೇಧಗಳ ಹೊರೆಯನ್ನು ಅವು ಮೂಕಪ್ರಾಣಿಗಳಂತೆ ಹೊತ್ತು ತಿರುಗುತ್ತವೆ. "ಹೌದು. ಆದ್ದರಿಂದಲೇ ಎಲ್ಲ ವಯಸ್ಸಿನ ಮಕ್ಕಳೂ, ಸ್ವಾಮಿಯ ಪ್ರೇಮಪೂರಿತ ಲಾಲನೆ ಪಾಲನೆಯಿಂದಾಕರ್ಷಿತರಾಗಿ ಅವರ ಸನ್ನಿಧಿಗೆ ಓಡೋಡಿ ಬರುವುದು; ಅಲ್ಲಿಂದ ಹೊರಬರಲು ಹಿಂಜರಿಯುತ್ತಿರುವುದು. "ಪಾಪ! ಅಮೆರಿಕಾ ದೇಶದ ಜನಕ್ಕೆ ತಾಯಿ ಒಲವೇನೆಂಬುದೇ ತಿಳಿದಿಲ್ಲ. ಅಲ್ಲಿಯ ಜೀವನ ಅತಿ ಕೃತಕ. ಆದ್ದರಿಂದಲೇ ಇವರು ನನ್ನ ಹತ್ತಿರ ಬರುತ್ತಿರುವುದು," ಎಂದು ಸ್ವಾಮಿ ಹೇಳುತ್ತಾರೆ.

ಶತಾವಧಾನಿ, ಮಹಾಮಹೋಪಾಧ್ಯಾಯ ಬಿರುದು ಹೊಂದಿರುವ, ಬ್ರಹ್ಮಶ್ರೀ ವೇಲೂರಿ ಶಿವರಾಮ ಶಾಸ್ತ್ರಿಗಳು, 'ತ್ರಿವೇಣಿ' ಪತ್ರಿಕೆಯಲ್ಲಿನ ತಮ್ಮ ಲೇಖನದಲ್ಲಿ, "ಬಾಬಾ ಅವರ ಅರ್ಥ ತಿಳಿಯದು. ಆದರೆ ಅವರನ್ನನುಸರಿಸಿದರೆ, ನಮ್ಮ ಬದುಕಿಗೆ ಅರ್ಥ ತುಂಬಿಕೊಳ್ಳಬಹುದು. ಅವರ ಸಮ್ಮುಖದಲ್ಲಿ ವಿಜ್ಞಾನಿಗಳು, ಅಜ್ಞಾನಿಗಳು. ಕಾರ್ಯಕಾರಣ ಸಂಬಂಧವನ್ನಾಧರಿಸುವ ತಾರ್ಕಿಕರಿಗೆ ಇಲ್ಲಿ ಸ್ಥಾನವಿಲ್ಲ. ಕರ್ಮಾನುಬಂಧವನ್ನಾಧರಿಸುವವರಿಗೆ ಸ್ಥಾನ ಸುಲಭ. ಅವರ ಸಹಸ್ರ ಮುಖಗಳಲ್ಲಿ ನಿಮಗೆ ಗೋಚರವಾಗುವದೊಂದೋ ಎರಡೋ. ಅಷ್ಟರಿಂದಲೇ ಅದ್ಭುತಾನಂದ ಪ್ರಾಪ್ತಿ. ಆದರೆ ಎಷ್ಟು ಪ್ರಾಪ್ತಿಸಿದರೂ ತೃಪ್ತಿ ಸಿಗದು. ತೀರಾ ಸಮೀಪ ಇದ್ದರೂ, ಅವರು ನಮಗೆ ಅತಿ ದೂರ. ಲೋಕದ ತಾಯಂದಿರೆಲ್ಲರ ಪ್ರೇಮ ವಾತ್ಸಲ್ಯಕ್ಕಿಂತ ಗಾಢ, ಗೂಢ ಅವರ ವಾತ್ಸಲ್ಯ, ಅವರು ಮಕ್ಕಳ ಮೇಲೆ ಬೀರುವ ಪ್ರೇಮ" ಎಂದು ಬರೆದಿದ್ದಾರೆ.

ಶಿವರಾಮ ಶಾಸ್ತ್ರಿಗಳು ಅರವಿಂದಾಶ್ರಮದಲ್ಲಿದ್ದವರು. ಅದ್ವೈತ ಸಿದ್ಧಾಂತವನ್ನು ಅರೆದು ಕುಡಿದು ಜೀರ್ಣಿಸಿ, "ಅಭ್ಯಾಸ"ವನ್ನು ನಿರೂಪಿಸಿ ಅಮೂಲ್ಯ ಗ್ರಂಥ ಬರೆದಿದ್ದಾರೆ. ಭಾರತದ ಅನೇಕ ವಿಶ್ವವಿದ್ಯಾಲಯಗಳು, ತಮ್ಮ ಸಂಸ್ಕೃತ ಭಾಷಾ ಶಿಕ್ಷಣ ಸಮಿತಿಗಳ ಸದಸ್ಯತ್ವ ಒಪ್ಪಿಕೊಳ್ಳುವಂತೆ ಅವರನ್ನು ಬಲವಂತಪಡಿಸಿವೆ. ಅವರ ೭೫ನೇ ವಯಸ್ಸಿನಲ್ಲಿ ಅವರು ಪುಟ್ಟಪರ್ತಿಗೆ ಬಂದು, ಸುಮಾರು ಆರು ವರ್ಷಗಳ ಕಾಲ ಸ್ವಾಮಿ ಸನ್ನಿಧಿಯಲ್ಲಿದ್ದು, ಹಣ್ಣಾಗಿ ಜೀವಿತವೃಕ್ಷದಿಂದ ಕಳಚಿಕೊಂಡ ಮಹಾನುಭಾವ.

ಸ್ವಾಮಿಯ ತಾಯ್ತನವನ್ನೇ ಕಂಡು, ಉಂಡು ಹಿಗ್ಗಿದರು, ಶಾಸ್ತ್ರಿಗಳು. ನವರಾತ್ರಿಯಲ್ಲಿ ತಾಯನ್ನೇ ಆರಾಧಿಸುತ್ತೇವೆ. ಸಾಯಿಮಾತಾ ಅಷ್ಟ ಬಿಡಿಸುವವಳು, ಉಣ ಬಡಿಸುವವಳು, ನೀರ ನಡೆಸುವವಳು. ಆದ್ದರಿಂದ ನವರಾತ್ರಿ ಆ ಮಾತೆಯ ಆರಾಧನೆಗೆ ಮೀಸಲು, ಜನನ-ಮರಣಗಳ ನಡುವೆ ಹರಿಯುವ ಪ್ರವಾಹ ದಾಟುವುದಕ್ಕೆ ಅನುಕೂಲಿಸುವ ಪಾಂಚಭೌತಿಕ ಶರೀರವನ್ನು ಭದ್ರಗೊಳಿಸಲುಬೇಕಾದ ಬೋಧನೆಗಾಗಿಯೇ ಒಂದು ದಿನ, ದಲಿತರನ್ನು ಆಹಾರ, ವಸ್ತ್ರದಾನದಿಂದ ತುಷ್ಟಿಪಡಿಸಲು, ಮತ್ತೊಂದು ದಿನ, ವೇದ ಪಾಠಶಾಲೆ ಮಕ್ಕಳಿಂದ ನಾಟಕಾಭಿನಯ, ಒಂದು ದಿನ, ಅವರ ದಿವ್ಯೋಪದೇಶ ಪ್ರತಿದಿನ ಹೀಗೆ ಸಾಗಿತು ನವರಾತ್ರಿ. ಹೊರಾಂಗಣ ರಂಗಸ್ಥಳದಲ್ಲಿ, ಚಿತ್ರಮಂದಿರಗಳಲ್ಲಿ ನಮಗೆ ದೊರೆಯುವುದು ವಿಷಬೆರೆತ ವಿಷಯಗಳು; ಖಾರವಾದ ಸನ್ನಿವೇಶಗಳಿಂದ ಹೊಟ್ಟೆ ಉರಿಸಿ, ತಲೆಯಲ್ಲಿ ಬೆಂಕಿ ತುಂಬುವ ನಾಟಕಗಳು. ಕಿಸೆಕಾಸು ಕೀಳುವುದಕ್ಕಾಗಿ, ದೃಷ್ಟಿ ಕೆಡಿಸುವ ಕಠೋರ ದೃಶ್ಯಗಳು. ಪ್ರಶಾಂತಿ ನಿಲಯದಲ್ಲಿ ಮಾತ್ರ, ಕಥಾಕಾಲಕ್ಷೇಪವಾಗಲಿ, ಸಂಗೀತ ಕಚೇರಿಯಾಗಲಿ, ಕಾವ್ಯ ವಾಚನವಾಗಲಿ, ನಾಟಕವಾಗಲಿ, ಭಾಷಣವಾಗಲಿ, ಯಾವುದು ಜರುಗಿದರೂ, ಸತ್ಯ ಧರ್ಮ ಶಾಂತಿ ಪ್ರೇಮಗಳ ಪ್ರೇರಕ, ಪೋಷಕ, ಇವಲ್ಲದೆ, ವೇದ ಪುರುಷ ಸಪ್ತಾಹ ಜ್ಞಾನಯಜ್ಞ; ವಿಜಯದಶಮಿ ದಿನ ಅದರ ಪೂರ್ಣಾಹುತಿ ಮಹೋತ್ಸವ.

ಅಗ್ನಿಯ ಆರಾಧನೆ. ಉಳಿಸುವುದೂ ಉರಿಸುವುದೂ ಅಗ್ನಿ. ಪುಟಗೊಳಿಸುವುದೂ ಕಡೆಗಾಣಿಸುವುದೂ ಅಗ್ನಿ. ಮೆತ್ತಗೆ ಮಾಡುವುದೂ ಅಗ್ನಿ, ಶುದ್ಧಗೊಳಿಸುವುದೂ ಅಗ್ನಿ. ಸೂರ್ಯನ ಆರಾಧನೆ - ಪ್ರಾಣದಾತ, ತ್ರಾಣದಾತ, ಇಬ್ಬರೂ ಸೂರ್ಯನೇ. ಆಯುಸ್ಸು ಬೆಳೆಯುವುದೂ ಸೂರ್ಯನಿಂದ - ಅಳಿಯುವುದೂ ಅವನಿಂದ. ಸಹಸ್ರ ಲಿಂಗಾರ್ಚನೆ, ನಿರಾಕಾರ ಆಕಾರ ತಾಳಿದಾಗಿನ ಪ್ರಥಮ ಸ್ವರೂಪ ಲಿಂಗ. ಸಾಕಾರ ನಿರಾಕಾರವಾದಾಗಿನ ಅಂತಿಮ ಸ್ವರೂಪ ಲಿಂಗ. ಅದೇ ಧ್ಯಾನಕ್ಕೆ ಪರಮಯೋಗ್ಯವಾದ ರೂಪ.. ರಮಣ ಮಹರ್ಷಿಗಳು ಯಾರಿಗೆ ಪತ್ರ ಬರೆದರೂ, ಮೇಲುಭಾಗದಲ್ಲಿ 'O' ಎಂದು ಬರೆಯುತ್ತಿದ್ದರು. ಅದು ಲಿಂಗದ ಗುರುತು. ತ್ರಿಗುಣಾತೀತ, ತ್ರಿಕಾಲಾಬಾಧಿತ, ಜೀವ ಜಗದೀಶ್ವರ ಇವು ಮೂರನ್ನೂ ಮೀರಿದ್ದು, ಎಂದು ಅವರು ಹೇಳುತ್ತಿದ್ದರು. ಧೂಪ ದೀಪ, ಅಭಿಷೇಕ, ನೈವೇದ್ಯ, ಆರತಿ, ಪುಷ್ಪಾಂಜಲಿ ಸಹಿತವಾದ ದೈವಾರಾಧನೆ ಬಯಸುವ ಸಗುಣೋಪಾಸಕರಿಗೆ ದೇವೀ ಪೂಜೆಯನ್ನೂ ಏರ್ಪಡಿಸುತ್ತಾರೆ, ಬಾಬಾ.

ಆಂಧ್ರ ಪ್ರದೇಶ್ ಸರ್ಕಾರದ ರವಾನಾ ಮಂತ್ರಿ, ತಮ್ಮ ಉಪನ್ಯಾಸದಲ್ಲಿ, "ಈ ಪುಣ್ಯಕ್ಷೇತ್ರಕ್ಕೆ ನಾಲ್ಕಾರು ಕಡೆಗಳಿಂದ ಬರುವ ದರ್ಶನಾರ್ಥಿಗಳ ಅನುಕೂಲಕ್ಕಾಗಿ, ಕೊತ್ತಚೆರುವಿಂದ ಪುಟ್ಟಪರ್ತಿಯವರೆಗೂ ರಸ್ತೆಗೆ ಟಾರು ಹಾಕಿಸುತ್ತೇನೆ" - ಎಂದರು. ಆದರೆ ಸ್ವಾಮಿ, "ದೇಹದ ರವಾನೆಗೆ ರಸ್ತೆ ದುರಸ್ತಿ ಮಾಡುವುದರಲ್ಲಿ ನನಗೆ ಅಷ್ಟು ಆಸಕ್ತಿ ಇಲ್ಲ. ನೇರವಾಗಿ ಹಿಗ್ಗು ತಗ್ಗಿಲ್ಲದೆ, ಚಾಪೆ ಹಾಸಿದ ಹಾಗೆ ರಸ್ತೆ ಇದ್ದರೆ, ಹುಚ್ಚು ವೇಗದಿಂದ

ಕಾರುಗಳನ್ನು ಓಡಿಸಿ, ಅನಾಹುತಕ್ಕೆಡೆ ಮಾಡಿಕೊಳ್ಳುತ್ತಾರೆ. ಮಾನವತ್ವದಿಂದ ದೈವತ್ವ ಪ್ರಯಾಣ ಮಾಡಲು ಬೇಕಾದ ರಸ್ತೆಯನ್ನು ದುರಸ್ತು ಮಾಡುವುದೇ ನನ್ನ ಉದ್ದೇಶ. ಅ ನೀವು ಅನುಸರಿಸಬೇಕಾದ ಸೂತ್ರ ಒಂದೇ; ಮುಂಚಿತವಾಗಿ ಹೊರಡಿ; ನಿಧಾನವಾಗಿ ಬ ಸಾಗಲಿ; ಸುರಕ್ಷಿತವಾಗಿ ಸೇರಿಕೊಳ್ಳಿ."

ಸಾವಿರಾರು ಭಕ್ತರು ಷೆಡ್ಡುಗಳಲ್ಲಿ ಕಾಲು ಚಾಚುವಷ್ಟು ಸ್ಥಳ ದೊರಕದೆ, ಮರ ನೆರಳಲ್ಲೂ ಬಟ್ಟಬಯಲಲ್ಲೂ ಜಾಗ ಸಂಪಾದಿಸಿ, ನಿದ್ರಾಹಾರಗಳಿಗೇರ್ಪಾಡು ಮಾಡಿಕೊಂಡ ಮೂರು ರಾತ್ರಿ ಮಳೆ ಸುರಿಯಿತು. ಜನ ಹಾಗಿರಲಿ, ಅವರ ಪಾತ್ರೆ ಪದಾರ್ಥಗಳ ತೊಯ್ದು ಹೋಯಿತು. ಹಲವರು ಸ್ವಾಮಿ ಹತ್ತಿರಕ್ಕೆ ಹೋಗಿ, "ಮಳೆ ನಿಲ್ಲಿಸಿ"- ಎಂದು ಬೇಡಿಕೊಂಡರು. ಆಗ ಅವರು, "ಕೊಂಚ ನೆನೆದರೆ ಅವರೇನು ಮೊಳೆತು ಚಿಗುರು ಮೂಡುವುದಿಲ್ಲ. ಕಾಲಕಾಲಕ್ಕೆ ಮಳೆ ಬರದಿದ್ದರೆ, ಬೆಳೆ ಅಳಿದು, ಬರ ಬರುತ್ತೆ. ಯಜ್ಞವ ವೇದೋಕ್ತ ರೀತಿಯಲ್ಲಿ ಆಚರಿಸಿದೆವಾದ್ದರಿಂದ ಮಳೆ ಬರಬೇಕಾದ್ದೇ. ನಾವೇ ಕರೆ ಮಳೆಯನ್ನು ತರಿಸಿದ ಮೇಲೆ, ಈಗ ಬೇಡ ಅಂದರೆ ಮರ್ಯಾದೆಯಿಲ್ಲ" - ಎಂದರು.

೧೯೬೯ ಅಕ್ಟೋಬರ್ ೨೦ ತಾ | ಪೂರ್ಣಾಹುತಿ ಸಮಾರಂಭ, ಯಜ್ಞ ಸಮಾಪ್ತಿ ಕೈ ಆಡಿಸಿದಾಗ ಸೃಷ್ಟಿಯಾದ ನವರತ್ನ ಹಾರವನ್ನು ಸ್ವಾಮಿ, "ಬ್ರಹ್ಮ" ಎಂಬ ನಾಮಧೇಯ ಪ್ರಧಾನ ಪುರೋಹಿತರಿಗನುಗ್ರಹಿಸಿದರು. ಶಿರ್ಡಿ ಬಾಬಾ ವಿಗ್ರಹಕ್ಕೆ ಅಖಂಡ ವಿಭೂ ಅಭಿಷೇಕ ಮಾಡುವ ಮೊದಲು, ಅಷ್ಟಕೋಣದ ಪದಕವೊಂದನ್ನು (ರತ್ನಖಚಿತ) ಸೃಷ್ಟಿ ಅದರ ಹಣೆಗೊತ್ತಿದಾಗ, ಅದು ಅಲ್ಲೇ ಅಂಟಿಕೊಂಡು, ಅದರ ಸುವರ್ಣ ಸೌಂದರ್ಯವ ಹತ್ತರಷ್ಟು ಹೆಚ್ಚಿಸಿತು.

ಅದನ್ನು ನೋಡಿ ಅಚ್ಚರಿಗೊಂಡ ಡಾ | ಭಗವಂತಂ ಅವರೂ, ನಾವ ಇಂಜಿನಿಯರ್ ಟರ್ಡಿಮನ್ ಜೊಹನಸ್ಸನ್ ಎಂಬುವರೂ, ತಮ್ಮ ಕೋಣೆಯಲ್ಲಿ ಬೆಳ ಬೆಳ್ಳಿಗೆ ಚಿನ್ನ ಅಂಟುವುದಿಲ್ಲವಲ್ಲಾ ! ಮತ್ತೆ ಮಧ್ಯಾಹ್ನ ಅಂಟಿತಲ್ಲಾ ? ಹೇಗೆ ಎಂ ಚರ್ಚಿಸಿದರಂತೆ. ಸಂಜೆಯ ಉಪನ್ಯಾಸದಲ್ಲಿ ಸ್ವಾಮಿ, "ಪದಕ ಸೃಷ್ಟಿಸಿಬಹುದೆಂದರೆ, ಅದ ಅಂಟಿಸಲು ಬರುವುದಿಲ್ಲವೆಂದರೆ, ಅದು ಹಾಸ್ಯಾಸ್ಪದ. ಅದನ್ನು ನಂಬಿದವರು ಇದನ್ನೇ ನಂಬಬಾರದು ?" -. ಎಂದರು. ಅವರಿಬ್ಬರೂ ತಲೆ ತಗ್ಗಿಸಿ ಕುಳಿತರು, ಸಭಾಮಧ್ಯದಲ್ಲಿ ಸಂಜೆ ಸ್ವಾಮಿ ತಮ್ಮ ರಹಸ್ಯವನ್ನು ಕೊಂಚ ಹೊರಗೆಡಹಿದರು. "ದೇವರನ್ನು ನೀವು ಕ ಪಾಷಾಣ ಹೃದಯುದವನು. ಕನಸಿನಲ್ಲಿ ಕಾಣಿಸದವನು, ಪಟದಿಂದ ಪ್ರಸಾದ ಕೊಡ ಕಷ್ಟಪಡಿಸುವವನು ಎಂದು ದೂರುತ್ತೀರಿ. ಆದರೆ ದೇವರೇ ಪ್ರೇಮ, ಪ್ರೇಮವೇ ದೇವರು ನಿಮ್ಮ ಪ್ರಾರ್ಥನೆ ಬರಿಯ ಬೂಟಾಟಿಕೆ ಇರಬಹುದು ; ನಾಟಕದ ಕೃತ್ರಿಮ ರೋದನವಾಗಿರಬಹುದು. ಅದನ್ನು ನೀವು [illegible], ಆರ್ತ ಮನಸ್ಸಿನಿಂದ, ಕಂಠ

ಮಾಡಿ, ತುಟಿಯಿಂದ ಹೇಳಿರಬಹುದು. ಎಲ್ಲೋ ಆಕಾಶದಾಚೆ ಇದ್ದು ಗುಡುಗುತ್ತಿರುವ ಭಯಂಕರ ಶಕ್ತಿಯನ್ನುದ್ದೇಶಿಸಿ ನೀವು ಮಾಡಿರಬಹುದು. ಹಾಗಿದ್ದರೆ ನಾನು ಹೇಗೆ ಒಗ್ಗೊಡುವುದು ? ನಾನು ನಿಮ್ಮ ಹೃದಯವಾಸಿ ; ನಿಮ್ಮ ಅತೀ ಹತ್ತಿರದ ಬಂಧು. ಕರಗದ, ಕದಲದ ಪ್ರೇಮ ಬಂಧದಿಂದ ನಿಮಗೊದಗಿ ಬಂದ ಬಂಧು !" ಎಂದರು.

೨೧ನೇ ತಾ | ಭಗವಾನರು ಉಯ್ಯಾಲೆಯಲ್ಲಿ ಕುಳಿತು, ಭಕ್ತರ ಕೈಯಿಂದ ತೂಗಿಸಿ ಕೊಂಡು, ಸಾವಿರಾರು ಭಕ್ತರ ಕಣ್ಮನಗಳನ್ನು ತಣಿಸಿದರು. ಇಂಗ್ಲಿಷ್, ಉರ್ದು, ಸಂಸ್ಕೃತ, ಕನ್ನಡ, ತೆಲುಗು ನುಡಿಗಳಲ್ಲಿ ಕವಿಗಳು ರಚಿಸಿದ ಕವನ ಕುಸುಮಗಳನ್ನು, ಅವರಿಗರ್ಪಿಸಲಾಯಿತು. "ಕವಿಂ ಕವೀನಾಂ"- ಎಂಬ ಬಿರುದು ಹೊತ್ತಿರುವ ಭಗವಂತ ರಚಿಸಿರುವ ಕವನ ಕುಸುಮಗಳನ್ನು, ತಾರಾಗಣದಲ್ಲೂ, ಮಳೆ ಹನಿಗಳಲ್ಲೂ, ಮಂದ ಮಾರುತನಲ್ಲೂ, ಹೂವಿನೆಸಳುಗಳಲ್ಲೂ, ಧೂಳು ಕಣಗಳಲ್ಲೂ, ಪಠಿಸಿ ಆನಂದ ಪಡಬೇಕು ಎಂದು ಬಾಬಾ ಅವರು ಕವಿಗಳಿಗಾದೇಶವಿತ್ತರು.

ಅನಂತಪುರದಲ್ಲಿ ತಾತ್ಕಾಲಿಕ ಉಪಯೋಗಕ್ಕಾಗಿ ಪಡೆದ ಒಂದೆರಡು ಕಟ್ಟಡಗಳಲ್ಲಿ ನಡೆಯುತ್ತಿದ್ದ ಮಹಿಳಾ ಕಾಲೇಜಿಗೆ, ಊರಾಚೆಯ ವಿಶಾಲ ನಿವೇಶನದಲ್ಲಿ ಭವ್ಯ ಭವನವೊಂದನ್ನು ನಿರ್ಮಿಸಲು ಸ್ವಾಮಿ ಸಂಕಲ್ಪಿಸಿದರು. ೬೮ರ ನವೆಂಬರ್ ೭ನೆ ತಾ | ಭಾರತದ ಸರ್ಕಾರ, ಉಪರಾಷ್ಟ್ರಪತಿ ಶ್ರೀ ಜಿ. ಎಸ್. ಪಾಠಕ್ ಅವರು, ಅದರ ಶಂಕು ಸ್ಥಾಪನಾ ಕೈಂಕರ್ಯವನ್ನೂ, ಆಂಧ್ರಪ್ರದೇಶ ರಾಜ್ಯಪಾಲ ಖಂಡೂಭಾಯ್ ದೇಸಾಯಿ ಅವರು, ಕಾಲೇಜಿನ ಹಾಸ್ಟೆಲ್ ಕಟ್ಟಡದ ಶಂಕು ಸ್ಥಾಪನಾ ಕೈಂಕರ್ಯವನ್ನೂ ಸ್ವಾಮಿ ಸಾನಿಧ್ಯದಲ್ಲಿ ನೆರವೇರಿಸಿದರು. ಸ್ವಾಗತ ಭಾಷಣ ಮಾಡುತ್ತ ಡಾ | ಭಗವಂತಂ, "ದೇಶದ ನಾನಾ ಕಡೆಗಳಲ್ಲಿ ನಾನು ಕಾಲೇಜುಗಳನ್ನು ನೆಲೆಗೊಳಿಸಿ ನಡೆಯಿಸಿದ್ದೇನೆ. ಆದರೆ ೧೮ ತಿಂಗಳ ಅವಧಿಯಲ್ಲಿ ಸರ್ವಾಂಗ ಸುಂದರ ಬೆಳೆದು, ೧೫ ಲಕ್ಷ ರೂಪಾಯಿಗಳ ವೆಚ್ಚದ ಸ್ವಂತ ಭವನದ ಯೋಜನೆ ಮಾಡುವ ಪಸಾಡ, ಇಂದು ಇಲ್ಲಿ ಕಂಡು ಆನಂದಿಸುತ್ತೇನೆ " - ಎಂದರು. "ನನ್ನ ಸಂಕಲ್ಪ ವಜ್ರ ಸಂಕಲ್ಪ. ಅದು ನೆರವೇರಲೇಬೇಕು. ನನಗಾಗಿ ನಾನೇನನ್ನೂ ಬಯಸಲಾರೆ. ದೇಶೋನ್ನತಿ, ಲೋಕ ಕಲ್ಯಾಣ, ಧರ್ಮೋದ್ಧರಣ, ಇದೇ ನನ್ನ ಕೆಲಸ" - ಎನ್ನುತ್ತಾರೆ ಬಾಬಾ. ವೆಂಕಟೇಶ್ವರ ವಿಶ್ವವಿದ್ಯಾಲಯದ ಉಪ ಕುಲಪತಿ, ಸ್ವಾಮಿಯ ಸಂಸ್ಥೆಯ 'ಸರ್ವಮತ ಸಮ್ಮತ' ತತ್ವವನ್ನು ಶ್ಲಾಘಿಸಿದರು. ಶ್ರೀ ಖಂಡೂಭಾಯಿ ದೇಸಾಯಿ ಅವರು, "ಸೆಕ್ಯುಲರಿಸಂ ಎಂದರೆ ನಾಸ್ತಿಕ ತತ್ವವಲ್ಲ ಮತದ ಮೇಲಣ ದುರಭಿಮಾನ ತ್ಯಾಗವೇ ಅದರ ಮರ್ಮ"- ಎಂದರು. ಉಪರಾಷ್ಟ್ರಪತಿಗಳು, "ರಾಷ್ಟ್ರಮಟ್ಟದಲ್ಲೂ, ಅಂತರ ರಾಷ್ಟ್ರೀಯ ಮಟ್ಟದಲ್ಲೂ ನಮಗೆ ನಾಳೆ, ಬುದ್ಧಿ ಶಕ್ತಿ, ಮನೋದಾರ್ಢ್ಯ, ಆತ್ಮಾಭಿಮಾನ, ದೇಶಾಭಿಮಾನ, ಸತ್‌ಶೀಲ ಇರುವ ಯುವಕ ಯುವತಿಯರು ಅಗತ್ಯ, ಪ್ರಭುತ್ವದ ಹೊರೆ ಹೊರುವುದಕ್ಕೆ" - ಎಂದು ಹೇಳಿ, ಸ್ವಾಮಿಗೆ ದೇಶದ ಪರವಾಗಿ ಕೃತಜ್ಞತೆಯನ್ನರ್ಪಿಸಿದರು. ಈ ವಿದ್ಯಾಲಯ

ಆದರ್ಶ ಮಾತೃಮೂರ್ತಿಯರನ್ನು ದೇಶಕ್ಕೊದಗಿಸಲಿ ; ಧರ್ಮ ಮಾರ್ಗದಲ್ಲಿ ನಡೆದು, ಸತ್ಯ ಪರಾಕ್ರಮಿಗಳೂ ಭಕ್ತಿ ಜ್ಞಾನ ಪಾರಾಯಣರೂ ಆದ ಸಂತಾನವನ್ನು ಅವರು ಭಾರತ ಮಾತೆಯ ಸೇವೆಗಾಗಿ ಅರ್ಪಿಸಲಿ, ಎಂದು ಭಗವಾನರು ಆಶೀರ್ವದಿಸಿದರು.

೨೩ ನವೆಂಬರ್ ಅಂದು ಸ್ವಾಮಿ, "ನನ್ನ ಜನ್ಮ ದಿನೋತ್ಸವವನ್ನು, ಯಾವತ್ತು ನನಗೆ ನಿಮ್ಮ ಹೃದಯದಲ್ಲಿ ನೀವು ಸ್ಥಳ ಕೊಡುತ್ತೀರೋ, ಅಂದೇ ನಿಮಗೆ ನನ್ನ ಜನ್ಮ ದಿನ ಉತ್ಸವವಾಗುತ್ತದೆ. ಜೀವಿಗೆ ಪ್ರತಿಕ್ಷಣವೂ, ಜನನ, ಪ್ರತಿಕ್ಷಣವೂ ಮರಣ. ಏಳಿಗೆ ಬೀಳಿಗೆ, ಹಿಗ್ಗುತಗ್ಗು, ಅವೆರಡೂ ಸಮವಾಗಿ ಕಂಡಾಗ, ನನ್ನ ಕಡೆಗೆ ನಿಮ್ಮ ತೀರ್ಥಯಾತ್ರೆ ಮುಗಿಯುತ್ತದೆ. ನನ್ನಲ್ಲೇ ನೀವು ಶಾಶ್ವತ ಉಳಿಯುತ್ತೀರಿ" - ಎಂದರು.

೬೯ರ ಜನ್ಮ ದಿನೋತ್ಸವ ಸಂದರ್ಭದಲ್ಲಿ, ಪ್ರಶಾಂತಿ ನಿಲಯದ ಪ್ರಶಾಂತ ವಾತಾವರಣದಲ್ಲೇ, ಅಖಿಲ ಭಾರತ ಸತ್ಯಸಾಯಿ ಸಂಸ್ಥೆಯ ವಾರ್ಷಿಕೋತ್ಸವ ನಡೆಯಿತು. ಮೊದಲನೆಯ ಸಮ್ಮೇಳನ ಮದ್ರಾಸಿನಲ್ಲಿ ನಡೆಯಿತು. ಎರಡನೆಯದು ಬೊಂಬಾಯಿ ಪ್ರಪಂಚ ಸಮ್ಮೇಳನದಲ್ಲೇ ಬೆರೆತು ಹೋಯಿತು. ನಿಲಯದಲ್ಲಾದ ಮೂರನೆ ಸಮ್ಮೇಳನದಲ್ಲಿ, ೩೦೦೦ ಪ್ರತಿನಿಧಿಗಳು ಪಾಲುಗೊಂಡರು. ಶ್ರೀಲಂಕಾ, ಆಫ್ರಿಕ, ಫಿಜಿ, ಅಮೆರಿಕಾ, ಯುರೋಪ್, ಆಸ್ಟ್ರೇಲಿಯಾ ದೇಶಗಳಿಂದಲೂ ನೂರಾರು ಮಂದಿ ಬಂದು ಸೇರಿಕೊಂಡರು.

"ಹಣಕ್ಕಾಗಿ ಕೈ ನೀಡದ, ಶ್ರೀಮಂತರೆಂಬ ಕಾರಣದಿಂದ ಯಾರನ್ನೂ ಅನುಸರಿಸದ ಸಂಸ್ಥೆ ಇದು. ತಮ್ಮ ತಮ್ಮ ಶಕ್ತಿ ಸಾಮರ್ಥ್ಯಗಳನ್ನೇ ಆಶ್ರಯಿಸಿ, ಆಧಾರವಾಗಿರಿಸಿಕೊಂಡ, ಆದಷ್ಟು ಸೇವಾ ಕಾರ್ಯಕ್ರಮಗಳನ್ನು ನಡೆಯಿಸುವ ಸಾಧಕರ ಸಂಘ ಇದು. ತಾವು ಮಾಡುವ ಕೆಲಸಗಳೆಲ್ಲವೂ ದೇವರ ಪೂಜೆ ಎಂಬ ತತ್ವದ ಮೇಲೆ, ಜನಜೀವನವನ್ನು ಪಾವನಗೊಳಿಸಲು ಸ್ಥಾಪಿತವಾದ ಸಂಸ್ಥೆ ಇದು. ಇದರಲ್ಲಿ ರಾಜಕೀಯ ಪೈಪೋಟಿಗಳಿಗಾಗಲಿ, ಕೋಮುವಾರು ದ್ವೇಷಕ್ಕಾಗಲಿ, ಅಧಿಕಾರದ ಅಹಂಕಾರಕ್ಕಾಗಲಿ ಅವಕಾಶವಿಲ್ಲ. ಧಿಕ್ಕಾರದಿಂದ ತಲೆ ಎತ್ತಬಾರದು; ಸಹಕಾರ, ಉಪಕಾರಗಳಿಗಾಗಿ ಶಿರ ತಗ್ಗಿಸಬೇಕು. ಆಸೆಗಳನ್ನು ಅದುಮಿ ಆದರ್ಶಗಳಿಗಾಗಿ ದುಡಿಯಿರಿ" - ಎಂದು ಪ್ರತಿನಿಧಿಗಳಿಗೆ ಸ್ವಾಮಿ ಬುದ್ಧಿ ಹೇಳಿದರು.

ಆಧ್ಯಾತ್ಮಿಕ ಸಾಧನೆಗಳು, ಗ್ರಂಥ ಪ್ರಕಟಣೆ, ಮಹಿಳೆಯರಿಗಾಗಿ ಪ್ರತ್ಯೇಕ ಸಂಸ್ಥೆಗಳು, ಸೇವಾ ಕಾರ್ಯಕ್ರಮ ಮುಂತಾದ ವಿಷಯಗಳಿಗೆ ಸಮ್ಮೇಳನ ವಿಶೇಷ ಗಮನ ಕೊಟ್ಟಿತು. ಸದಸ್ಯರೆಲ್ಲರೂ ಸತ್ಯವಾದಿಗಳೂ, ಸರ್ವಮತ ಹಿತೈಷಿಗಳೂ, ದಯಾಪರರೂ, ಸೇವಾಭಿಲಾಷಿಗಳೂ ಆಗಿದ್ದರು, ಇತರರಿಗೆ ತಮ್ಮ ನಡೆನುಡಿಗಳಿಂದಲೇ ಸಾಯಿಮಾರ್ಗವನ್ನು ಬೋಧಿಸುತ್ತಿರಬೇಕು. ತಂದೆ ತಾಯಂದಿರನ್ನು ಗೌರವಿಸದ, ಶುಶ್ರೂಷಿಸದ ಯಾರನ್ನೂ ಸದಸ್ಯರಾಗಿ ಸೇರಿಸಬಾರದು ಎಂದು ಮುಂತಾಗಿ ಸ್ವಾಮಿ ಸಲಹೆಯಿತ್ತರು. "ನಿಮ್ಮ ಜೀವಿತದ ಪರಮೋದ್ದೇಶ, ಸರ್ವಶಕ್ತನಲ್ಲಿ, ಸರ್ವಜ್ಞನಲ್ಲಿ, ಸರ್ವವ್ಯಾಪಿಯಲ್ಲಿ, ಪ್ರೇಮಸ್ವರೂಪನಲ್ಲಿ ಲೀನವಾಗುವುದು

ಎಂಬುದನ್ನು ಮರೆಯಬೇಡಿ. ಹೆಜ್ಜೆ ಮುಂದಿಡುವ ಮೊದಲು, ಗುಣಾವಗುಣಗಳನ್ನು ಪರೀಕ್ಷಿಸಿ, ಎಲ್ಲಿಗೆ, ಏಕೆ ಎಂದು ವಿಚಾರಣೆ ಮಾಡಿ. ಮಾತಿಗಿಂತ ಕೃತಿ ಮೇಲೆಂಬುದನ್ನು ನೆನಪಿನಲ್ಲಿಡಿ" - ಎಂದು ಸ್ವಾಮಿ ಎಚ್ಚರಿಸಿದರು.

ಸ್ವಾಮಿಯ ದರ್ಶನ, ಸ್ಪರ್ಶನ, ಸಂಭಾಷಣ - ನಮ್ಮ ಬ್ಯಾಟರಿಯನ್ನು ಚಾರ್ಜು ಮಾಡುತ್ತವೆ ; ನವಚೇತನ ಚಿಗುರಿಸುತ್ತವೆ. ಅವರನ್ನು ನೋಡಿದಾಗ, ಅವರಂತೆ ನಾವೂ ಅವಿಶ್ರಾಂತ ಪರಿಶ್ರಮವನ್ನಲಂಬಿಸಬೇಕೆನಿಸುತ್ತದೆ. ಅವರ ಮಾತುಗಳನ್ನಾಲಿಸಿದಾಗ, ಅವರ ಅನುಗ್ರಹ ಹೊಂದಬೇಕೆಂದೂ, ಅವರ ಕೈಂಕರ್ಯದಲ್ಲೇ ಆಯುಸ್ಸನ್ನು ವಿನಿಯೋಗಿಸಬೇಕೆಂದೂ ಪ್ರೇರಣೆಯಾಗುತ್ತದೆ. ಅವರ ಪಾದ ಸ್ಪರ್ಶದಿಂದ, ಎಂದೂ ಇಲ್ಲದ ಕ್ರಿಯಾಶಕ್ತಿ, ಧೈರ್ಯೋತ್ಸಾಹಗಳು ಈ ಪಾಂಚ ಭೌತಿಕ ಶರೀರದಲ್ಲಿ ಪ್ರವಹಿಸುತ್ತವೆ.

ಅನೇಕರು ಆ ವರ್ಷ ಸ್ವಾಮಿಯ ಜನ್ಮದಿನದವರೆಗೆ ಪುಟ್ಟಪರ್ತಿಯಲ್ಲೇ ಉಳಿದರು. "ಮಾನವ ಕೋಟಿಯನ್ನು ತನ್ನೆಡೆಗೆ ಕರೆದು ಕಾಪಾಡಲು ಬಂದಿರುವ ಶಿವ ಶಕ್ತಿ ನಾನು' - ಎಂದು ತಮ್ಮ ಜನ್ಮ ದಿನದಲ್ಲಿ ಸ್ವಾಮಿ ಘೋಷಿಸಿದರು. ಮತವೆಂದರೆ ವ್ಯಷ್ಟಿ ಸಮಷ್ಟಿಯ ಕಡೆಗೆ ಮಾಡುವ ತೀರ್ಥಯಾತ್ರೆ ; ನಾನು ಎಂಬ ಸ್ಥಾನದಿಂದ ನಾನು ಎಂಬ ಸ್ಥಾನಕ್ಕೂ, ಅಲ್ಲಿಂದ ನೀನೇ ಎಂಬ ಸ್ಥಾನಕ್ಕೂ ಪ್ರಯಾಣ, ಎಂದರು. ತಮ್ಮ ನಿಜಸ್ವರೂಪವನ್ನು ತಿಳಿಸುತ್ತಾ -

"ಕ್ರಮ ತಪ್ಪದೆ ಹೀಗೆ, ಪ್ರತಿದಿನವೂ ಭಾನು
ಉದಯಾಸ್ತಮನಗಳ ಮಾಡಲೇಕೆ ?
ಗಗನಕ್ಕೆ ಇಂಥ ಕಾಂತಿ, ಈ ಯುವ ತಾರೆಗ
ಳೆಲ್ಲಡಗಿಕೊಳ್ಳುವವು ಹಗಲು ಹೊತ್ತು ?
ಕ್ಷಣಕೂಡ ವಿಶ್ರಾಂತಿಗಾಸೆ ಪಡದೆ, ಗಾಳಿ
ಜೀವಿಗಳಿಗುಸಿರಾಗಿ ಬೀಸಲೇಕೆ ?
ಕಿಲ ಕಿಲ ನಗು ಬೀರಿ ಜಗದ ಕಾವೇರಿಗಳು
ಪರ್ವತಗಳಿಂದೆಮಗಾಗಿ ಧುಮುಕಲೇಕೆ ?
ಲೋಕದಲ್ಲೆತ್ತ ನೋಡಿದರತ್ತ ಜನರಲ್ಲಿ
ಧನ ವಿಭವ ಮತ ಜಾತಿ ಭೇದವೇಕೆ ?
ಯಾರ ಶಾಸನವಿದೆಲ್ಲ ?
ಆತನೇ ಈತನು

ಈತನೇ ಆತನು !

ಸರ್ವರಿಗು ಅಧಿಪತಿ

ಎಂದರಿತುಕೊಳಿ ನೀವು."

- ಎಂದು ತಮ್ಮ ದಿವ್ಯವಾಣಿಯಲ್ಲಿ ಗಾನ ಮಾಡಿದರು.

ಹುಟ್ಟಿದ ಹಬ್ಬದ ದಿನ ನಾವು ಯಾವುದನ್ನು ಕೊಡಬಲ್ಲೆವು, ಸ್ವಾಮಿಗೆ ? ಆದ್ದರಿಂದ ಅವರೇ ನೆರೆದವರಿಗೆಲ್ಲ ಲಡ್ಡು ಕೊಟ್ಟು, ಬದುಕನ್ನು ಮಧುರವಾಗಿಸುತ್ತಾರೆ. ಶ್ರೀಕೃಷ್ಣ ವೇಣುಗಾನ ಮಾಡಿದಾಗ, ಯಮುನೆ ಪ್ರವಹಿಸದೆ, ಆ ನಾದಲಹರಿಗೆ ಸೋತು, ಸ್ತಬ್ಧಳಾಗಿ ನಿಂತುಬಿಟ್ಟಳಂತೆ. ಚಿತ್ರಾವತಿಗೂ ಆ ವೇಣುಗಾನ ಕೇಳಿಸುತ್ತದೆ, ಸ್ವಾಮಿ ಭಜನೆ ಹಾಡುಗಳನ್ನು ಗಾನ ಮಾಡಿದಾಗ, ಮಾತಾಡಿದಾಗಲೂ, ವೇಣು ಅವರ ಕಂಠದಲ್ಲೇ ಇದೆ. ಆದ್ದರಿಂದ ಪ್ರವಾಹನೀರೋಟವನ್ನು ನಿಲ್ಲಿಸುವ ತಾಪತ್ರಯಕ್ಕೊಳಗಾಗದೆ, ಚಿತ್ರಾವತಿ, ಮುಕ್ಕಾಲು ಮೂರು ಮೀಸೆ ಮರುಳಾಗಿ, ಮರಳಾಗಿ ಕುಳಿತುಬಿಟ್ಟಿದೆ, ಮುರಳಿಗೆ ಮನ ಸೋತು.

೧೯೭೬ನೆಯ ಸಂವತ್ಸರದ ಕೊನೆಯ ದಿನ, ಸ್ವಾಮಿ ಮೈಸೂರು ರಾಜ್ಯದ ತಮ್ಮ ಸಂಸ್ಥೆಯ ಮಹಾ ಸಮ್ಮೇಳನವನ್ನಾಶೀರ್ವದಿಸಿದರು. ವೇದಿಕೆಯ ಮೇಲಿನ ಕುರ್ಚಿಯಲ್ಲಿ ಕೂರದೆ, ಸ್ವಾಮಿ ನೆಲದ ಮೇಲೆ ಆಸೀನರಾಗಿದ್ದ ಭಕ್ತರ ನಡುವೆ ಕುಳಿತು. "ನಿಮ್ಮಲ್ಲಿ ನಿಮ್ಮ ಕಾರ್ಯಕ್ಷೇತ್ರದಲ್ಲೇ, ಭುಜಕ್ಕೆ ಭುಜ ಕೊಟ್ಟು, ನಿಮಗಾನಂದ ಕೊಡುವುದೇ ನನ್ನ ಕೆಲಸ"- ಎಂದರು ಅವರು. "ನಿಮ್ಮ ಶೀಲ ಸ್ವಭಾವಗಳು ಶುದ್ಧವಾಗಿದ್ದಾಗ, ಮನೆಯಲ್ಲಿ ಸಂತೋಷ-ಸಾಮರಸ್ಯ. ಮನೆಯಲ್ಲಿ ಸಂತೋಷ-ಸಾಮರಸ್ಯವಿದ್ದಾಗ, ದೇಶದಲ್ಲಿ ನೆಮ್ಮದಿ, ನೀತಿ ನಿಜಾಯಿತಿ, ದೇಶದಲ್ಲಿ ನೆಮ್ಮದಿ, ನೀತಿ ನಿಜಾಯಿತಿ ಇದ್ದಾಗ, ಜಗತ್ತಿಗೆ ಸುಖ, ಶಾಂತಿ, ಸೌಭಾಗ್ಯ. ಈತ ಈ ಮತಸ್ಥ, ಆತ ಆ ಕೋಮು, ಈತ ಬಿಳಿಯ, ಆತ ಕರಿಯ, ಈತ ಪಂಡಿತ, ಆತ ಪಾಮರ, ಈತ ಶ್ರೀಮಂತ, ಆತ ಬಡವ ಎಂದು ಜನರನ್ನು ವಿಂಗಡಿಸಿ ಸಂಕಟಪಡಬೇಡಿ, ಸಂಕಟ ಕೊಡಬೇಡಿ"- ಎಂದು ಬೋಧಿಸಿದರು.

ಕೆಲವು ದಿನಗಳ ನಂತರ, ಸ್ವಾಮಿ ಒಂದು "ಮಹಿಳಾ ಸಂತ್ಸಂಗ"ವನ್ನು ಅನುಗ್ರಹಿಸಿದರು. ಅವರಿಗಿತ್ತ ದಿವ್ಯೋಪನ್ಯಾಸ ಚಿರಸ್ಮರಣೀಯ. "ನಿಮ್ಮ ನಿಮ್ಮ ಮನೆಗಳಲ್ಲಿ ದೇವರಿಗೂ ದೈವೀ ಸಂಪತ್ತಿಗೂ ಸ್ಥಾನ ಕೊಡಿ. ಹಿರಿಯರು-ಕಿರಿಯರು, ಹೆಣ್ಣುಮಕ್ಕಳು ಗಂಡಸರು, ಯಜಮಾನ-ಆಳು, ಓದಿದವರು-ಓದುಬಾರದವರು, ಮುದುಕರು-ಶಿಶುಗಳು, ಎಲ್ಲರೂ ಸಮರಸದಿಂದ, ಸಹನಭಾವದಿಂದ, ಒಂದೇ ಕುಟುಂಬದಲ್ಲಿ ಒಟ್ಟಾಗಿ ಬಾಳಲು ಕಲಿಯಿರಿ. ಭಗವತ್ ಪರಿಮಳದಿಂದ ನಿಮ್ಮ ಮಲೆಗಳು ಘಮಘಮಿಸಲಿ. ನಿಮ್ಮ ನೆರೆಹೊರೆ, ಬಂಧು ಬಳಗ ಕಷ್ಟದಲ್ಲಿದ್ದರೆ, ಕನಿಕರ ತೋರಬೇಕು ; ತುಷ್ಟಿ ಪುಷ್ಟಿಯಲ್ಲಿದ್ದರೆ, ನಿಮ್ಮ ಆನಂದ

ಅಭಿವೃದ್ಧಿಯಾಗಬೇಕು. ಧ್ಯಾನ, ಪೂಜೆಗಳಿಗಿಂತ, ವ್ರತ, ಉಪವಾಸಗಳಿಗಿಂತ, ದೀನರ ಸೇವೆ ಪುಣ್ಯದ ಕೆಲಸ."

೧೯೭೦ ಶಿವರಾತ್ರಿಗೆ ಇನ್ನೂ ಒಂದು ವಾರವಿದೆ ಎನ್ನುವಾಗಲೇ, ಜನಸ್ತೋಮ ನಿಲಯದ ಸುತ್ತ ಕಿಕ್ಕಿರಿದು ಜಾಗ ವಶಪಡಿಸಿಕೊಂಡರು. ಸೇವಾದಳದ ಸ್ತ್ರೀ ಪುರುಷ ಸದಸ್ಯರಿಗೆ ಸ್ವಾಮಿ, ಅವರು ಮಾಡಬೇಕಾದ ಕೈಂಕರ್ಯದ ಮಹಿಮೆಯನ್ನು ವಿವರಿಸಿದರು. "ದಿಲ್ ಮೆ ರಾಂ ಹಾತ್ ಮೆ ಕಾಂ" ಎಂಬ ಮಂತ್ರವನ್ನು ಉಪದೇಶ ಮಾಡಿದರು. "ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಸ್ಸಹಸ್ರಪಾತ್" ಎನ್ನುತ್ತದೆ ವೇದ. ಈಗ ಇಲ್ಲಿ ಕಾಣಿಸುತ್ತಿರುವ ಸಾವಿರಾರು ತಲೆಗಳು, ಸಾವಿರಾರು ಕಣ್ಣುಗಳು, ಸಾವಿರಾರು ಪಾದಗಳು - ಇವೆಲ್ಲ ನನ್ನವೇ ! ಅವರ ಸೇವೆ, ನನ್ನ ಪೂಜೆ. ಅವುಗಳನ್ನು ತೃಪ್ತಿಪಡಿಸುವುದೇ ನನಗೆ ನೀವು ನೀಡಬಯಸುವ ಆರಾಧನೆ, ಎಂದರು. ಮಧ್ಯಾಹ್ನದ ಸಮಾವೇಶದಲ್ಲಿ, ಅಕ್ಷಯ ವಿಭೂತಿ ಅಭಿಷೇಕವಾದ ನಂತರ, ಶ್ರೀ ನಕುಲ ಸೇನ್ (ಗೋವಾ ರಾಜ್ಯಪಾಲ), ಗೋಕಾಕ್, ಡಾ | ವೆಂಕಟಾವಧಾನಿ ಭಾಷಣ ಮಾಡಿದರು. ಸಂಜೆ, ದಿವ್ಯವಾಣಿ ಮೊಳಗಿದಾಗ -

"ನಾಹಂ ಮನುಷ್ಯೋ ನ ಚ ದೇವ ಯಕ್ಷಃ

ನ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಃ

ನ ಬ್ರಹ್ಮಚಾರೀ ಗೃಹೀ ವನಸ್ಥೋ

ಅಹಂತ್ವಾ ಸತ್ಯ ಬೋಧಕಃ - ಸತ್ಯಂ ಶಿವಂ ಸುಂದರದ"

- ಎಂಬುದನ್ನು ತಾವೇ ಹಾಡಿ ಸ್ಪಷ್ಟಪಡಿಸಿದರು. ಅನಂತರ ಅನುಗ್ರಹಿಸಿದ ಉಪನ್ಯಾಸದ ಮಧ್ಯದಲ್ಲೇ, ಲಿಂಗೋದ್ಭವದ ಚಿಹ್ನೆಗಳು ಸಭಿಕರ ಗಮನ ಸೆಳೆದುವು. ಆ ಮಂಗಳ ಮುಹೂರ್ತದಲ್ಲಿ, ತನುಮನಗಳು ಪುಳಕಗೊಂಡವು ; ಶಿವಸ್ತೋತ್ರ ಗಗನಕ್ಕೇರಿತು. ಹದಿನೈದು ನಿಮಿಷದೊಳಗೆ ಸ್ಫಟಿಕಲಿಂಗವೊಂದು ಪ್ರತ್ಯಕ್ಷವಾಯಿತು. ಸ್ವಾಮಿ ಅದನ್ನು ಅಂಗೈಯಲ್ಲಿ ಸ್ವೀಕರಿಸಿ, ಎದ್ದು ನಿಂತು ಎಲ್ಲರಿಗೂ ತೋರಿಸಿ ಸಂತೋಷಪಡಿಸಿದರು. ಮಾನವಾಕಾರದ ದೇವನ ಕಂಠನಾಳದ ಮೂಲಕ, ಅಂಥ ದೊಡ್ಡ ವಸ್ತು ಹೇಗೆ ಹೊರ ಬಂತು ಎಂದು ಎಲ್ಲರೂ ಅಚ್ಚರಿಗೊಂಡರು. ರಾತ್ರಿ ಪೂರಾ ಸಾವಿರಾರು ಭಕ್ತರು ಶ್ರದ್ಧಾಭಕ್ತಿಯಿಂದ ತದೇಕಚಿತ್ತರಾಗಿ ಭಜನೆ ಮಾಡಿದರು. ಸೂರ್ಯೋದಯದಲ್ಲೇ ಸ್ವಾಮಿ ದರ್ಶನವಿತ್ತರು. ಪುಳಿಯೋಗರೆ ಮತ್ತು ಪಾಯಸ ಪ್ರಸಾದವನ್ನು ತಾವೇ ಕೊಟ್ಟು ತೃಪ್ತಿಪಡಿಸಿದರು.

# ದ್ವಾರಕಾ-ಸೋಮನಾಥ

೧೯೭೦ ಮೇ ೯ ತಾ | ಸ್ವಾಮಿ ಬೃಂದಾವನದಿಂದ ಬೊಂಬಾಯಿ ನಗರಾಭಿಮುಖವಾಗಿ ಹೊರಟರು. ಮೂರು ಕಾರುಗಳು ಅವರನ್ನು ಹಿಂಬಾಲಿಸಿದುವು. ಕಟ್ಟಕಡೆಯ ಕಾರಲ್ಲಿ ನಾನು ಕುಳಿತಿದ್ದೆ. ಬೊಂಬಾಯಿ ಸಮಿತಿಯ ಪರವಾಗಿ ಬಂದಿದ್ದ ಇಬ್ಬರು, ಅದನ್ನು ದೀರ್ಘ ಪ್ರಯಾಣ ಯೋಗ್ಯವಾಗಲು, ಚೆನ್ನಾಗಿ ದುರಸ್ತು ಮಾಡಿಸಿ ತಂದಿದ್ದರು. ಅವರು ನನ್ನೊಡನೆ ಅದೇ ವಾಹನದಲ್ಲಿದ್ದರು. ತುಮಕೂರು ಕಾಣುವ ಮೊದಲೇ ಆ ಕಾರಿನ ಹಿಂಭಾಗದಿಂದ ಯಾವುದೋ ಥಡ್ ಎಂದು ರಸ್ತೆಯಲ್ಲಿ ಬಿತ್ತು. ಡ್ರೈವರ್ ಮಹಾಶಯ ಬ್ರೇಕ್ ಹಾಕಿ ಕೆಳಕ್ಕೆ ಧಾವಿಸಿ, ಯಾವುದೋ ಒಂದನ್ನು ಎತ್ತಿ ತಂದು ಯಾರಿಗೂ ತೋರಿಸದೆ ಎಂಥ ಆಂದೋಳನವೂ ಇಲ್ಲದೆ, ತಂದದ್ದನ್ನು ತನ್ನ ಕಾಲಡಿಯಲ್ಲಿರಿಸಿ, ಕಾರನ್ನೋಡಿಸಿದ. ತುಮಕೂರು ದಾಟಿದ ಕೂಡಲೆ, ಎಂಜಿನ್ ಒಳಗೆ ಏನೋ ಥಡಥಡ ಶಬ್ದವಾಯಿತು. ಮಹಾರಾಯ ಕೆಳಗಿಳಿದು, ಕಾರಿನ ಬಾಯಿ ತೆಗೆದು ಎಂಥದ್ದೋ ಮಾಡಿದ ; ಶಬ್ದ ನಿಲ್ಲಲಿಲ್ಲ. ಬಾಯಿ ಮುಚ್ಚಿ, ಧೈರ್ಯವಾಗಿ ಸ್ವಸ್ಥಾನ ಸೇರಿ, ಬಿಕ್ಕದೆ ಬೆದರದೆ, ಬಿಟ್ಟೇ ಬಿಟ್ಟ, ಕಾರನ್ನ! ಬೊಂಬಾಯಿ ಭೀಮಾರ್ಜುನರು ಬಿಮ್ಮನೆ ಕುಳಿತಿದ್ದರು. ನಾನು ಸಾಯಿರಾಂ ಜಪದಲ್ಲಿ ಮುಳುಗಿ, ಕಣ್ಣು ಮುಚ್ಚಿ, ಕಂಗಾಲಾದೆ.

೭೦ ಮೈಲಿ ಹೋಗಿರಬಹುದು. ಭೂಪತಿ ಮತ್ತೆ ರಸ್ತೆಗಿಳಿದ. ಕಾರಿನ ದವಡೆಯನ್ನಗಲಿಸಿ, ಅದರೊಳಗಿಂದ ನಾಲ್ಕಂಗುಲ ಉದ್ದದ ಕಬ್ಬಿಣ ತುಂಡೊಂದನ್ನು ತೆಗೆದು ಕಿಸೆಯಲ್ಲಿರಿಸಿಕೊಂಡ. ಅವನ ಮುಖದಲ್ಲಿ ಕಳವಳ, ಆತುರ, ಆವೇದನೆ, ಆಲೋಚನೆ, ಆತಂಕ, ಆಶ್ಚರ್ಯ ಎಳ್ಳಷ್ಟೂ ಕಾಣಿಸಲಿಲ್ಲ. ಥಡಥಡ ಶಬ್ದ ನನ್ನೆದೆಯಲ್ಲಿ ಪ್ರತಿಧ್ವನಿತವಾಯಿತು.

ನಮ್ಮ ಕಾರು ಹಿಂದೆ ಬಿದ್ದುದನ್ನು ಅರಿತ ಸ್ವಾಮಿ, ತಮ್ಮ ಕಾರನ್ನು ನಿಲ್ಲಿಸಿ ರಸ್ತೆ ಪಕ್ಕದಲ್ಲಿ ಕಾದಿದ್ದರು. ನಾನು ಓಡಿ ಹೋಗಿ ಅವರ ಪಾದಕ್ಕೆ ಬಿದ್ದೆ." ಸ್ವಾಮಿ ! ಆ ಕಾರು ಅಪಾಯ ಸ್ಥಿತಿಯಲ್ಲಿದೆ. ಹಿಂಭಾಗದಿಂದೇನೋ ಬಿತ್ತು. ಮುಂಭಾಗದಿಂದ ಏನೋ ಕಿತ್ತ, ಥಡಥಢ ಭಯಂಕರ ಶಬ್ದ" - ಎಂದೆ. "ಹೌದು, ಸರ್ಕಸ್‌ನಲ್ಲಿ ಅಂಥ ಕಾರಲ್ಲಿ ಕೂತು ರೌಂಡ್ ಹೊಡೀತಾರೆ. ಒಂದೊಂದಾಗಿ ಬೀಳುತ್ತೆ. ಕೊನೆಗೆ ಒಳಗೆ ಕುಳಿತವರು ನೆಲವನ್ನಾಶ್ರಯಿಸುತ್ತಾರೆ. ಅಂಥ ಸರ್ಕಸ್ ಕಾರು ಅದು. ಭಯಪಡಬೇಡ. ನಿನ್ನ ಕಾರಿನ ಹಿಂದೆ ಒಂದು ಕಾರು ಬರಲಿ. ನೀನು ಬಿದ್ದಾಗ, ಆ ಕಾರಿನವರು ನಿನ್ನನ್ನೆತ್ತಿ ಅದರಲ್ಲಿ ಕೂರಿಸುತ್ತಾರೆ ಬಿಡು. ಹೋಗು, ಕೂತುಕೊ ಅದರಲ್ಲೇ" - ಎಂದುಬಿಟ್ಟರು.

೨೦೦ ಮೈಲಿ ದೂರ ತಂಟೆ ತಕರಾರಿಲ್ಲದೆ ಸುಯ್ಯನೆ ಸಾಗಿತು. ಕಾರು ! ನನ್ನೊಂದಿಗೆ ಸ್ವಾಮಿ ಆ ರೀತಿ ಹೇಳಿದರು, ಸರಿ. ಆದರೆ ಅವರು ಕಾರಿಗೆ ಹೇಳಿದ್ದು

ಬೇರೆಯಾಗಿರಬೇಕು. ಸಂಜೆ, ಸೂರ್ಯಾಸ್ತಮನ, ಕತ್ತಲೆ, ದಟ್ಟರಾತ್ರಿ, ನಿಶ್ಯಬ್ದ, ಪಕ್ಷಿಗಳಿಗೂ ನಿದ್ದೆ. ಊರು ದೀಪವೆಲ್ಲ ಕಣ್ಣುಮುಚ್ಚಿದುವು. ನಮ್ಮ ಪ್ರಯಾಣ ಪ್ರಯಾಸ ಶೂನ್ಯ. ಒಂದು ಗಂಟೆ ಬಡಿಯಿತು. ವೈಸ್ ಚಾನ್ಸಲರ್ ಅಡ್ಕೆಯವರ ಬಂಗಲೆ ಸಿಕ್ಕಿತು. ನನ್ನೆದುರು ನಿಂತು ಸ್ವಾಮಿ, "ನನ್ನ ಹತ್ತಿರ ಹೇಳಿದೆಯಲ್ಲಾ, ಕಾರು ವಿಷಯ ? ಆಮೇಲೆ ಏನಾದರೂ ತಂಟೆ ಮಾಡಿತೆ ?" ಎಂದರು. "ಅಷ್ಟು ಧೈರ್ಯ ಅದಕ್ಕೆಲ್ಲಿಂದ ಬರಬೇಕು, ಸ್ವಾಮಿ ?" - ಎಂದು ನಾನು ಉತ್ತರಿಸಿದೆ. ಬೆಳಿಗ್ಗೆ ಧಾರವಾಡದಿಂದ ಪೂನಾಗೆ, ಅಲ್ಲಿಂದ ಬೊಂಬಾಯಿಗೆ ಅದೇ ಕಾರಲ್ಲಿ ರಾಜಾರೋಷವಾಗಿ ಕುಳಿತು, ಸ್ವಾಮಿಯ ಕಾರಿನ ಹಿಂದೆಯೇ, ಅದೇ ವೇಗದಲ್ಲಿ ನಾನೂ ಪ್ರಯಾಣ ಮಾಡಿದೆ.

ಬೊಂಬಾಯಿ ಸೇರುತ್ತಲೂ, ಕಾರು ತನ್ನ ಕೆಲಸ ಮುಗಿಯಿತು ಎಂಬಂತೆ, ಮುಂದಕ್ಕೊಂದಿಂಚು ಕೂಡ ಕದಲಲಿಲ್ಲ. ತಳ್ಳಿದರೂ ಇಲ್ಲ, ಎಳೆದರೂ ಇಲ್ಲ, ಬೈದರೂ ಇಲ್ಲ, ಬಡಿದರೂ ಇಲ್ಲ. ವರ್ಕ್‌ಷಾಪಿಗೆ ರವಾನಿಸಿದರು. ಅದರ ಒಡೆಯ ಐಸ್‌ಕ್ರೀಂ ಕಂಪೆನಿಯ ಮಾಲಕ, ನನ್ನ ಸಹ ಪ್ರಯಾಣಿಕ, ಜಾವಾ ನನಗೆ ಹೇಳಿದರು, "ಕಾರನ್ನು ಪರೀಕ್ಷಿಸಿದ ಇಂಜೀನಿಯರ್ ನನ್ನನ್ನು ಕೇಳಿದ" - ಇದರಲ್ಲಿ ಬಂದವರ ಪ್ರಾಣ ಹೇಗೆ ಉಳಿಯಿತು ? ಮುಂದಿನೆರಡು ಚಕ್ರಗಳ ಸ್ಪ್ರಿಂಗ್ ಪ್ಲೇಟುಗಳಿಗೆ ಭಾರೀ ಕ್ರಾಕ್ ತಗುಲಿದೆ" ಎಂದನಂತೆ. ಈ ಕಥೆಯನ್ನು ಬಾಬಾ ಅವರಿಗೆ ವಿವರಿಸಿದಾಗ, ಜಾವಾ ಅವರು, "ಅದರ ಡ್ರೈವರ್ ಒಬ್ಬ ಭಕ್ತ ಸ್ವಾಮಿ" - ಎಂದರು. ನಾನು, "ಅದರಲ್ಲಿದ್ದವರೂ ಭಕ್ತರು ಸ್ವಾಮಿ" - ಎಂದು ದನಿಗೂಡಿಸಿದೆ. ಆದರೆ ಸ್ವಾಮಿ, "ಎಲ್ಲರಿಗಿಂತ ಆ ಕಾರಿಗಿರುವ ಭಕ್ತಿ ಹೆಚ್ಚು" - ಎಂದು ನಮ್ಮ ತಲೆ ತಗ್ಗಿಸಿದರು.

ನಿಜ; ಜಡ ಎಂದು ನಾವು ಬದಿಗೆ ದೂಡುವ ವಸ್ತುಗಳಿಗೂ ಚೇತನವುಂಟು. ಮೆಷೀನುಗಳಿಗೂ ಆಯಾಸ, ಆಲಸ್ಯ ಉಂಟು ಎಂದು ಜಗದೀಶಚಂದ್ರಬೋಸ್ ಅವರು ಸಿದ್ಧಾಂತ ಮಾಡಿರುವರಲ್ಲವೆ ? ಏಕೆ ? ಬಟ್ಟೆ, ಬರೆ ಅಳುತ್ತವೆ, ಬೆಟ್ಟಗುಡ್ಡ ಗೋಳಾಡುತ್ತವೆ ಎಂದು ಬಾಬಾ ಅವರು ಪ್ರಾಮಾಣಿಕವಾಗಿ, ನಿದರ್ಶನ ಸಹಿತ ಹೇಳಿದ್ದಾರೆ.

ಅನಂತಪುರದ ಸತ್ಯಸಾಯಿ ಮಹಿಳಾ ಕಾಲೇಜು ಕಟ್ಟಡದ ಕೆಲಸಗಾರರಿಗೆ, ಅದರ ಪ್ರಾರಂಭೋತ್ಸವ ದಿನ, ಕೊಡಬೇಕಾದ ಬಹುಮಾನ (ಮೇಸ್ತ್ರಿಗಳಿಗೆ ಸೈಕಲ್ಲು, ಇತರರಿಗೆ ಸೂಟು, ಬೂಟು, ಬಟ್ಟೆ, ಹೆಣ್ಣು ಮಕ್ಕಳಿಗೆ ಸೀರೆ)ಗಳನ್ನು ಸ್ವಾಮಿ ಬೊಂಬಾಯಿಯಲ್ಲೇ ಕೊಂಡರು. ಅಂಗಡಿಯೊಂದರಿಂದ ಅವರು ಅವಲೋಕಿಸಿ, ಆರಿಸಿ, ಇರಿಸಿಕೊಳ್ಳುವುದಕ್ಕಾಗಿ ೧೦೦ ಸೀರೆಗಳನ್ನು ತರಲಾಯಿತು. ಸ್ವಾಮಿ ೯೭ ಸೀರೆಗಳನ್ನಾರಿಸಿ, ಪ್ರತ್ಯೇಕಿಸಿ, ೩ನ್ನು ಹಿಂತಿರುಗಿಸುವಂತೆ ಅಪ್ಪಣೆ ಕೊಡಿಸಿದರು. ಆತ ಅವನ್ನು ಮೇಜಿನ ಮೇಲಿರಿಸಿದ್ದ, ಒಂದು

ಬ್ಯಾಗಲ್ಲಿ. ಸಿಟಿಗೆ ಹೊರಟಾಗ ಬ್ಯಾಗೆತ್ತಿದರೆ, ಅದರ ತಳದಲ್ಲಿ ನೀರು, ಕಣ್ಣೀರು, ಸೀರೆಗಳ ದುಃಖದ ಗುರುತು.

ಸ್ವಾಮಿ ಹೇಳಿದರು : "ಪಾಪ, ಪಾಪ ! ನಾನು ಬೇಡ ಅಂತ ಹೇಳಿದ್ದರಿಂದ ಅಳುತ್ತಾ ಇವೆ. ಬೇಡ, ಅಲ್ಲೇ ಇಡು ಆ ನಾಲ್ಕನ್ನೂ !" ಹಲವು ತಿಂಗಳ ತರುವಾಯ, ಪ್ರಶಾಂತಿ ನಿಲಯದಲ್ಲಿ ಉಪನ್ಯಾಸ ಮಾಡುತ್ತಿದ್ದಾಗ ಸ್ವಾಮಿ, ವಸ್ತ್ರಗಳಿಗೂ ಚೇತನ ಉಂಟು ' ನಿರಾಕರಿಸಿದರೆ, ತಿರಸ್ಕಾರ ಭಾವದಿಂದ ಅವನ್ನು ನೂಕಿದರೆ, ಅವು ಅಳುತ್ತವೆ ಎನ್ನುತ್ತ, ಈ ಕಥೆ ಹೇಳಿದರು. ಅಲ್ಲದೆ ಮತ್ತೊಂದು ಕಥೆಯನ್ನೂ ಉದಾಹರಣೆಯಾಗಿ ಪ್ರಸ್ತಾಪಿಸಿದರು. ಕಪಿಗಳು ಸಾಲಾಗಿ ನಿಂತು, ಹಿಮಾಲಯದಿಂದ ಶಿಖರಗಳನ್ನು ಕಿತ್ತು ಎತ್ತಿ ಕೈ ಕೈ ಬದಲಾಯಿಸಿ, ರಾಮೇಶ್ವರದ ಹತ್ತಿರ ಲಂಕೆಗೆ ಸೇತುವೆ ನಿರ್ಮಾಣ ಮಾಡುತ್ತಿದ್ದವು. ಲೈನು ಹಿಡಿದು ಬೆಟ್ಟಗಳು ಉತ್ತರದಿಂದ ದಕ್ಷಿಣಕ್ಕೆ ಸಾಗಿ ಬರುತ್ತಿದ್ದುವು. ಸೇತುವೆ ಇಂಜಿನಿಯರ್ ನೀಲ ಎಂಬ ಕಪೀಂದ್ರ, "ಆ ! ಇನ್ನು ಸಾಕು. ಬೆಟ್ಟಗಳನ್ನು ಸಪ್ಲೈ ಮಾಡುವ ಲೈನ್‌ರವರು ಅಲ್ಲಲ್ಲೇ ಅವನ್ನಿಳಿಸಿ, ಬೇಗ ಇಲ್ಲಿಗೆ ಧಾವಿಸಿ ಬನ್ನಿ"- ಎಂದಾಜ್ಞೆ ಮಾಡಿದ. ಆಗ, ದಾರಿ ಮಧ್ಯದಲ್ಲೇ, ಅತೋ ಭ್ರಷ್ಟಃ ಇತೋ ಭ್ರಷ್ಟಃ ಎಂಬ ರೀತಿ ಹಿಮವಂತನನ್ನು ತೊರೆದು, ಸೇತುವೆ ಸೇರದೆ, ಎಲ್ಲೋ ಕೂರಬೇಕಾಗಿ ಬಂದ ಒಂದು ಬೆಟ್ಟ, ಗೋಳೋ ಎಂದು ರೋದಿಸಿತು. ರಾಮನಿಗೆ ಅದರ ಆಕ್ರಂದನ ಕೇಳಿಸಿತು. "ಅಯ್ಯೋ ಪಾಪ ಎನಿಸಿತು". ದುಃಖಿಸಬೇಡ ; ಅಲ್ಲೇ ಇರು. ಕೃಷ್ಣಾವತಾರದಲ್ಲಿ ನಿನ್ನಿಂದ ಪ್ರಯೋಜನ ಹೊಂದಿ ನಾನು ನಿನ್ನ ಜನ್ಮ ಸಾರ್ಥಕ ಮಾಡುತ್ತೇನೆ" ಎಂಬ ಮಹಾದಾಶ್ವಾಸ ನೀಡಿ, ಅದರ ಹೃದಯ ತಣಿಸಿದನು. ಆ ಬೆಟ್ಟವೇ ಇಂದಿಗೂ ಪ್ರಸಿದ್ಧವಾಗಿರುವ ಗೋವರ್ಧನ ಪರ್ವತ, ಎಂದರು ಸ್ವಾಮಿ.

ಜಾವಾ ಅವರ ಕಾರಿನ ಕಥೆ ಹೇಳುತ್ತ, ಅದರ ಭಕ್ತಿ, ವಸ್ತ್ರದ ವಿಷಾದ, ಬೆಟ್ಟದ ಗೋಳು, ಇತ್ಯಾದಿ ಸಂಘಟನೆಗಳ ಕಡೆ ಹಾರಿತು ನನ್ನ ಲೇಖನಿ, ಕ್ಷಮಿಸಿ. ಧಾರವಾಡ ವಿಶ್ವವಿದ್ಯಾಲಯ ಉಪಕುಲಪತಿ ಅಡ್ಕೆಯವರ ಬಂಗಲೆ ಅಂಗಳದಲ್ಲಿ, ಬೆಳಕು ಹರಿಯುವ ಮೊದಲೇ ಭಕ್ತರು ಸಹಸ್ರ ಸಂಖ್ಯೆಯಲ್ಲಿ ಸೇರಿದ್ದರು. ಅವರ ನಡುವೆ ನಿಧಾನವಾಗಿ ನಡೆದು ಎಲ್ಲರಿಗೂ ಸಂತೋಷ ಹಂಚಿದರು. ಒಬ್ಬರಿಗೆ ಕಿರುನಗು, ಮತ್ತೊಬ್ಬರಿಗೊಂದು ಮಾತು, ಒಬ್ಬರ ಶಿರದ ಮೇಲೆ ಅಭಯಹಸ್ತ, ಒಬ್ಬರ ಬೆನ್ನಿಗೆ ಆಶೀರ್ವಾದದ ಹಸ್ತ, ಒಬ್ಬರಿಗೆ ಹಸ್ತದ ವಿಭೂತಿ, ಒಬ್ಬರಿಗೆ ಕಟಾಕ್ಷದ ಕರುಣೆ, ಹೀಗೆ ವಿತರಣೆ ಮಾಡಿದರು.

ಹುಬ್ಬಳ್ಳಿ-ಧಾರವಾಡದಲ್ಲಿನ ಸಮಿತಿ ಸದಸ್ಯರನ್ನುದ್ದೇಶಿಸಿ ಮರುದಿನ ಬೆಳಗ್ಗೆ ಮಾತನಾಡಿದರು. ನಗರ ಸಂಕೀರ್ತನೆಯ ಮಹತ್ವ ಕುರಿತು ವಿಶೇಷವಾಗಿ ಹೇಳಿದರು. ಬ್ರಿಟಿಷ್ ಸಾಮ್ರಾಜ್ಯಶಾಹಿ ದುಷ್ಟ ಶಕ್ತಿಗಳನ್ನು ನಿಗ್ರಹಿಸಲು ಗಾಂಧೀಜಿ ಹೂಡಿದ "ದಂಡಯಾತ್ರೆ"ಗಿಂತ

ಅದು ಸಾವಿರ ಪಾಲು ಮಹತ್ವದ್ದೆಂದು ಅವರ ಮಾತಿನಿಂದ ನಾನು ಅರಿತುಕೊಂಡೆ. ಪ್ರತಿಯೊಬ್ಬನಿಗೂ ಸ್ವರಾಜ್ಯ ಅತ್ಯವಶ್ಯಕ. ತನ್ನ ದೇಹೇಂದ್ರಿಯ ಮನೋಬುದ್ಧಿಗಳು ತನ್ನ ಸ್ವಾಧೀನದಲ್ಲಿರಬೇಕಲ್ಲವೆ ? ಆದರೆ ಅರಿಷಡ್ವರ್ಗವೆಂಬ ಸಾಮ್ರಾಜ್ಯಶಾಹಿ ಹಿಡಿತದಿಂದ ಸ್ವಾತಂತ್ರ್ಯಗೊಳಿಸದೆ, ಆ ಗುರಿ ಸಾಧಿಸುವಂತಿಲ್ಲ. ಸ್ವರಾಜ್ಯ ಪ್ರಾಪ್ತಿಗೆ ದಂಡಯಾತ್ರೆ, ಸ್ವಾರಾಜ್ಯ ಸಿದ್ಧಿಗೆ ನಾಮಯಾತ್ರೆ. ಆಕ್ರೋಶ, ಉದ್ರೇಕ, ದ್ವೇಷ, ಅತಿಯಾಶೆ, ಕ್ರೌರ್ಯ, ಪರದೂಷಣಗಳಿಂದ ಕಲುಷಿತವಾದ ವಾತಾರವಣವನ್ನು ಪರಿಶುದ್ಧಗೊಳಿಸುವುದಲ್ಲದೆ, ನಾಮ ಸಂಕೀರ್ತನದಿಂದ ಭಾಗವಹಿಸಿದವರ ಚಿತ್ತವೂ ಪರಿಶುದ್ಧವಾಗುತ್ತದೆ ಎಂದರು ಸ್ವಾಮಿ.

ಬೆಳಗಾವಿಯಲ್ಲೂ, ಸತಾರದಲ್ಲೂ, ಭಕ್ತರು ಸ್ವಾಮಿಯನ್ನು ಸ್ವಾಗತಿಸಿ ದರ್ಶನ ಲಾಭ ಪಡೆದರು. ಪೂನಾದಲ್ಲಿ ಸ್ವಾಮಿಗೆ ಜಾಂನಗರ ರಾಜರ ಅರಮನೆಯಲ್ಲಿ ಬಿಡದಿ ಏರ್ಪಾಟು ಮಾಡಿದ್ದರು. ಬೆಳಗ್ಗೆ ೪ ಘಂಟೆಗೆ ನಾನು ಕಿಟಕಿಯಾಚೆ ನೋಡಿದಾಗ, ಭಗವತ್ಸನ್ನಿಧಿಯಲ್ಲಿ ಅವರ ಧ್ಯಾನವನ್ನು ಬ್ರಾಹ್ಮೀಮುಹೂರ್ತದಲ್ಲಿ ಮಾಡಲು ಅವಕಾಶ ದೊರೆತದ್ದಕ್ಕಾನಂದಿಸುತ್ತಿದ್ದ ಸುಮಾರು ಸಾವಿರ ಜನರನ್ನು ಕಂಡೆ ! ಏಳು ಗಂಟೆ ಹೊತ್ತಿಗೆ, ಹಸುರು ಹಾಸಿದ್ದ ಆ ವಿಶಾಲ ಅಂಕಣವಲ್ಲ ಅದು, ವಿವಿಧ ವರ್ಣಜಾಲದಿಂದ ಕಂಗೊಳಿಸುವ, ಹೊಳೆವ ನಯನಗಳಿಂದ ತೊಳಗುವ ಒಂದು ಮಾನವೋದ್ಯಾನವಾಗಿ ಮಾರ್ಪಟ್ಟಿತು. ಅವರ ಮಧ್ಯೆ ಸ್ವಾಮಿ ಸಂಚರಿಸಿ ಆ ನಯನಗಳಿಗಾನಂದ ತುಂಬಿದರು.

ಅಡ್ಕೆಯವರೂ, ಅವರ ಮಗ ಮನೋಹರ್ ಅವರೂ, ಪೂನಾ ನಗರದವರೆಗೆ ಸ್ವಾಮಿಯ ಸಂಗಡ ಬಂದರು. ಭದ್ರಾವತಿ ಕಬ್ಬಿಣ ಕಾರ್ಖಾನೆಯಲ್ಲಿ ಮನೋಹರ್ ಎಂಜಿನಿಯರಾಗಿ ಕೆಲಸ ಮಾಡುತ್ತಿದ್ದ. ಅಲ್ಲೇ ಅವರ ಮನೆಯಲ್ಲೇ, ಅವರ ಪೂಜಾ ಮಂದಿರದಲ್ಲೇ, ಅಲ್ಲಿಯ ಸ್ವಾಮಿ ಪಟದಿಂದಲೇ ಬಾಬಾ ಅವರು ವಿಭೂತಿ ಉದುರಿಸಿ, ಅಡ್ಕೆಯವರ ಮಗನನ್ನನುಗ್ರಹಿಸುತ್ತಿದ್ದಾರೆ. ಉತ್ತರ ಕರ್ನಾಟಕದ ಪ್ರವಾಸದಲ್ಲಿ ಆತನೆ ಸ್ವಾಮಿಯ ಕಾರು ಡ್ರೈವರ್. ಆಗ ಅವರಿಗೆ ಸ್ವಾಮಿ ಒಂದು ರತ್ನ ಖಚಿತ ಉಂಗುರವನ್ನು ಸೃಷ್ಟಿ ಮಾಡಿಕೊಟ್ಟಿದ್ದರು. ಆದರೆ, ಗೋಮೇಧಿಕ ರತ್ನಕ್ಕೆ ಧಕ್ಕೆ ತಗುಲಿ, ಒಂದು ಮೂಲೆ ಕೊಂಚ ಮುರಿದಿತ್ತು. ಅದನ್ನು ಗಮನಿಸಿದ ಸ್ವಾಮಿ, "ರಿಪೇರಿ ಮಾಡಲೇ?" ಎಂದು ಕೇಳುತ್ತ, ಅದನ್ನು ಅಂಗೈಯಲ್ಲಿ ಹಿಡಿದರು. ಓ ! ನನ್ನ ರೂಪ ಬೇಕೇನು ಉಂಗುರದಲ್ಲಿ ? ಬೇಡ ಮಗೂ ! ನೀನೊಬ್ಬ ಎಂಜಿನಿಯರ್. ವಿದೇಶಗಳಿಗೆ ವ್ಯಾಸಂಗಕ್ಕಾಗಿ ಹೋಗುವ ಸಂಭವ ಇದೆ. ಅವಕಾಶ ಸಿಕ್ಕಿ ಹೊರಡುವಾಗ, ರೂಪ ಕೊಡುತ್ತೇನೆ. ಈಗ ಇದನ್ನಿಟ್ಟುಕೊ ಎಂದು ಅದರ ಮೇಲೆ ಉಸಿರಾಡಿಸಿದರು. ಆ ಉಂಗುರ ಮಾಯ ಅದರ ಸ್ಥಾನದಲ್ಲಿ ಡಬ್ಬಲ್ ತೂಕದ ಒಂದು ಚಿನ್ನದ ಉಂಗುರ. ಅದರ ನಡುವೆ ಮನೋಹರ್ ಎಂಬ ಹೆಸರಿನ ಸಾಂಕೇತಿಕವಾಗಿ ಎಮ್ ಎಂಬ ಅಕ್ಷರ. "ಏಯ್ ! ಘಟಿಂಗ ! ಹೆಚ್ಚು ಚಿನ್ನ ಹೊಡೆದು

ಬಿಟ್ಟೆಯಲ್ಲಾ" - ಎಂದು ಹಾಸ್ಯ ಹಾರಿಸಿ, ಬಾಬಾ ಅವರು ಅದನ್ನು ಅವರ ಬೆರಳಿಗೆ ತಗುಲಿಸಿದರು. "ಚೆನ್ನಾಗಿ ನೋಡು, ಮೊರಾರ್ಜಿ ಚಿನ್ನ ಅಲ್ಲ ; ಇದು ಅಪರಂಜಿ" ಎಂದು ಹೇಳಿ ನಕ್ಕು ನಗಿಸಿದರು.

ಪೂನಾದಿಂದ ಹೊರಟ ಕೂಡಲೇ, ಸ್ವಾಮಿಯ ಆಜ್ಞೆಯಂತೆ, ಧರ್ಮಕ್ಷೇತ್ರಕ್ಕೆ ಫೋನ್ ಮಾಡಲಾಯಿತು. "ಸ್ವಾಮಿ ಅಲ್ಲಿಗೆ ತಲುಪುವುದು ಮಧ್ಯಾಹ್ನ ನಂತರ ಒಂದು ಒಂದೂವರೆ ಗಂಟೆಗೆ. ಆದ್ದರಿಂದ ಅಲ್ಲಿ ನೆರೆದಿರುವ ಜನಸ್ತೋಮ ಸ್ವಸ್ಥಳಗಳಿಗೆ ತೆರಳಿ, ಸಂಜೆ ೬-೩೦ಕ್ಕೆ ಬರಬಹುದು". ಆದರೆ ಈ ವಾರ್ತೆಯನ್ನು ಧ್ವನಿವರ್ಧಕಗಳ ಮೂಲಕ ಏಳೆಂಟು ಸಲ ಒತ್ತಿ ಒತ್ತಿ ಆವರ್ತಿಸಿದರೂ, ಒಂದು ನರ ಪ್ರಾಣಿ ಕೂಡಾ ಕದಲಲಿಲ್ಲ. ಬಿಸಿಲಲ್ಲಿ ನರಳುತ್ತಿದ್ದ ನೂರಾರು ಕಾರುಗಳ ಪೈಕಿ, ಒಂದು ಕಾರು ಕೂಡಾ ನೆರಳಿಗೆ ತೆರಳಲಿಲ್ಲ.

ಒಬ್ಬ ಪಾರ್ಸಿ ಪುಣ್ಯಾತ್ಮ ನನ್ನ ಹತ್ತಿರ ಅವನ ಅನುಭವವನ್ನು ತೋಡಿಕೊಂಡ. ಆ ದಿನ ಧರ್ಮಕ್ಷೇತ್ರದ ಮುಂದಿನ ವಿಶಾಲ ಚಪ್ಪರದಲ್ಲಿ (ತೆಳ್ಳನೆಯ ಗೋಣಿ ಬಟ್ಟೆಯೇ ಮೇಲು ಹೊದಿಕೆ ಆ ಚಪ್ಪರಕ್ಕೆ), ಬೆಳಗ್ಗೆ ೮ ಘಂಟೆಯಿಂದ ಆತ ಕೂತಿದ್ದರಂತೆ. "ಸಂಜೆ ಬನ್ನಿ ; ಈಗ ಎದ್ದು ಹೋಗಿ" - ಎಂಬ ಸಲಹೆಯನ್ನು ಆತ ಕಿವಿಗೆ ಹಾಕಿಕೊಳ್ಳಲಿಲ್ಲವಂತೆ. ಹೆಂಡತಿಯ ಬಹು ದಿನ ಬಲವಂತದ ಬಲೆಯಲ್ಲಿ ಬಿದ್ದು ಆತ, "ಇಷ್ಟು ಲಕ್ಷ ಜನರನ್ನಾಕರ್ಷಿಸಿ, ಆನಂದಿಸಿ, ಆಧ್ಯಾತ್ಮದೆಡೆಗೆ ಆಹ್ವಾನಿಸುವ ವ್ಯಕ್ತಿಯನ್ನು ನೋಡೇಬಿಡೋಣ"- ಎಂದು ಹಟ ತೊಟ್ಟಿದ್ದನಂತೆ ಪಾಪ, ತಲೆಗೆ ಬಿಸಿಲು, ಕಾಲಿಗೆ ಬೆಂಕಿ. ಸದ್ಯಕ್ಕೆ ಎರಡು ಚೀಲಗಳು ಧರಿಸಿದ್ದನಂತೆ, ಒಂದೊಂದು ಕಾಲಿಗೂ !

ಒಂದು ಗಂಟೆ ಹೊಡೆದು ಹತ್ತು ನಿಮಿಷಗಳು ಕಳೆದು, ಸ್ವಾಮಿ ಧರ್ಮಕ್ಷೇತ್ರವನ್ನು ಪ್ರವೇಶಿಸಿದರು. ಬಿಸಿಲಿನಲ್ಲಿ ಬೆಂದ ಆ ಚಪ್ಪರದಡಿಯ ನೆಲದ ಮೇಲೆ, ರಸ್ತೆಯಲ್ಲೇ ಕಾರು ನಿಲ್ಲಿಸಿ, ಜನಗಳಿಗೆ ದರ್ಶನ ಕೊಡುವುದಕ್ಕಾಗಿ, ಕಾದು ಕೆಂಡವಾಗಿದ್ದ ನೆಲದ ಮೇಲೆ ಸ್ವಾಮಿ ಬರಿಯ ಕಾಲಲ್ಲೇ ನಡೆದರಂತೆ. ಕಮಲದಳದಂತೆ ಸುಕೋಮಲವಾದ ಆ ಸಣ್ಣ ಪಾದಗಳು ಕೆಂಪಾದವು. ಆದರೂ ಸ್ವಾಮಿ, ಅತ್ತ ಇತ್ತ ಹತ್ತಾರು ಬಾರಿ, ಸಾಲು ಹಿಡಿದು ಕುಳಿತಿದ್ದ ಜನರ ನಡುವೆ ನಡೆದು, ಅಭಯಹಸ್ತದಿಂದ ಅನುಗ್ರಹಿಸಿದರು.

ಶಿಕ್ಷಣ ಶಾಸ್ತ್ರದಲ್ಲಿ ಸ್ವಾಮಿ ಒಂದು ಧರ್ಮಕ್ರಾಂತಿಯನ್ನೇ ಎಬ್ಬಿಸಿ, ತಮ್ಮ ಅವತಾರ ಕಾರ್ಯವನ್ನು ನೆರವೇರಿಸುತ್ತಿದ್ದಾರೆ. ಬೊಂಬಾಯಿ ನಗರದ ಹತ್ತಾರು ಬಾಲ ವಿಹಾರ ಕೇಂದ್ರಗಳಲ್ಲಿನ ಬಾಲಬಾಲಕಿಯರು ತಯಾರಿಸಿದ ಅಂದ ಚೆಂದದ ಚಿತ್ರಗಳನ್ನೂ ವಸ್ತುಗಳನ್ನೂ ಧರ್ಮಕ್ಷೇತ್ರದಲ್ಲಿ ಜೋಡಿಸಿದ್ದರು. ಆಧ್ಯಾತ್ಮಿಕ ಪರಿಮಳ, ಪವಿತ್ರ ರೂಪುರೇಷೆ ಆದರ್ಶಗಳ ಆರಾಧನೆ ಅವೆಲ್ಲದರಲ್ಲೂ ಪ್ರಕಾಶಿಸಿತು. ಶ್ರೀ ಕೃಷ್ಣ ಒರಗಿದ ಮರ ಕುಸುಮ

ಭರಿತ. ಅವನು ಮುಟ್ಟಿದಾಗ ಹಸು ನಾಟ್ಯವಾಡಲೇಬೇಕು. ದೋಣಿಯ ಚಿತ್ರ ಬರೆದರೆ, ಅದರಲ್ಲಿ ರಾಮ ಸೀತೆ ಲಕ್ಷ್ಮಣ ಕುಳಿತೇ ಇರಬೇಕು. ಕೋತಿ ಎಂದರೆ ಹನುಮಂತ. ಕುದುರೆಯ ದೊಡ್ಡಸ್ಥಿಕೆ ಯಾವುದರಲ್ಲಿದೆ ? ಸಿದ್ಧಾರ್ಥನ ಪರಿತ್ಯಾಗಕ್ಕೆ ನೆರವಾದ್ದರಿಂದ. ಹೀಗೆ ಹರಿದಿತ್ತು ಬಾಲಕರ ಭಾವ ಲಹರಿ. ಕೆಲವು ಮಕ್ಕಳು ಪ್ರಶಾಂತಿ ನಿಲಯದ ಮಾದರಿಗಳನ್ನು ಶ್ರಮ ವಹಿಸಿ ತಯಾರು ಮಾಡಿದ್ದರು. ಶಿರ್ಡಿ ಬಾಬಾ ಹಾಗೂ ಅವರ ಇಂದಿನ ರೂಪವನ್ನೂ, ಹಲವು ಜಾಣ ಮರಿಗಳು ಚೆನ್ನಾಗಿ ಬಿಡಿಸಿದ್ದರು. ಅಲ್ಲದೆ ದ್ವಾರಕಾಮಾಯಿ, ದಕ್ಷಿಣೇಶ್ವರ, ಗೋವರ್ಧನ ಪರ್ವತ, ಸಂತ ಪೀಟರ್ ಮಂದಿರ, ಪುನೀತಕಾಬಾ ಜುಮ್ಮಾ ಮಸೀದಿ ಮುಂತಾದ ಮಹತ್ಪವಿತ್ರ ಸ್ಥಳಗಳನ್ನೂ ಮಕ್ಕಳು ಚಿತ್ರರೂಪದಲ್ಲಿ ಬಿಡಿಸಿದ್ದರು. "ಲವಕುಶ" ಎಂಬ ನೃತ್ಯ ನಾಟಕವನ್ನೂ ಸಣ್ಣ ಮಕ್ಕಳು ಆಡಿ ತೋರಿಸಿದರು. ಸ್ವಾಮಿಯ ಸಾನಿಧ್ಯವು ಏಳೆಂಟರ ಎಳೆಯ ಮಕ್ಕಳಿಗೆ ಅಮಿತೋತ್ಸಾಹ ಕೊಟ್ಟಿತು. ದಸರಾ ಮಹೋತ್ಸವದಲ್ಲಿ ಪಾಲುಗೊಳ್ಳುವಂತೆ, ಅವರನ್ನು ಸಾಯಿ ತಾಯಿ ಪ್ರಶಾಂತಿ ನಿಲಯಕ್ಕೆ ಬರ ಮಾಡಿಕೊಂಡರು.

ಮೇ ತಿಂಗಳು ೧೨ನೆ ತಾ | ಬೊಂಬಾಯಿ ನಗರದ ಚರಿತ್ರೆಯಲ್ಲಿ, ಏಕೆ, ಸಾಯಿ ಅವತಾರ ಚರಿತ್ರೆಯಲ್ಲೇ ಒಂದು ಮಹತ್ವಪೂರ್ಣ ದಿನ. ೧೯೬೮ರಲ್ಲಿ ಧರ್ಮಕ್ಷೇತ್ರದ ಉದ್ಘಾಟನಾ ಸಮಾರಂಭವನ್ನು, ಅಂದೇ ಸ್ವಾಮಿ ನಡೆಸಿದ್ದು. ಪ್ರತಿ ವರ್ಷವೂ ಆ ದಿನವನ್ನು ಕೃತಜ್ಞತಾಪೂರ್ವಕ ಬೊಂಬಾಯಿ ವಾಸಿಗಳು ಕೊಂಡಾಡುತ್ತಾರೆ. ಜಾತಿ ಮತ ಭೇದಗಳನ್ನೆಣಿಸದೆ, ಪಕ್ಷ ಪತ್ರಿ ಪಕ್ಷಗಳ ಗೊಡವೆಗಳನ್ನು ಮರೆತು, ಧನಾಭಿಮಾನಗಳನ್ನು ತೊರೆದು, ಆ ದಿನ ಸುಮಾರು ಒಂದು ಲಕ್ಷ ಆನಂದ ಪಿಪಾಸುಗಳು ಧರ್ಮ ಕ್ಷೇತ್ರದಲ್ಲಿ ಸೇರಿ, ನಾಮಸಂಕೀರ್ತನೆಯಿಂದ ಪುನೀತರಾದರು. ಮತ ದ್ವೇಷಾಗ್ನಿಯ ಜ್ವಾಲೆ ದುಷ್ಪ್ರಚಾರದ ಬಿರುಗಾಳಿಗೆ ಸಿಕ್ಕಿ, ಅದೇ ದಿನ ಭಿವಂಡಿ ಎಂಬ ಬೊಂಬಾಯಿ ಪ್ರಾಂತದ ಪಟ್ಟಣದ ಸುತ್ತ ಖೂನಿ ದರೋಡೆಗಳು ತಾಂಡವವಾಡುತ್ತಿತ್ತು. ಆದರೆ, ಧೈರ್ಯಶಾಂತಿಗಳ, ಸಂತೋಷ, ಸಮಾಧಾನ, ಸಾಮರಸ್ಯಗಳ ನಂದಾದೀಪದಂತೆ, ಉದ್ರಿಕ್ತ ಸಮುದ್ರ ಮಧ್ಯದ ನಂದನ ದ್ವೀಪದಂತೆ, ಅಂಧೇರಿಯಲ್ಲಿ ಧರ್ಮಕ್ಷೇತ್ರ ವಿರಾಜಿಸಿತು.

ತಮ್ಮ ದಿವ್ಯೋಪನ್ಯಾಸದಲ್ಲಿ ಸ್ವಾಮಿ, ಆ ಸಮಸ್ಯೆಯನ್ನೇ ವಿಮರ್ಶಿಸಿದರು. ವೃಕ್ಷದ ಕೊಂಬೆ, ತೊಗಟೆ, ಬೇರು, ಎಲೆ, ಹೂವು, ಕಾಯಿ, ಹಣ್ಣು, ಎಲ್ಲದರ ಬಣ್ಣ, ರುಚಿ, ಆಕಾರ, ಸ್ವಭಾವ, ಸ್ವರೂಪ ಬೇರೆ ಬೇರೆ. ಒಂದಕ್ಕೊಂದು ವಿರೋಧ ಒಂದೊಂದರಿಂದಾಗುವ ಕೆಲಸ ಪ್ರತ್ಯೇಕ. ಆದರೂ ಎಲ್ಲ ದುಡಿತವೂ ವೃಕ್ಷದ ಪೋಷಣೆಗಾಗಿಯೇ, ರಕ್ಷಣೆಗಾಗಿಯೇ. ಎಲ್ಲವೂ. ಒಂದೇ ಬೀಜದಿಂದ ಉತ್ಪತ್ತಿಯಾದವು. ಅಲ್ಲವೆ ? ಎಲ್ಲವನ್ನೂ ಸೂರ್ಯ ಹಾಗೂ ಪೃಥ್ವಿಯರು ಏಕಪ್ರಕಾರ ಒಲಿದು ಬೆಳೆಸುತ್ತಿದ್ದಾರೆ. "ಬೀಜಂ ಮಾಂ ಸರ್ವ

ಭೂತಾನಾಂ - ನಾನೇ ಎಲ್ಲಕ್ಕೂ ಬೀಜ" - ಎನ್ನುತ್ತಾನೆ, ಶ್ರೀ ಕೃಷ್ಣ. ಆದರೆ, ಈ ಸತ್ಯವನ್ನು ಅಲ್ಲಗಳೆದು, ಮನುಷ್ಯ ಪರದೂಷಣೆ, ಆತ್ಮಸ್ತುತಿ, ಲೋಭ ಮೋಹಗಳಿಗೆ ಮನಸೋತು, ಸೋದರ ಸೋದರಿಯರನ್ನು ಕೊಲ್ಲುವ ಮಹಾ ಪಾತಕ ಗೈಯುತ್ತಾನೆ" - ಎಂದು ಹೇಳಿದರು.

ಮಹಾರಾಷ್ಟ್ರದ ಸ್ಟೇಟ್ ಪ್ರೆಸಿಡೆಂಟ್ ಶ್ರೀ ಪಿಂಗೆ ಅವರು, ಅನೇಕ ನಗರಗಳಲ್ಲಿ ನಡೆಸುತ್ತಿರುವ ಪಾಠಶಾಲಾ ಸಂಸ್ಥೆಯ ರಜತ ಮಹೋತ್ಸವವನ್ನು ಸ್ವಾಮಿ "ರಂಗಭಜನ"ದಲ್ಲಿ ಉದ್ಘಾಟಿಸಿದರು. ನಗರದ ಪ್ರಮುಖ ವಿದ್ಯಾಪೋಷಕರೂ, ವಿದ್ವಾಂಸರೂ, ಶಿಕ್ಷಕರೂ, ಆಡಳಿತಾಧಿಕಾರಿಗಳೂ ಇಲ್ಲಿ ಕಿಕ್ಕಿರಿದಿದ್ದರು. ಕಲಾದೃಷ್ಟಿಯಿಂದ ರಮಣೀಯವಾಗಿ ಅಲಂಕರಿಸಿದ್ದ ಪುಷ್ಪ ಮಂಟಪದ ರಜತ ಸಿಂಹಾಸನದಲ್ಲಿ ಕೂರದೆ, ಸ್ವಾಮಿ ನೇರ ತಮ್ಮ ದರ್ಶನಕ್ಕಾಗಿ ಕಾದಿದ್ದ ಜನರ ನಡುವೆ ನಿಧಾನವಾಗಿ ಇತ್ತಿಂದತ್ತ ಪಾದ ಬೆಳೆಸಿದರು. ಅನಂತರ ವೇದಿಕೆಯ ಮೇಲಿನ ಜಮಾಖಾನೆಯಲ್ಲೇ ಆಸೀನರಾದರು. ಪರಿಶುದ್ಧ ಹೃದಯವೇ ಅವರಿಗೆ ಅತಿ ಪ್ರಿಯವಾದ ರಜತಪೀಠ. "ಭಗವಾನರು ಆದೇಶಿಸಿರುವ ಆದರ್ಶಗಳನ್ನು ಅನುಸರಿಸಿದರೆ ಮಾತ್ರ ನಮ್ಮ ಶಿಕ್ಷಣ ಕ್ಷೇತ್ರ ಉತ್ತಮಗೊಳ್ಳುತ್ತದೆ "- ಎಂದು ಡಾ | ವಿನಾಯಕ ಕೃಷ್ಣ ಗೋಕಾಕರು ಸ್ಪಷ್ಟಪಡಿಸಿದರು. ಅವರು ಆಗ ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಯಾಗಿದ್ದರು. "ಭಗವಾನರು ನಿಶ್ಚಯಿಸಿರುವಂತೆ, ಶಿಕ್ಷಣದಿಂದ ಯುವ ಜನಾಂಗಕ್ಕೆ ಜ್ಞಾನಾಭಿವೃದ್ಧಿ, ಕರ್ಮ ಕುಶಲತೆ, ಸಹನೆಯ ಸಂಪಾದನೆ, ಅಂತರ್‌ದೃಷ್ಟಿ, ಈ ನಾಲ್ಕು ನಿಧಿಗಳೂ ಸಿಗಬೇಕಾಗಿದೆ"- ಎಂದು ತಿಳಿಸಿದರು. ಭಗವಾನರು ಅದೇ ನಿಧಿಗಳನ್ನೇ ಬಿಡಿ ಬಿಡಿಯಾಗಿ ವ್ಯಾಖ್ಯಾನ ಮಾಡಿದರು. ಜ್ಞಾನವನ್ನು ಈಗ ಗುಪ್ತವಾಗಿರಿಸಿಕೊಂಡು, ದುಷ್ಟ ಪ್ರಯೋಜನಗಳಿಗಾಗಿ ವಿನಿಯೋಗಿಸಲಾಗುತ್ತಿದೆ ; ಕರ್ಮ ಕುಶಲತೆಯನ್ನು ವಿನಾಶಕಾರಿ ಹತ್ಯಾಯುಧಗಳ, ಬಾಂಬುಗಳ ನಿರ್ಮಾಣ ಕಾರ್ಯಕ್ಕಾಗಿ ದುರುಪಯೋಗಪಡಿಸಲಾಗಿದೆ. ಸಹನೆಯ ಸಂಪಾದನೆ ಎಂದೋ ನಿಂತುಹೋಗಿದೆ ; ದಹನದ ಕಡೆಗೇ ಗಮನ. ಅಂತರ್‌ದೃಷ್ಟಿ ಅಪಾಯಕರ ; ಬಾಹ್ಯದೃಷ್ಟಿಯಿಂದಲೇ ಸೌಲಭ್ಯ, ಎಂಬ ಪ್ರಚಾರ ಬಲವಾಗುತ್ತಿದೆ ಎಂದು ಟೀಕಿಸಿದರು. ಧನಮದ, ಭುಜಬಲ ಮದಗಳಿಂದ ಮಾನವನು ಮೃಗವಾಗುತ್ತಿದ್ದಾನೆ ಎಂದರು. ಸಂಚಾರದ ವೇಗ ಹೆಚ್ಚಿತು. ವಾರ್ತಾ ಪ್ರಚಾರ ಕೂಡ ಅದೇ ಕ್ಷಣದಲ್ಲೇ ಲೋಕದಾದ್ಯಂತ ಜರುಗುತ್ತಿದೆ. ರಾಜ್ಯಗಳೆಲ್ಲ ತೀರ ಹತ್ತಿರಕ್ಕೆ ಬಂದಿವೆ. ವಸುಧೈಕ ಕುಟುಂಬವಾಗಿದೆ. ವಿಶ್ವ ಒಂದು ಗೂಡಿನಂತಾಗಿದೆ, ನರಪಕ್ಷಿಗಳಿಗೆ. ಆದರೆ. ಜನ ಒಂದುಗೂಡಿದರೂ, ಮನ ಒಂದುಗೂಡಿಲ್ಲ' - ಎಂದರು. ಸತ್ಯದ ಆಚರಣೆ ಇಲ್ಲದ ರಾಜಕೀಯ, ಶೀಲವನ್ನು ಗಮನಿಸದ ಶಿಕ್ಷಣ ಪದ್ಧತಿ ಸೋದರ ಪ್ರೇಮವರಿಯದ ವಿಜ್ಞಾನ, ಧರ್ಮ ದೂರವಾದ ವ್ಯಾಪಾರ, ಇವುಗಳಿಂದ ಮಾನವಕುಲದ ಪರಿಸ್ಥಿತಿ ವಿಷಮಿಸುತ್ತಿದೆ, ವಿಷಮಯವಾಗುತ್ತಿದೆ.

೧೪ನೆ ತಾ | ಪ್ರತ್ಯೇಕ ವಿಮಾನವೊಂದನ್ನಾರೋಹಿಸಿ, ಸ್ವಾಮಿ ಗುಜರಾತ್ ರಾಜ್ಯದ ಜಾಂನಗರಕ್ಕೆ ತೆರಳಿದರು. ಸುಡು ಬಿಸಿಲು, ಕಡುಬಿಸಿಲಲ್ಲೂ, ನಿಲ್ದಾಣದಲ್ಲಿ ಸಹಸ್ರಾರು ಜನ ಅವರ ದರ್ಶನಕ್ಕಾಗಿ ಕಾದು ನಿಂತಿದ್ದರು. ತಣ್ಣನೆಯ ಗಾಳಿ ಬೀಸಿತು ; ದಟ್ಟಮೋಡ ನೆರಳು ನೀಡಿತು. ಅಚ್ಚರಿಗೊಂಡ ಭಕ್ತವೃಂದ, ಭಗವಾನರ ಪುಷ್ಪಕ ಕಂಡರು. ಅವರ ಕಣ್ಮನಗಳು ತಂಪಾದುವು. ನವನಗರದ ರಾಜಮಾತಾ ಅವರು ಸ್ವಾಮಿಯನ್ನೂ, ನಮ್ಮನ್ನೂ, ತಮ್ಮ "ಅಮರ ವಿಲಾಸ" ಅರಮನೆಗೆ ಕರೆದೊಯ್ದರು. ಪೊಲೀಸ್ ಬ್ಯಾಂಡ್‌ನ ಸ್ವಾಗತಗಾನ, ಹೋಂ ಗಾರ್ಡ್ ಪಡೆಯ ಗೌರವ ಕವಾಯತ್, ಅದರ ಅಂಗಳದಲ್ಲಿ ನಡೆಯಿತು. ಸಂಜೆ ಹತ್ತು ಸಾವಿರಕ್ಕೂ ಹೆಚ್ಚು ನಾಗರಿಕರು ದಿವ್ಯವಾಣಿಯನ್ನಾಲಿಸಿ ಪುಳಕಿತರಾದರು. ಭಗವಾನರು ಕಲಿಸಿದ ಭಜನೆ ಹಾಡುಗಳನ್ನು ಮನದಣಿಯುವಂತೆ ಗಾನ ಮಾಡಿದರು.

೧೫೦ ಮೈಲಿ ದೂರದಲ್ಲಿರುವ ದ್ವಾರಕೆಗೆ ಸ್ವಾಮಿ, ೧೫ನೆ ತಾ | ಉದಯ ಮುಹೂರ್ತದಲ್ಲೇ, ಪರಿವಾರ ಸಮೇತ, ರಾಜಮಾತೆಯವರ ಸಂಗಡ, ಹೊರಟರು. ಭಾಗವತದ ದಶಮಸ್ಕಂಧ ನಮ್ಮ ಮುಂದೆ ಪುಟ ಪುಟ ಪ್ರತ್ಯಕ್ಷವಾಯಿತು. ದಾರಿ ಉದ್ದಕ್ಕೂ, ಕೃಷ್ಣನ ಸಮಕಾಲೀನರ ಸಂತಾನ ಪರಂಪರೆಯಲ್ಲಿ ಬಂದ ಪುಣ್ಯವಂತರು, ಸಾಯಿಕೃಷ್ಣನ ದರ್ಶನಕ್ಕಾಗಿ ನಾಮ ಸಂಕೀರ್ತನೆಯಲ್ಲಿ ಮಗ್ನರಾಗಿ ನಿಂತಿದ್ದರು.

ದ್ವಾರಕಾಪುರಿಯ ಶ್ರೀ ಕೃಷ್ಣದೇವಸ್ಥಾನದಲ್ಲಿ, ಪ್ರಭಾತದಿಂದಲೂ ಜನರು ಕಿಕ್ಕಿರಿದು ನೆರೆದು ಸ್ವಾಮಿಗಾಗಿ ಕಾದಿದ್ದರು. ಸ್ವಾಮಿಗೂ ರಾಜಮಾತೆಗೂ ಗರ್ಭಗುಡಿ ಸಮೀಪಕ್ಕೆ ಪ್ರವೇಶ ಸಿಗುತ್ತಿತ್ತಾದರೂ, ನಮ್ಮ ಪಾಡನ್ನು ಗಮನಿಸಿದ ಸ್ವಾಮಿ, ನೂಕು ನುಗ್ಗಲಿಂದ ನಮ್ಮನ್ನು ರಕ್ಷಿಸುವ ಸಲುವಾಗಿ ಹೊರಕ್ಕೆ ಬಂದು, ಅಂಗಳದಲ್ಲೇ ನಿಂತರು. ಅಲ್ಲಿಯ ಗೋಪಗೋಪಿಯರಿಗೆ ದರ್ಶನವಿತ್ತರು. ಅನಂತರ, ಟಾಟಾ ಕಂಪೆನಿಯವರು ಹತ್ತಿರದ ಮಿಠಾಪುರದಲ್ಲಿ ನಡೆಸುತ್ತಿರುವ ಭಾರಿ ಕಾರ್ಖಾನೆಯ ಕೆಲಸಗಾರರು ಸ್ಥಾಪಿಸಿರುವ ಭಜನಾ ಮಂಡಲಿಯನ್ನು ವೀಕ್ಷಿಸಲು ಅಲ್ಲಿಗೆ ಹೊರಟೇಬಿಟ್ಟರು. ಕೊಂಚ ದೂರ ಹೋದ ಮೇಲೆ, "ಈಗ ಗುಡಿಯೊಳಗೆ ಯಾರೂ ಇಲ್ಲ. ಹೋಗಿ ನೋಡಿಕೊಂಡು ಬರುತ್ತೀರಾ ?" ಎಂದು ನಮ್ಮನ್ನು ಕೇಳಿದಾಗ, ಒಬ್ಬರೂ ಸಮ್ಮತಿಸಲಿಲ್ಲ. ಕಾರ್ಖಾನೆಯ ಅತಿಥಿ ಗೃಹದ ಸುತ್ತ ಸಾವಿರಾರು ಜನರು ಸೇರಿದ್ದರು. ಸ್ವಾಮಿ ಅವರ ಮಧ್ಯ ನಡೆದರು ; ಅವರು ದರ್ಶನ ಭಾಗ್ಯ ಪಡೆದರು.

ಸಂಜೆ ಮಿಠಾಪುರದಿಂದ ದ್ವಾರಕಾ ಮಾರ್ಗವಾಗಿ ಜಾಂನಗರಕ್ಕೆ ಹೋಗುತ್ತಿರುವಾಗ, ಸ್ವಾಮಿ ನಮ್ಮ ಸ್ಥಿತಿಗತಿಗಳನ್ನು ವಿವರಿಸುತ್ತ ಅಯ್ಯೋ ಪಾಪ ಎಂದರು. ದ್ವಾರಕೆಗೆ ಬಂದರೂ ದೇವರ ದರ್ಶನ ಸಿಗಲಿಲ್ಲ ಎಂದು ಪರಿತಪಿಸಲು ಅವಕಾಶವೇ ಆಗಲಿಲ್ಲ. ಬಿಡಿ ! ದ್ವಾರಕೆ

ಅಂದೇ ಸಮುದ್ರದಲ್ಲಿ ಮುಳುಗಿಹೋಯಿತು, ಎಂದರು. ನಿಮ್ಮ ದರ್ಶನ, ಸರ್ವ ದೇವತಾ ದರ್ಶನ ಸ್ವಾಮಿ, ಎಂದು ನಾವೂ ಅವರ ಕೀಟಲೆಗೆ ಜಗ್ಗದೆ ಕುಳಿತ್ತಿದ್ದೇವು. ಆಗ ಸ್ವಾಮಿ ಗಸ್ತೆಯ ಬಲಭಾಗದ ಉದ್ದಕ್ಕೂ ಕಾಣಿಸಿದ ಮರಳು ದಿಣ್ಣೆಯನ್ನು ಕಂಡು, "ಓ ! ಸಮುದ್ರ!" ಎಂದು ಮಗುವಿನಂತೆ ಕೈ ತಟ್ಟಿ ಕಾರು ನಿಲ್ಲಿಸಿದರು. ಎಲ್ಲರೂ ಆ ದಿಣ್ಣೆ ಹತ್ತಿ ಇಳಿದಾಗ, ಕಡಲ ತಡಿಯನ್ನೇ ಸೇರಿದೆವು.

ಪ್ರಶಾಂತ ಚಿತ್ ಸಾಗರದೊಳಗಿಂದ, ಅವರ ಪ್ರಪ್ರಥಮ ಸಂಕಲ್ಪದಿಂದ ಮೂಡಿದ ಬುದ್ಬುದವೇ ವಿಶ್ವ, ಎಂದು ಅವರೇ ತಿಳಿಸಿರುವರಲ್ಲವೆ ? ಸಾಗರವೆಂದರೆ ಸ್ವಾಮಿಗೆ ಆಟದ ಬಯಲು. ಅಲೆಗಳನ್ನು ಅವಲೋಕಿಸುತ್ತ, ನಮ್ಮನ್ನು ನಿಲ್ಲಿಸಿ ನೆನಸಿ ಗೋಳಾಡಿಸಿ, ನಗ್ಗಿ ಮರಳಿನ ಮೇಲೆ ಬಿದ್ದು ಓಡಿ ಓಡಿಸಿ, ಸ್ವಾಮಿ ನಮ್ಮನ್ನು ಗೋಪಬಾಲಕರಾಗಿ ಮಾರ್ಪಡಿಸಿದರು. ತಾವೂ ಗೊಲ್ಲರ ಕಣ್ಮಣಿಯಂತೆ ವಿರಾಜಿಸಿದರು. ಕಡೆಗೆ ಒಂದು ಕಡೆ ಕುಳಿತು, ಭಕ್ತರನ್ನು ಸುತ್ತ ಕೂರಿಸಿಕೊಂಡರು. ಮರಳ ಮೇಲೆ ಬೆರಳಾಡಿಸಿ, ತ್ರಿಭಂಗಿಯ ಗುಡಿ ಚಕ್ರಾಕಾರದ ಒಂದು ಗೆರೆ, ಅದರ ಮೇಲುಭಾಗದಲ್ಲಿ ಅಡ್ಡಗೆರೆಯೊಂದು ಚಿಕ್ಕದು, ಚಕ್ರದ ಮೇಲೆ ಅದಕ್ಕಿಂತ ಚಿಕ್ಕದೊಂದು ಗೆರೆ, ಹೀಗೆ ಗೀಚಿದರು. ಕೈಗೆ ಅಂಟಿದ್ದ ಕಣಗಳನ್ನು ಕೊಡುವುತ್ತಾ " ಆ ! ತಯಾರಾಯಿತು" - ಎಂದರು.

ಮರಳೊಳಗೆ ಅಂಗೈಯನ್ನಿರಿಸಿ, ೧೫ ಅಂಗುಲ ಎತ್ತರದ ಮುರಳೀಕೃಷ್ಣನ ಮಹಾದ್ಭುತ ಸುವರ್ಣ ವಿಗ್ರಹವನ್ನು ಹೊರ ತೆಗೆದರು. ಭಗವಂತನ ಸಂಕಲ್ಪದಿಂದ, ಮಣ್ಣು ಹೊನ್ನಾಯಿತು, ಮರಳು ಮುರಳೀಧರನಾಯಿತು, ಕಣ್ಣು ಪುಣ್ಯವಾಯಿತು ನಮಗೆ. "ಗುಡಿಯಲ್ಲಿರುವ ಕೃಷ್ಣನನ್ನು ನೋಡಲಿಲ್ಲ ನೀವು. ಇಗೋ ! ಚೆನ್ನಾಗಿ ದರ್ಶನ ಪಡೆಯಿರಿ" - ಎಂದರು. ಆಗ ನಾವು ನಮಸ್ಕಾರ ಮಾಡಿದ್ದು ; ಚಿನ್ನದ ಪುತ್ಥಳಿಗಲ್ಲ ; ನಮ್ಮ ರನ್ನದ ಕನ್ನಯ್ಯನಿಗೆ, ಸಾಯಿ ಕೃಷ್ಣನಿಗೆ ಗೋವುಗಳ ಪಾಲಿಸುವ ಗೋಪಾಲನಿಗೆ.

ಕಾರುಗಳ ಹತ್ತಿರಕ್ಕೆ ನಡೆದಾಗ, ತಮ್ಮ ಕಾರನ್ನು ನಡೆಸುತ್ತಿದ್ದ ಜಾಂನಗರ ರಾಜಮಾತೆಯವರ ನೌಕರನನ್ನು ಸ್ವಾಮಿ, "ಅಯ್ಯಾ ! ನಿನ್ನ ಇಷ್ಟ ದೇವತೆ ಯಾವುದು ?" - ಎಂದರು. ಏಕೆಂದರೆ, ಕೃಷ್ಣ ದರ್ಶನದಿಂದ ಅವನಿಗೆ ಅಷ್ಟು ಆನಂದ ಸಿಗಲಿಲ್ಲವೆಂದು ಅವರು ಊಹಿಸಿದರು. "ಅಂಬಾ ಭವಾನಿ" - ಎಂದ ಆ ಡ್ರೈವರ್ ಮಹಾಶಯ ! ಅಂಗೈ ಅಗಲದ ಚಿನ್ನದ ತಗಡು ಹುಟ್ಟಿ ಬಂತು. ಕೊಡುತ್ತಿದ್ದರೆ, ಕಾಲಿಗೆ ಬಿದ್ದು, ಎದ್ದಾಗ ನಿಲ್ಲಲಾರ, ಕಾರು ಹೊರಡುವುದು ಹತ್ತು ನಿಮಿಷ ತಡವಾಯಿತು. ಸ್ವಾಮಿ ಕುಳಿತ ಮೇಲೂ ತಡ " ಪಾಪ ! ಪಾರವಾಯಿಲ್ಲ" - ಎಂದರು. "ಸುವರ್ಣ ವಿಗ್ರಹ ನಿಮ್ಮಲ್ಲೇ ಇರಲಿ" ಎಂದರು ಸ್ವಾಮಿ ರಾಜಮಾತಾ ಅವರಿಗೆ.

೧೬ನೆ ತಾ | ಭಗವಾನರು, ಜಾಂನಗರ ಮಹಾರಾಜರು ಸ್ಥಾಪಿಸಿ ಅತೀವ ಶ್ರದ್ಧೆಯಿಂದ ಪೋಷಿಸುತ್ತಿರುವ, ಆಯುರ್ವೇದ ವಿಶ್ವವಿದ್ಯಾಲಯಕ್ಕೆ ಭೇಟಿ ಇತ್ತು, ಅಲ್ಲಿ ನಡೆಯುವ ಸಂಶೋಧನಾ ಕಾರ್ಯಗಳು, ಶಿಕ್ಷಣ ತರಗತಿಗಳು, ಔಷಧ ತಯಾರಿಕೆ ಕ್ರಮ ಮುಂತಾದುವುಗಳನ್ನೆಲ್ಲ ಪರಾಮರ್ಶಿಸಿ, ವೈದ್ಯ ವಿದ್ವಾಂಸರಿಗೆ ಹಲವಾರು ಸಲಹೆಗಳನ್ನಿತ್ತರು. ಸೇವಾದಳ ಶಿಕ್ಷಣ ಶಿಬಿರವನ್ನು ಸಂದರ್ಶಿಸಿದರು. ತ್ಯಾಗ ಪ್ರೇಮಗಳು ಸೇವಾಸಾಧನದ ನೇತ್ರಗಳು, ಎಂದು ಅವರಿಗೆ ಒತ್ತಿ ಹೇಳಿದರು. ಸಂಜೆ, ಪುರಭವನದಲ್ಲಿ ಸಭೆ ಸೇರಿದ್ದ 'ರೋಟರಿ' ಸಂಸ್ಥೆ ಸದಸ್ಯರನ್ನುದ್ದೇಶಿಸಿ, ಪರಿಣಾಮಕಾರಿ ಉಪನ್ಯಾಸವಿತ್ತರು. ಭಾಷಣಗಳನ್ನೂ, ಭೋಜನಕೂಟಗಳನ್ನೂ ಕಡಿಮೆ ಮಾಡಿ, ಕಾರ್ಯರಂಗದಲ್ಲಿ ಪ್ರವೇಶಿಸಿ, ಜನಹಿತವನ್ನು ಸಾಧಿಸಬೇಕೆಂದರು. ಸಂತಾನ ನಿಯಂತ್ರಣ ಪ್ರಚಾರ ಮಾಡುತ್ತಿದ್ದೇವೆ ಎಂದು ರೋಟರಿ ಕಾರ್ಯದರ್ಶಿ ತನ್ನ ವರದಿಯಲ್ಲಿ ತಿಳಿಸಿದಾಗ, ಸ್ವಾಮಿ ಕೃತಕ, ಕೃತ್ರಿಮ ಪದ್ಧತಿಗಳನ್ನು ಜನಪ್ರಿಯ ಮಾಡುವುದರಿಂದ, ಕುಟುಂಬ ಜೀವನ ಕಲುಷಿತವಾಗುವುದೆಂದೂ ಜನರಲ್ಲಿ ಜವಾಬ್ದಾರಿ ಮನೋಭಾವ ಕುಗ್ಗುವುದೆಂದೂ, ಯಮನಿ ಯಮಾದಿ ಸಾಧನಾ ಮಾರ್ಗ, ಜಪ ಧ್ಯಾನಗಳಿಂದ ಪಶುತ್ವ ಸ್ವಭಾವವನ್ನು ಸಂಸ್ಕರಿಸಬೇಕೆಂದೂ ಉಪದೇಶಿಸಿದರು.

ಆ ರಾತ್ರಿ ಹಲವು ಭಕ್ತರೊಂದಿಗೆ ಸ್ವಾಮಿ ಸಮುದ್ರ ತೀರಕ್ಕೆ ಮತ್ತೆ ತೆರಳಿದರು. ಬಾಲಚ್ಚಾದಿ ಎಂಬಲ್ಲಿನ "ಸೈನಿಕ ಸ್ಕೂಲ್" ಎದುರು, ನಾವೆಲ್ಲ ಬೆಳದಿಂಗಳ ತಂಪನ್ನು ಸವಿಯುತ್ತ, ಅಲೆಗಳ ತಾಳಕ್ಕೆ ಮನದ ಮೇಳವನ್ನು ತೂಗಿಸುತ್ತ, ಭಗವತ್ಸನ್ನಿಧಿಯಲ್ಲಿ ಮಾತಿಲ್ಲದ ನೀರವತೆಗಾನಂದಿಸಿ ಕುಳಿತಿದ್ದೆವು, ಅರ್ಧ ಗಂಟೆ ಕಾಲ. ಅನಂತರ ಸ್ವಾಮಿ, ಆಗಲೇ ನಮ್ಮ ಸುತ್ತ ಕುಳಿತಿದ್ದ ಸೈನಿಕ ಶಾಲೆಯ ಅಧ್ಯಾಪಕರನ್ನು, ಅಲ್ಲಿಯ ಶಿಕ್ಷಣದ ಕುರಿತು ಪ್ರಶ್ನಿಸಿದರು. ಅನ್ನಪೂರ್ಣಾ ದೇವಿಯ ವಿಗ್ರಹವನ್ನು ಸೃಷ್ಟಿಸಿ, "ನಿಮ್ಮ ಭೋಜನ ಶಾಲೆಯಲ್ಲಿ ಇದನ್ನಿರಿಸಿಕೊಳ್ಳಿ" - ಎಂದು ಅದರ ಪ್ರಿನ್ಸಿಪಾಲರ ಹಸ್ತದಲ್ಲಿರಿಸಿದರು. ಅನ್ನ ಎಂದರೆ, ಬಾಯಿಂದ ಹೊಟ್ಟೆಗೆ ರವಾನಿಸುವ ಪದಾರ್ಥಗಳು ಮಾತ್ರವಲ್ಲ. ಪಂಚೇಂದ್ರಿಯಗಳು, ಮನೋಬುದ್ಧ್ಯಹಂಕಾರ ಚಿತ್ತಗಳಿಗೆ ನೀಡುವ ಅನುಭವ ಸಾಮಾಗ್ರಿಯೆಲ್ಲ ಅನ್ನವೇ. ದೈವಾನುಗ್ರಹದಿಂದ ಅವೆಲ್ಲವೂ ತುಷ್ಟಿ ಪುಷ್ಟಿದಾಯಕವಾಗುವುದು ಎಂದು ಹೇಳಿ ಸ್ವಾಮಿ, ಅದರ ಮಹಿಮೆಯನ್ನು ವಿವರಿಸಿದರು. ತಮ್ಮ ಶಾಲೆಗೆ ಅನಿರೀಕ್ಷಿತವಾಗಿ ಭಗವತ್ಕೃಪೆ ದೊರೆತಾಗ, ಅಧ್ಯಾಪಕರು ತುಂಬಾ ಆನಂದಿಸಿದರು.

ಅಹೇತುಕ ಕರುಣಾ ಸಿಂಧು ಅಲ್ಲವೆ ನಮ್ಮ ಸ್ವಾಮಿ ? ಅಲ್ಲಿದ್ದವರನ್ನೆಲ್ಲ ಸಾಲಾಗಿ ಕೇಳಿದರು, "ನಿಮಗೇನು ಬೇಕು? " ಎಂದು. "ಕಲ್ಪವೃಕ್ಷದ ಅಡಿಯಲ್ಲಿ ನಿಂತು ಕಾಫಿ ಪುಡಿ ಕೇಳುತ್ತೀರಿ" - ಎಂದು ಸ್ವಾಮಿ ಹಿಂದೆ ನಮ್ಮನ್ನು ಮೂದಲಿಸಿದ್ದರಾದ್ದರಿಂದ, ನಾವೆಲ್ಲ ಸುಮ್ಮನಿದ್ದೆವು. "ನಿಮ್ಮ ಸಾನಿಧ್ಯ ಒಂದೇ ಸಾಕು" - ಎಂದು ಹೇಳಿದೆವು. ಒಬ್ಬರು 'ಉಂಗುರ'

ಎಂದು ಮೆತ್ತಗೆ ಹೆದರಿ ಹೆದರಿ ಒದರಿದರು. ಓಂಕಾರ ಕೆತ್ತಿದ ಚಿನ್ನದುಂಗುರ ಕೂಡಲೇ ಸೃಷ್ಟಿ ಆಯಿತು. ಒಬ್ಬರು 'ವಿನಾಯಕ' ಎಂದರು. ೧೦೮ ಓಂಕಾರ ಲಿಖಿತದಿಂದಲೇ ರೂಪುಗೊಂಡ ಒಂದು ಗಣೇಶ ಚಿತ್ರವನ್ನು ಸೃಷ್ಟಿಸಿ ಅವರಿಗೆ ಕೊಟ್ಟರು. ಎಂಥ ನವನವೀನ ಚಮತ್ಕಾರ, ಎಷ್ಟು ಅರ್ಥವತ್ತಾದ ಆಕಾಶ, ಪ್ರಣವ ಸ್ವರೂಪವಾಗಿ ಮೂಲಾಧಾರ ಚಕ್ರದಲ್ಲಿ ನೆಲೆಸಿರುವ ಗಣಪತಿ ಇವನು, ಎಂದು ಸ್ವಾಮಿ ಬಿಡಿಬಿಡಿಸಿ ಹೇಳಿದರು. ತಕ್ಷಣ ಗೋಕಾಕ್‌ರ ಕಡೆ ತಿರುಗಿ "ವಿ. ಕೆ. ಅಂದರೇನು"- ಎಂದು ಪ್ರಶ್ನಿಸಿದರು. ಅವರು 'ವಿನಾಯಕ ಕೃಷ್ಣ' ಎಂದು ಉತ್ತರಿಸಿದ ಕೂಡಲೇ ಕೈಯಾಡಿಸಿ, ಅಂದ ಚೆಂದದ ಸಕಲ ಲಕ್ಷಣೋಪೇತವಾದ 'ಬೆಳ್ಳಿ' ಗಣೇಶನನ್ನವರ ಕೈಗೆ ಕೊಟ್ಟರು. ರಾತ್ರಿ ನಾವು ಅರಮನೆ ತಲುಪುವಾಗ ಗಂಟೆ ಹತ್ತೂ ಕಾಲು.

೧೭ನೆ ತಾ|| ಭಾರತ ದೇಶದ ಚರಿತ್ರೆಯಲ್ಲೇ ಸುವರ್ಣಾಕ್ಷರದಲ್ಲಿ ಬರೆದಿಡಬೇಕಾದ ಮಹಾ ಪುಣ್ಯ ದಿನ. ಆಸೇತು ಹಿಮಾಚಲ ಭಾರತ ದೇಶ, ಸನಾತನ ಧರ್ಮದಿಂದ ಒಂದಾಗಿದ್ದರೂ, ಜಾತಿ ಭೇದ, ಮತ ಭೇದ, ಭಾಷಾ ಭೇದ, ಆಹಾರ ಭೇದ, ವಸ್ತ್ರ ಭೇದ ಇತ್ಯಾದಿ ಒಡಕುಗಳಿಂದ ದೇಶ ಭಿನ್ನಭಿನ್ನವಾಗಿ, ಪರರ ಪಾಲಾಗಿ, ಕುಗ್ಗಿ ಕೃಶವಾಗಿ, ಬಿಳಿಯರ ಕಲಹ ಕಾದಾಟಗಳಲ್ಲಿ ಸಿಕ್ಕಿ ತನ್ನ ಅಸ್ತಿತ್ವವನ್ನೇ ಮರೆತು, ನೂರಾರು ವರ್ಷ ನೊಂದು ಬೆಂದ ಮೇಲೆ, ೧೯೪೭ರಲ್ಲಿ ಆಂಗ್ಲೇಯರ ಹಿಡಿತ ಸಡಿಲಿತು. ಅವರು ಸ್ವದೇಶಕ್ಕೆ ಪ್ರಯಾಣ ಬೆಳೆಸಿದರು. ಆಗ ಸ್ವರಾಜ್ಯ ಸಿದ್ಧಿಯ ಗುರುತಾಗಿ, ನವಾನಗರ ಮಹಾರಾಜರು ಮತ್ತು ರಾಷ್ಟ್ರಾಧ್ಯಕ್ಷ ರಾಜೇಂದ್ರ ಪ್ರಸಾದರು, ಗುಜರಾತ್ ರಾಜ್ಯದ ಸಮುದ್ರ ತೀರದಲ್ಲಿನ ಸೋಮನಾಥ ದೇವಾಲಯವನ್ನು ಜೀರ್ಣೋದ್ಧಾರ ಮಾಡಲು ನಿಶ್ಚಯಿಸಿದರು. ಭಕ್ತರ ಕಾಣಿಕೆಯ ಧನ, ರಾಜ ಮಹಾರಾಜರ ದತ್ತಿಗಳು, ಇವು ಶೇಖರವಾಗಿ, ಕ್ರಿ. ಶಕ ಎಂಟನೆಯ ಶತಮಾನದಲ್ಲೇ ಆ ಗುಡಿಯಲ್ಲಿ ಚಿನ್ನ ಬೆಳ್ಳಿ ರಾಶಿ ರಾಶಿ ಸೇರಿತು. ಹತ್ತಾರು ಬಾರಿ ಮುಸ್ಲಿಂ ಸೇನೆಗಳು ದೇವಸ್ಥಾನವನ್ನಾಕ್ರಮಿಸಿ, ಧನ ಕನಕವನ್ನೆಲ್ಲ ಸೂರೆ ಮಾಡಿದರು. ಗರ್ಭಗುಡಿಯೊಳಗಿನ ಲಿಂಗ ಮೂರ್ತಿಯನ್ನು ಕಿತ್ತೊಗೆದ ಘಟನೆಗಳೂ ಉಂಟು. ಗುಡಿ ಕೂಡ ಕಾಲಗತಿಗೆ ಸಿಕ್ಕಿ ಶಿಥಿಲವಾಯಿತು. ಐದಾರು ಸಲ ಅದನ್ನು ಪುನಃ ಎಬ್ಬಿಸಿ, ದಿವ್ಯ ಭವ್ಯಮಂದಿರವಾಗಿ ನಿರ್ಮಿಸಿ ಲಿಂಗ ಪ್ರತಿಷ್ಠೆ ಮಾಡಿದರೂ, ಅದರ ಕೀರ್ತಿಯಿಂದಾಕರ್ಷಿತರಾದ ಆಕ್ರಮಣಕಾರರಿಂದ ಉಳಿಸಲು ಸಾಧ್ಯವಾಗಲಿಲ್ಲ. ೧೯೪೭ ದೀಪಾವಳಿ ಹಬ್ಬದ ದಿನ, ಸೋಮನಾಥ ದೇವಾಲಯವಿರುವ ಜುನಾಘಡ್ ಸಂಸ್ಥಾನದ ನವಾಬನ ರಾಜಧಾನಿಗೆ ಭಾರತ ಸೇನೆ ಪ್ರವೇಶಿಸಿತು. ನಿರ್ಗುಣ ನಿರಾಕಾರ ಪರಬ್ರಹ್ಮನನ್ನು ಧ್ಯಾನಿಸಲು ಅಸಮರ್ಥರಾದವರಿಗೆ ನಿಯಮಿಸಿರುವ ವಿಗ್ರಹಾರಾಧನೆಯ ಮರ್ಮವನ್ನೂ, ಮಹತ್ವವನ್ನೂ ಅರಿಯದವರ ಆಡಳಿತಕ್ಕೆ ಸಿಕ್ಕಿ ಶಿಥಿಲವಾದ ಗುಡಿಯ ಮುಂದೆ ಸಭೆ ಸೇರಿಸಿ, ಸರ್ದಾರ್ ವಲ್ಲಭಬಾಯಿ ಪಟೇಲ್ ಅವರು, ಸೋಮನಾಥನನ್ನು ಮತ್ತೆ ಉದ್ಧರಿಸಲು ನಾವು ತೀರ್ಮಾನಿಸಿದ್ದೇವೆ. ಈ

ಶ್ವರ್ಯದಲ್ಲಿ ಎಲ್ಲರೂ ಪಾಲಾಗಬೇಕು ಎಂದು ಘೋಷಿಸಿದರು. ಜನ ಸಮುದ್ರ, ಜಲ ಸಮುದ್ರ, ಎರಡೂ ತಥಾಸ್ತು ಎಂದವು.

ಶತಮಾನಗಳ ಹಿಂದೆ ಕಂಗೊಳಿಸುತ್ತಿದ್ದ ವೈಭವದೊಂದಿಗೆ, ತದ್ವತ್ ಚಾಚೂತಪ್ಪದೆ ದೇವಾಲಯವನ್ನು, "ಮಹಾಮೇರು ಪ್ರಸಾದ" - ಎಂಬ ಪುರಾತನ ನಾಮಕ್ಕನುಗುಣವಾಗಿ, ಮತ್ತೆ ಸರ್ವಾಂಗ ಸುಂದರವಾಗಿ ಕಟ್ಟಿ ಕೃತಾರ್ಥರಾದರು. ಜಾಂ ಸಾಹೇಬರೇ ಕಟ್ಟಡ ಸಮಿತಿಯ ಪ್ರಧಾನ ಸಂಚಾಲಕರು. ರಾಜೇಂದ್ರ ಪ್ರಸಾದರು ಸ್ವತಃ ಬಂದು, ಹೊಸ ಲಿಂಗ ಪ್ರತಿಷ್ಠೆಯನ್ನು ಪರಾಮರ್ಶಿಸಿ ಪರಮಾನಂದ ಪಡೆದರು. ರಾಜಮಾತಾ ಅವರ ಪತಿ ದಿಗ್ವಿಜಯ ಸಿಂಗ್ ಮಹಾರಾಜರು, ಗುಡಿಗೆ ದ್ವಾರಗೋಪುರ ಕಟ್ಟಿಸಿದರು. ಆದರೆ ಅದರ ಕೆಲಸ ಪೂರ್ತಿಯಾಗುವ ಮುನ್ನ ಲಿಂಗೈಕ್ಯರಾದರು. ಆ ಗೋಪುರದ ಪ್ರವೇಶೋತ್ಸವ ಭಗವಾನರಿಂದಾಗಬೇಕೆಂಬುದು ರಾಜಮಾತೆಯ ಬಯಕೆ.

ರಾಜ್ಯ ಉನ್ನತಾಧಿಕಾರಿಗಳೂ, ಮಂತ್ರಿಗಳೂ, ದೇವಾಲಯದ ಆಡಳಿತ ವರ್ಗದವರೂ, ಸಹಸ್ರಾರು ಪ್ರಜೆಗಳೊಂದಿಗೆ ಸ್ವಾಮಿಯನ್ನು ವೇದಘೋಷ, ವಾದ್ಯಗಾನದಿಂದ ಸ್ವಾಗತಿಸಿದರು. ಗೋಪುರದ ಬೆಳ್ಳಿ ಬಾಗಿಲನ್ನು ಬೆಳ್ಳಿ ಬೀಗದ ಕೈಯಿಂದ ತೆರೆದು, ಅರ್ಚಕ ವೃಂದದೊಂದಿಗೆ ಗುಡಿಯೊಳಗೆ ಪ್ರವೇಶಿಸಿದರು. ತಳಿರುತೋರಣಗಳಿಂದ, ಬಣ್ಣಬಣ್ಣದ ರಂಗವಲ್ಲಿ, ಕದಳೀ ಸ್ತಂಭಗಳ ಸಾಲು, ಕುಸುಮದಳ ಹಾಸಿದ ದಾರಿ, ಇಂಥ ಅಲಂಕಾರದಿಂದ ದೇಗುಲ ದೇವಲೋಕದ್ದು ಎಂದೆನಿಸಿತು. ಗರ್ಭಗುಡಿಯ ಮೇಲಿನ ಶಿಖರ ೧೫೦ ಅಡಿ ಎತ್ತರಕ್ಕೇರಿತು. ವಿದ್ಯುಚ್ಛಕ್ತಿ ಉಪಕರಣದಿಂದ, ಕೆಳಗಿಂದ ತುದಿಯವರೆಗೂ ದೊಡ್ಡ ಧ್ವಜವನ್ನು ಏರಿಸಿ ಹಾರಿಸಿ, ಸ್ವಾಮಿ ಜನಸ್ತೋಮವನ್ನು ಹರ್ಷಗೊಳಿಸಿದರು.

ಸಾಯೀಶ್ವರ, ಸೋಮೇಶ್ವರ ಸನ್ನಿಧಿಯಲ್ಲಿ ನಮಗೆ ದರ್ಶನವಿತ್ತರು. ರಾಜಮಾತಾ ಆದಿಯಾಗಿ ನಾವೆಲ್ಲ ಗರ್ಭಗುಡಿಯ ಬಾಗಿಲಲ್ಲೇ ಕುಳಿತು, ಆ ದೈವೀದೃಶ್ಯವನ್ನು ಹೃದಯ ಪಟದಲ್ಲಿ ಅಚ್ಚೊತ್ತಿಕೊಂಡೆವು. ವೇದ ವಿದ್ವಾಂಸರು ಸೊಂಟದೆತ್ತರದ ಆ ಬೃಹತ್ ಲಿಂಗದ ಸುತ್ತ ಸಾಲಾಗಿ ನಿಂತು, ನಮಕ ಚಮಕ ಮಂತ್ರ ಹೇಳುತ್ತಿದ್ದರೆ, ಪ್ರತಿಧ್ವನಿ ನಮ್ಮ ಅಂತರಂಗದಲ್ಲೂ ಮೊಳಗುತ್ತಿತ್ತು. ಬೆಳ್ಳಿತಟ್ಟೆಯೊಂದನ್ನು ತಮ್ಮೆದುರು ಹಿಡಿಯಲು ಹೇಳಿದರು ಸ್ವಾಮಿ. ಅದರ ಮೇಲೆ ಅಂಗೈ ತಿರುಗಿಸಿದರು. ಬಿಲ್ವಪತ್ರೆ... ಶಿವನ ಆರಾಧನೆಗೆ - ಬೆಳ್ಳಿ, ೧೦೮. ಗಿಲ್ ಗಿಲ್ ಎಂತ ತುಂತುರು ಮಳೆಯಂತೆ ಬಿದ್ದವು ! ಮತ್ತೊಂದು ಹಸ್ತ ಚಲನ. ಚಿನ್ನದ ಹೂವುಗಳು, ೧೦೮, ಆ ! ಆ ತಟ್ಟೆಯನ್ನು ನಮಗೆಲ್ಲ ತೋರಿಸುವಂತೆ, ನಾವು ಆ ಪೂಜಾ ಪುಷ್ಪಗಳನ್ನು ಸ್ಪರ್ಶಿಸುವಂತೆ ಸ್ವಾಮಿ ಆಜ್ಞೆ, ಅನಂತರ ನಮ್ಮ ಪರವಾಗಿ ಅರ್ಚಕರು ಲಿಂಗಾರಾಧನೆ ಮಾಡಿದರು. ಆಗ ನಾನು ಹೊಸಲಲ್ಲೇ ಕುಳಿತು, ದ್ವಾದಶ ಜ್ಯೋತಿರ್ಲಿಂಗ

ಸ್ತೋತ್ರವನ್ನು ಹೇಳುತ್ತಿದ್ದೆ. ವಾರಣಾಸಿಯ ವಿಶ್ವೇಶ, ಹಿಮಾಲಯದ ಕೇದಾರನಾಥ, ದಕ್ಷಿಣ ರಾಮೇಶ್ವರ, ಆಂಧ್ರದ ಶ್ರೀಶೈಲ, ಉಜ್ಜಯಿನಿ ಮಹಾಕಾಲ, ನಾಸಿಕದ ತ್ರಯಂಬಕ, ಸೌರಾಷ್ಟ್ರದ ಸೋಮನಾಥ... ಅಗೋ ! ಸ್ವಾಮಿಯ ಅಂಗೈಯಲ್ಲಿ ಆಗ ತಾನೆ ಆವಿರ್ಭವಿಸಿದ ಜ್ಯೋತಿರ್ಲಿಂಗ, ಸೋಮನಾಥ.

ಹೌದು ಜಾಂನಗರದಿಂದ ಸೋಮನಾಥಕ್ಕೆ ಬರುವಾಗ, ಕಾರಿನಲ್ಲೇ ಸ್ವಾಮಿ ನಮಗೆ ಹೇಳಿದ್ದರು. "ನಿಮಗೆಲ್ಲ ಇವತ್ತು ನಾನು ನಿಜವಾದ ಸೋಮೇಶ್ವರ ಲಿಂಗ ತೋರಿಸುತ್ತೇನೆ. ಬ್ರಹ್ಮದೇವನಿಂದ ಪ್ರತಿಷ್ಠಿತವಾದ, ಚಂದ್ರ (ಸೋಮ), ಪೂಜಿಸಿ ತಪೋಬಲದಿಂದ ಪ್ರತ್ಯಕ್ಷಾನುಗ್ರಹ ಪಡೆದ ಲಿಂಗ" ಎಂದು ವಿವರಿಸಿದ್ದರು. ತಮ್ಮೆದುರಿಗಿದ್ದ ಬೃಹತ್ ಲಿಂಗ, ಮೊನ್ನೆ ಮೊನ್ನೆ ಶಿಲ್ಪಿಗಳು ಕಡೆದದ್ದು. ಸಾಯಿ ಕೈಯಲ್ಲಿ ಮರಿ ಸೂರ್ಯನಂತೆ ಪ್ರಕಾಶಿಸುವ ಅಂಡಾಕಾರದ ಲಿಂಗ, ನಿಜವಾದ ಸೋಮೇಶ್ವರ ಲಿಂಗ ಪಂಚಭೂತಲಿಂಗಗಳ ಪೈಕಿ ವಾಯುಲಿಂಗ. ಇಂದಿನವರೆಗೂ ಈ ಲಿಂಗ ಭೂಗತವಾಗಿ, ಭಕ್ತರ ಪೂಜೆಯನ್ನು ಸ್ವೀಕರಿಸುವ ಪ್ರತ್ಯಕ್ಷ ಲಿಂಗದಡಿಯಲ್ಲೇ ಇತ್ತು. ಈ ದೇವಾಲಯ ಸ್ಥಾಪನೆಯಾದಾಗ, ಪ್ರಪ್ರಥಮತ ಲಿಂಗ ಪ್ರತಿಷ್ಠೆಯಾದಾಗ, ಇದನ್ನೇ ಪ್ರಾಣ ಸ್ವರೂಪವೆಂದು ವೇದವಿಹಿತಮಂತ್ರಗಳೊಂದಿಗೆ ಸೋಮೇಶ್ವರ ಸ್ವಾಮಿ ಎಂದು ಅವಾಹನೆ ಮಾಡಿ ಇರಿಸಿದರು. ಪರಮತೀಯರು ಮೇಲಿನ ವಿಗ್ರಹವನ್ನು ಹಲವು ಬಾರಿ ಕಿತ್ತು ಸಾಗಿಸಿದರೂ, ಇದಕ್ಕೆ ಎಂದು ಸ್ಥಾನ ಚ್ಯುತಿ ಸಂಭವಿಸಲಿಲ್ಲ. ಇನ್ನು ಮುಂದೆ ಸೋಮನಾಥಕ್ಕೆ ಎಂದೂ ಅಪಾಯ ಸಂಭವಿಸದು. ಇಂದಿನಿಂದ, ಈ ನಿಜ ಸೋಮೇಶ್ವರ, ಜನರ ಆರಾಧನೆಯನ್ನು ಸ್ವೀಕರಿಸುತ್ತ, ಅವರಿಗೆ ಆಯುರಾರೋಗ್ಯ, ಐಶ್ವರ್ಯ, ಭಕ್ತಿ, ಜ್ಞಾನ, ವೈರಾಗ್ಯಜನಿತ ಪರಮ ಪದವನ್ನನುಗ್ರಹಿಸುತ್ತ ವಿರಾಜಿಸುತ್ತದೆ ಎಂದು ಅಪ್ಪಣೆ ಕೊಡಿಸಿದರು. ಆ ಲಿಂಗವನ್ನು ಕೂರಿಸುವುದಕ್ಕಾಗಿ ಕೈ ಆಡಿಸಿ ಒಂದು ಬೆಳ್ಳಿ ಪೀಠವನ್ನು ಸೃಷ್ಟಿಸಿದರು. "ಈ ದೇವಸ್ಥಾನಕ್ಕೂ ಈ ಪ್ರದೇಶಕ್ಕೂ ಸಕಲ ಜಗತ್ತಿಗೂ ಅಭಯ ಪ್ರದಾನ ಮಾಡುವುದೇ ಈ ಆವರಣದೊದ್ದೇಶ" ಎಂದರು. "ಜೈ ! ಭಗವಾನ್" - ಎಂಬ ಘೋಷ ಇಪ್ಪತ್ತು ಸಾವಿರ ಕಂಠಗಳಿಂದ ಹೊರಟುವು.

ಆ ದಿನವೇ ಸ್ವಾಮಿ ವೀರವಲ್ ಪಟ್ಟಣದ ರಾಜೇಂದ್ರ, ಭವನದ ಅರಮನೆಯಲ್ಲಿ ಕೊಂಚ ಹೊತ್ತು ತಂಗಿದ ನಂತರ, ಕೆಶೋದ್ ವಿಮಾನ ನಿಲ್ದಾಣದಿಂದ ಪ್ರತ್ಯೇಕ ವಿಮಾನದಲ್ಲಿ ಬೊಂಬಾಯಿ ಸೇರಿದರು. ಧರ್ಮಕ್ಷೇತ್ರದಲ್ಲಿ ಭಗವದ್ದರ್ಶನಕ್ಕಾಗಿ ೩೦ ಸಹಸ್ರ ಜನರು ಕಾದು ಕುಳಿತಿದ್ದರು. ತಮ್ಮ ದಿವ್ಯೋಪನ್ಯಾಸದಲ್ಲಿ ಸ್ವಾಮಿ, "ವಿಶ್ವವೆಂಬುದು ದೇವರ ದೇಹ. ಕಣ ಕಣದಲ್ಲೂ ಅಣು ಅಣುವಲ್ಲೂ, ಕಾಣುವ ಕಣ್ಣಿದ್ದರೆ - ನೀವು ದೇವರನ್ನು ಗುರ್ತಿಸಬಹುದು" ಎಂದು ಸಾರಿದರು.

ಮಾನವ ಕುಲಕ್ಕೆ ಆನಂದಾಮೃತ ಹಂಚುವುದಕ್ಕಾಗಿ ಅವತರಿಸಿರುವ ಸ್ವಾಮಿಗೆ ವಿಶ್ರಾಂತಿ, ಬೇಕಿಲ್ಲದ ವಸ್ತು. "ನಾನು ವಿಶ್ರಾಂತಿಗಾಗಿ ಬರಲಿಲ್ಲ. ಎಲ್ಲಿದ್ದರೂ ನನಗೆ ಲೋಕ ಸಂಗ್ರಹ ಕರ್ಮ ಇದ್ದೇ ಇದೆ"- ಎನ್ನುತ್ತಾರೆ, ಸ್ವಾಮಿ. ೨೦ನೇ ತಾ| ಬೆಂಗಳೂರು ಬೃಂದಾವನ ಸೇರಿದ ಸ್ವಾಮಿ, ವೈಟ್‌ಫೀಲ್ಡ್‌ನಲ್ಲಿ ಒಂದು ಎಂಜಿನೀರಿಂಗ್ ವರ್ಕ್‌ಷಾಪ್‌ನ್ನು ಸಂದರ್ಶಿಸಿ, ಚಾಲಕರಿಗೂ ಮಾಲಕರಿಗೂ ಫಲಕಾರಿಯಾದ ಸಲಹೆಗಳನ್ನಿತ್ತರು. ಕಲ್ಕುಂಟೆ ಗ್ರಾಮಕ್ಕೆ ೨೧ ಮೈಲಿ ಹಳ್ಳಿ ರಸ್ತೆಯಲ್ಲೇ ಹೋಗಿ, ದಾರಿಯುದ್ದಕ್ಕೂ ನೆರೆದಿದ್ದ ರೈತ ಕುಟುಂಬಗಳಿಗೆ ದರ್ಶನ ದಯಪಾಲಿಸಿದರು. ರಂಗನಾಥ ದೇವಸ್ಥಾನಕ್ಕೂ ಹೋಗಿ ಬಂದರು. ಅನಂತರ ಆ ಗ್ರಾಮಕ್ಕೆ ಬಂದು ಉನ್ನತ ಪಾಠ ಶಾಲೆಯನ್ನನುಗ್ರಹಿಸಿ, ಶಂಕುಸ್ಥಾಪನೆ ಮಾಡಿದರು. "ಶಿಕ್ಷಣ ಕ್ಷೇತ್ರವು ಪವಿತ್ರವಾಗಬೇಕು. ದೇಶಕ್ಷೇಮಕ್ಕೂ ಲೋಕ ಕಲ್ಯಾಣಕ್ಕೂ ಇದು ಅತ್ಯಗತ್ಯ. ಆದ್ದರಿಂದಲೇ ನಾನು ಬಾಲಬಾಲಿಕೆಯರಿಗಾಗಿ ಆಧ್ಯಾತ್ಮಿಕ ತಳಹದಿಯ ಮೇಲೆ ಅಲ್ಲಲ್ಲಿ ಶಾಲಾ ಕಾಲೇಜುಗಳನ್ನು ಸ್ಥಾಪಿಸುತ್ತಿರುವುದು. ಶಿಕ್ಷಣ, ರಕ್ಷಣ ಈ ಎರಡೂ ಲೋಕ ಸೇವಾ ಸಂಸ್ಥೆಗಳು" - ಎಂದು ಹೇಳಿ, ಪೋಲೀಸರ ಸೇವಾ ಸಾಮರ್ಥ್ಯವನ್ನು ಹೆಚ್ಚಿಸಬೇಕಾದ ಆವಶ್ಯಕತೆಯನ್ನು ಪ್ರಸ್ತಾಪಿಸಿದರು.

ಭಾರತೀಯ ವಿದ್ಯಾಭವನದ ಬೆಂಗಳೂರು ನಗರ ಶಾಖೆಗೆ ಭೇಟಿ ಕೊಟ್ಟು, ಭಾರತೀಯ ವಿದ್ಯೆ ಎಂದರೆ ಆತ್ಮವಿದ್ಯೆ. ವಿದ್ಯಾಭವನದ ಸದಸ್ಯರೂ, ಈ ವಿದ್ಯಾರ್ಥಿಗಳೂ, ಬೋಧಕರೂ, ಅಹಂಕಾರ ಆಡಂಬರಗಳಿಗೆ ಮನಸೋಲದೆ, ಮತದ್ವೇಷ, ಕೋಮುದ್ವೇಷ, ಭಾಷಾದ್ವೇಷಕ್ಕವಕಾಶ ಕೊಡದೆ ಶ್ರಮಿಸಬೇಕೆಂದು ಬೋಧಿಸಿದರು. ಅಧ್ಯಕ್ಷರಾಗಿದ್ದ ಶ್ರೀ ಆರ್.ಆರ್. ದಿವಾಕರ್ ಅವರು, "ಲೋಕದಲ್ಲಿ ನೈತಿಕ ಧಾರ್ಮಿಕ ಆಧ್ಯಾತ್ಮಿಕ ಆದರ್ಶಗಳನ್ನು ನೆಲೆಗೊಳಿಸಲು, ಕಂಕಣಬದ್ಧರಾಗಿರುವ ಮಹಾಶಕ್ತಿ ಸತ್ಯಸಾಯಿ" - ಎಂದು ಸ್ವಾಮಿಯನ್ನು ಕೊಂಡಾಡಿದರು.

# ಕರುಣಾ ವರುಣಾಲಯ

ಜುಲೈ ೧೯೭೮. ಆಫ್ರಿಕಾ ಖಂಡದ ಕಂಪಾಲಾ ನಗರ. ಬಾಬಾ ಅವರು ತಮ್ಮ ದಿವ್ಯೋಪನ್ಯಾಸದಲ್ಲಿ "ಅದ್ವೇಷ್ಟಾ ಸರ್ವಭೂತಾನಾಂ, ಯಾರನ್ನೂ ದ್ವೇಷಿಸಬಾರದು. ಎದೆಯೊಳಗಿನ ನುಡಿ ಎಲ್ಲರಿಗೂ ಒಂದೇ. ನಿಮ್ಮ ನೆರೆ ಊರಿನವನು ನಿಮ್ಮ ದೇವರನ್ನೇ ಬೇರೊಂದು ಭಾಷೆಯಲ್ಲಿ ಕರೆದು ಕಂಬನಿ ಸುರಿಯುತ್ತಿದ್ದಾನೆ. ನಿಮ್ಮ ದೇವರಿಗೆ ಅವನ ಭಾಷೆ ತಿಳಿಯುತ್ತದೆ ; ಅವನು ಬಯಸುವುದನ್ನೂ ನೀಡಬಲ್ಲ. ನಿಮ್ಮಂತೆಯೇ ಎಲ್ಲರಿಗೂ ಹಸಿವು ದಾಹ, ಸುಖೇಚ್ಛೆ ಆಸೆ, ಆತಂಕ ಉಂಟು. ಪರಸ್ಪರ ಸೌಹಾರ್ದದಿಂದಿರಿ. ಪರರ ಕಷ್ಟವನ್ನು ನಿಮ್ಮದೆಂದೇ ಭಾವಿಸಿ ಅವರಿಗೆ ನೆರವಾಗಿರಿ" - ಎಂದರು. "ಪ್ರೇಮದಿಂದಲೇ ಬೆಳಕು, ಅದೇ ಬಲ, ಅದೇಶಾಂತಿ, ಆನಂದ, ಅದೇ ದೈವ"- ಎಂದರು ನನ್ನ ನಡೆ, ನುಡಿ, ನನ್ನ ಹಾವಭಾವದಿಂದಲೇ ನನ್ನ ಉಪದೇಶ, ಸಂದೇಶಗಳನ್ನು ನೀವು ಅರಿತುಕೊಳ್ಳಬಹುದು". ಎನ್ನುತ್ತಾರೆ ಬಾಬಾ. "ನನ್ನನ್ನು ಹೇಗೆ ಗುರುತಿಸುವುದು ಎಂಬ ಅನುಮಾನ ಬೇಡ ನಿಮಗೆ - ಪ್ರೇಮಸ್ವರೂಪ ಅನ್ನಿ, ಸಾಕು " - ಎನ್ನುತ್ತಾರೆ.

ಆ ಪ್ರೇಮದಿಂದಲೇ ಅವರು ನಮ್ಮನ್ನು ಸ್ವಾರ್ಥದಿಂದ ಪರಾರ್ಥಕ್ಕೆ ವಿನಾಶದಿಂದ ವಿಕಾಸಕ್ಕೆ ತಿರುಗಿಸಿ ಕಾಪಾಡುವುದು, ಗ್ಯಾರಿ, ಷಾರನ್ ಎಂಬ ಗೆಳೆಯರಿಬ್ಬರು ಅಮೆರಿಕದಿಂದ ನನಗೆ ಪತ್ರ ಬರೆಯುತ್ತ, "ಸ್ವಾಮಿಯ ಸೇವೆಗೆ ನಮಗೆ ಇಲ್ಲಿ ಅವಕಾಶ ಸಿಕ್ಕಿದೆ. ಪುಸ್ತಕಾಲಯದಲ್ಲಿ ನಾನು, ವಿಭೂತಿ ಪೊಟ್ಟಣ ತಯಾರಿಸುವುದರಲ್ಲಿ ಅವಳು. ಸ್ವಾಮಿ ನಮ್ಮ ಜೀವನದಲ್ಲಿ ಪ್ರವೇಶ ಮಾಡಿದಾಗಿನಿಂದ, ನಮ್ಮ ಬದುಕೇ ಬಂಗಾರವಾಗಿದೆ. ಪೊಟ್ಟಣ ತಯಾರು ಮಾಡುವಾಗ, ಒಂದರಲ್ಲಿ ಯಾವುದೋ ಗಟ್ಟಿ ತುಂಡು ಪತ್ತೆ ಆಯಿತು. ಬಿಚ್ಚಿ ನೋಡಿದರೆ, ಸ್ವಾಮಿಯ ಸುಂದರ ಚಿತ್ರ ! ಡೋರಿಸ್ ಹಬ್ ಬರೆಯುತ್ತಾರೆ : "ನಮ್ಮ ಅಂತಃಕರಣವನ್ನು ಪರಿಶುದ್ಧವಾಗಿಸಿ, ನಮ್ಮ ಜೀವನಮಾರ್ಗವನ್ನು ಪವಿತ್ರ ಮಾಡುತ್ತಾರೆ ಸ್ವಾಮಿ. ಇದೇ ಅವರ ಅತ್ಯಾಶ್ಚರ್ಯಕರ ಪವಾಡ. ನಮ್ಮ ಸುಧಾರಣೆ ಸದ್ದಿಲ್ಲದೆ ನಿಧಾನವಾಗಿ ದಿನೇ ದಿನೇ ನಡೆಯುತ್ತದೆ. ದುಶ್ಚಟಗಳು ದೂರವಾಗುತ್ತವೆ ; ದುಸ್ಸಂಗದಿಂದ ತಪ್ಪಿಸಿಕೊಳ್ಳುತ್ತೇವೆ ; ದುರಾಭ್ಯಾಸಗಳು ಸಡಿಲವಾಗುತ್ತವೆ.

ಕಾರುಣ್ಯಾನಂದ ಸ್ವಾಮಿ, ೧೯೪೭ರಲ್ಲಿ ರಾಜಮಹೇಂದ್ರಿಯಲ್ಲಿ, ಗೋದಾವರಿ ನದಿಯ ದಡದಲ್ಲೇ ಜೀವ ಕಾರುಣ್ಯ ಸಂಘದ ಕೇಂದ್ರ ಸ್ಥಾಪಿಸಿದರು. ಮಹಾತ್ಮಾ ಗಾಂಧಿಯವರು ಋಷಿಕೇಶದಲ್ಲಿ ಸಂನ್ಯಾಸಿಗಳ ಮಹಾಸಭೆಯನ್ನುದ್ದೇಶಿಸಿ ಕೇಳಿದರಂತೆ :."ಜಪ ಧ್ಯಾನಗಳಿಂದ ನೀವು ಮೋಕ್ಷ ಪಡೆಯಲಾರಿರಿ ; ದೀನ ದಲಿತರ ಸೇವೆ ಮಾಡಿರಿ. ಯಾರು ನಿಮ್ಮಲ್ಲಿ ಈ

ಕರಗೆ ಓಗೊಡುತ್ತೀರಿ, ಕೈ ಎತ್ತಿ" - ಎಂದು. ಆಗ ಆ ಪೈಕಿ, ಅವರಿಗೆ ಕಾಣಿಸಿದ ಊರ್ಧ್ವಬಾಹು ಒಂದೇ ! ಕಾರುಣ್ಯಾನಂದರದು ! ಅನಂತರ, ಆ ಸಂನ್ಯಾಸಿ ಸಾಮಲ ಕೋಟೆ, ಕಾಕಿನಾಡಾ ನಗರಗಳಲ್ಲಿ ದುಡಿದು, ಗೋದಾವರೀ ತೀರದಲ್ಲಿ ನೆಲೆಸಿ, ಅನಾಥಾಲಯ, ಸ್ತ್ರೀ ಶರಣಾಲಯ, ಚಿಕಿತ್ಸಾಲಯ, ಕುಷ್ಠರೋಗ ಶುಶ್ರೂಷಾಲಯಗಳನ್ನು ಸ್ಥಾಪಿಸಿ, ಜನಪ್ರಿಯರೂ ದೇವಪ್ರಿಯರೂ ಆದರು.

ಒಂದು ಪ್ರಭಾತ ಸಮಯ, ಮುಂಬಾಗಿಲು ತೆರೆದು ಹೊಸಲು ದಾಟುವಾಗ, ಅಲ್ಲಿ ದುಃಖತಪ್ತಳಾದ ಒಬ್ಬಾಕೆ ಸಣ್ಣ ಹೆಣ್ಣುಮಗು ಕುಳಿತು ನರಳುತ್ತಿತ್ತು ! ಇಚ್ಛಾಪುರದ ಹತ್ತಿರ ಪಲಾಸಾ ಎಂಬ ಗ್ರಾಮದಿಂದ, ಯಾರೋ ಪುಣ್ಯಾತ್ಮ ರೈಲು ಚಾರ್ಜು ತಾನೇ ತೆತ್ತು, ಆಕೆಯನ್ನು ಅಲ್ಲಿಗೆ ತಂದು ಕೂರಿಸಿ ಹೋದರಂತೆ. ಗಂಡ ತೀರಿದ ಎರಡನೆಯ ವಾರದಲ್ಲೇ. ಅರಣ್ಯ ಇಲಾಖೆಯಲ್ಲಿ ಗಾರ್ಡ್ ಆಗಿದ್ದ ಆತ, ಕ್ಷಯರೋಗದಿಂದ ಬಹುದಿನ ಹಾಸಿಗೆ ಹಿಡಿದು, ಗಳಿಸಿದ್ದ ಪಗಾರ, ಮನೆಯಲ್ಲಿದ್ದ ಒಡವೆ ವಸ್ತ್ರ ಪಾತ್ರೆ ಪದಾರ್ಥ ಎಲ್ಲವನ್ನೂ ಖರ್ಚು ಮಾಡಿಯೂ ಉಳಿಯದೆ, ಬಸುರಿ ಹೆಂಡತಿಯನ್ನು, ಸಣ್ಣ ಕೂಸನ್ನು ಉಪವಾಸವಿರಿಸಿ, ದೇಹಪಂಜರದಿಂದ ಹಾರಿ ಹೋದನಂತೆ. ಮಗುವನ್ನು ಅನಾಥಾಲಯಕ್ಕೆ ಸೇರಿಸಿ ಕಾರುಣ್ಯಾನಂದ, ತಾಯಿಯನ್ನು ಆಸ್ಪತ್ರೆಗೆ ದಾಖಲು ಮಾಡಿದರು. ಅನೀಮಿಯಾದಿಂದ ಬಾಡಿಬೆಂಡಾಗಿದ್ದ ಆಕೆಯನ್ನು, ಪ್ರಸವ ಸಮಯಕ್ಕೆ ಮೊದಲೇ ಪುಷ್ಟಿವಂತಳಾಗಿ ಮಾಡಬೇಕಿತ್ತು. ಆಕೆ ಮಲಗಿದ್ದ ಕೋಣೆಯಲ್ಲಿ ಆ ಕೋಣೆ ಕಟ್ಟಿದ ಖರ್ಚು ದಾನ ಮಾಡಿದವರ "ಗುರು" (ಶ್ರೀ ಸತ್ಯಸಾಯಿಬಾಬಾ)ವಿನ ಭಾವಚಿತ್ರ ಗೋಡೆಯನ್ನಲಂಕರಿಸಿತ್ತು. ತೆಂಗಿನ ಸಸಿಯ ಪಕ್ಕದಲ್ಲಿ ನಿಂತು ಅದರ ಗರಿಯನ್ನು ಕೆಳಕ್ಕೆಳೆದು ಹಿಡಿದಿದ್ದ ಭಂಗಿ. ಭಕ್ತರು "ಸಾಧು" ಅಮ್ಮ, ಎಂದು ಆ ಚಿತ್ರದ ಪ್ರತಿಗಳನ್ನು ಆದರಿಸುತ್ತಿದ್ದರು. "ತಾಯಂ ಆನವರ್ (ಮಾತೃಭೂತೇಶ್ವರ) ಎಂದು ತಮಿಳರು ಆರಾಧಿಸುವ, ಶಕ್ತಿಸ್ವರೂಪದ ಶಿವನೇ ಎನಿಸುತ್ತಿತ್ತು ಆ ರೂಪ.

ಆ ಸಂಜೆ, ನವನವೀನ ಚಲನಚಿತ್ರವೊಂದರ ಪ್ರಾರಂಭೋತ್ಸವ. ಅದಕ್ಕಾಗಿ ವೈದ್ಯರೂ ಸೂಲಗಿತ್ತಿಯೂ, ಸಿಬ್ಬಂದಿಯೂ, ಸಿನಿಮ ಮನೆಗೆ ಹೊರಟರು. ರಾತ್ರಿ ಬಂದಾಗ, ಪಲಾಸಾ ಹೆಣ್ಣು ಮಗಳಿಗೆ ಹೆರಿಗೆ ಆಗಿದೆ ; ಕೂಸು ತೊಟ್ಟಿಲಲ್ಲಿದೆ ! ಯಾರು ನಿನ್ನ ಸಹಾಯಕ್ಕೆ ಬಂದಾಗ, ಆಕೆ ಹೇಳಿದಳು, "ಅಗೋ ! ಆ ಚಿತ್ರದಲ್ಲಿ ಕಾಣುವುದಿಲ್ಲವೆ ನರಸಮ್ಮ, ಅವರೇ ಇದ್ದರು. ನನ್ನ ಶುಶ್ರೂಷೆ, ಕೂಸಿನ ಶುಶ್ರೂಷೆ ಮಾಡಿ, ತೊಟ್ಟಿಲಲ್ಲಿರಿಸಿ, ಆಚೆ ರೂಂನಲ್ಲಿ ಇನ್ನೊಬ್ಬರಿದ್ದಾರೆ, ನೋಡಿ ಬರುತ್ತೇನೆ, ಅಂತ ಅತ್ತ ಹೊರಟರು. "ಅನಾಥ ರಕ್ಷಕ, ಆಪದ್ಬಾಂಧವ ಎಂದರೆ ನಮ್ಮ ಸ್ವಾಮಿ. ಈ ಸಂಭವದಿಂದ ಕಾರುಣ್ಯಾನಂದ ಸ್ವಾಮಿ, ಬಾಬಾ ಅವರ ಸಾನಿಧ್ಯವನ್ನೇ ಬಯಸುತ್ತ, ನಿಲಯಕ್ಕೆ ಓಡೋಡಿ ಬರುತ್ತಿದ್ದರು. ಗೋದಾವರಿ

ತೀರದ ಸಂಸ್ಥೆಗಳ ಬಂಧವನ್ನು ಸಡಿಲಿಸುತ್ತಿದ್ದಾರೆ. ದೀನದಲಿತರ ಸೇವೆಗಾಗಿ ತನುಮನಗಳನ್ನು ಸಮರ್ಪಿಸುವುದೇ ಸಾಯಿಯನ್ನು ಸೇರಲು ಏಕೈಕ ಮಾರ್ಗ ಎಂದು ಬೋಧಿಸುತ್ತಿದ್ದಾರೆ.

೧೯೬೮ ಫೆಬ್ರವರಿಯಲ್ಲಿ, ಆಸ್ಸಾಂ ರಾಜ್ಯದಾಚೆಗಿನ ಚೀನಾಗಡಿ ಸಮೀಪದಿಂದ, ಅರಣ್ಯವಾಸಿ ಜನಾಂಗಕ್ಕೆ ಸೇರಿದ ನಾಲ್ಕು ಪ್ರಮುಖರು, ಬೊಕೆನ್ ಎಟ್ಟೆ ಎಂಬ ನಾಯಕನೊಂದಿಗೂ, ಸರ್ಕಾರಿ ನೌಕರರಾದ ಶ್ರೀ ಪಾಟೀರ್ ಮತ್ತು ಒಬ್ಬರು ಶಿಲ್ಪಶಾಸ್ತ್ರ ಪ್ರವೀಣರೂ ಪ್ರಶಾಂತಿನಿಲಯಕ್ಕೆ ಬಂದರು. ಆ ಸಂಜೆ, ಸ್ವಾಮಿ ಅವರನ್ನು ಕರೆಸಿ, ಅವರೊಂದಿಗೆ ಎರಡು ಗಂಟೆಗಳ ಕಾಲ ಸಂಭಾಷಿಸಿದರು. ಸರ್ಕಾರಿ ಡೆಪ್ಯುಟಿ ಸೆಕ್ರೆಟರಿಯಾದ್ದ ಶ್ರೀ ಪಾಟೀರ್, ತಮ್ಮ ಮೇಲಧಿಕಾರಿಗೆ ಈ ಸಂದರ್ಶನದ ವಿವರಗಳನ್ನು ಈ ರೀತಿ ಬರೆದು ಕಳಿಸಿದರು :

"ನಾವೆಲ್ಲ ನೆಲದ ಮೇಲೆ ಕುಳಿತೆವು. ಬಾಬಾ ಅವರೂ ನಮ್ಮ ಎದುರು ನೆಲದಲ್ಲೇ ತೀರ ಸಮೀಪ ಕುಳಿತರು ; ಅಲ್ಲೇ ಇದ್ದ ಕುರ್ಚಿಯಲ್ಲಿ ಕೂಡಲಿಲ್ಲ. ವಿದ್ಯುಚ್ಛಕ್ತಿ ನಿಂತಿತ್ತು. ಆದ್ದರಿಂದ ಬೀಸಣಿಗೆ ತಿರುಗಲಿಲ್ಲ. ಶೆಖೆ ಜಾಸ್ತಿ ಇತ್ತು. ನಮ್ಮೊಂದಿಗೆ ಒಳಕ್ಕೆ ಕರೆದಿದ್ದವ ಪೈಕಿ ಕೆಲವರು ಗೋವಾದರವರೂ ಇದ್ದರು. ಅಲ್ಲಿಯ ಚೀಫ್ ಸೆಕ್ರೆಟರಿಯೂ ಇದ್ದರು ಅವರು ತಮ್ಮ ಕೈ ಬೀಸಣಿಗೆಯಿಂದ ಗಾಳಿ ಹಾಕುವುದಕ್ಕೆ ಪ್ರಯತ್ನಿಸಿದಾಗ, ಬಾಬಾ ಬೇಡವೆಂದರು. ಉಳಿದವರು ಬಾಧೆ ಪಡುತ್ತಿರುವಾಗ, ತಮಗೆ ಮಾತ್ರ ಈ ಉಪಚಾರ ಏಕೆ ಎಂದರು. ಆ ರೂಂನಲ್ಲಿ ನಾವು ೩೩ ಮಂದಿ ಇದ್ದೆವು. ನಮ್ಮನ್ನು ಇನ್ನೂ ಹತ್ತಿರಕ್ಕೆ ಸ್ವಾಮಿ ಬರಮಾಡಿಕೊಂಡರು. ಮನೆಯಲ್ಲೇ ಹಿರಿಯ ಬಂಧು ಒಬ್ಬರ ಸುತ್ತ ಕುಳಿತ ಹಾಗೆ ಭಾಸವಾಯಿತು ನಮಗೆ. ಅವರ ಪ್ರೇಮ ಹೃದಯದಿಂದ ಹರಿದು ಬಂದ ಉಪದೇಶಾಮೃತವನ್ನು ನಾವೆಲ್ಲ ಆನಂದದಿಂದ ಸವಿದೆವು. ಆ ಭಾಷೆ ಸರ್ವವಿದಿತವಾದದ್ದು. ಅವರಾಡಿದ ಆಧ್ಯಾತ್ಮಿಕ ತತ್ವಗಳು, ಅವರವರ ಚಿತ್ತ ಶುದ್ಧಿಯ ಬೆಳವಣಿಗೆಯನ್ನನುಸರಿಸಿ ಪ್ರತಿ ಒಬ್ಬರಿಗೂ ನೇರವಾಗಿ ಅರ್ಥವಾಯಿತು. ಆಂಗ್ಲ ಮಹಿಳೆಯೊಬ್ಬಳು ತನಗೆ ಧ್ಯಾನದಲ್ಲಿ ಏಕಾಗ್ರತೆ ಸಾಧ್ಯವಾಗುತ್ತಿಲ್ಲ ಎಂದು ಹೇಳಿದಾಗ, ಹೃದಯಾಕಾರದ ಒಂದು ವಸ್ತುವನ್ನು ಹಸ್ತಚಲನದಿಂದ ಸೃಜಿಸಿ, "ಇದನ್ನು ಧರಿಸು ; ಧ್ಯಾನದಲ್ಲಿ ಜಯಗಳಿಸು" - ಎಂದು ಹೇಳುತ್ತ ಅವಳಿಗೆ ಕೊಟ್ಟರು. ಗೋವಾ ಚೀಫ್ ಸೆಕ್ರೆಟರಿ ಅವರ ಪತ್ನಿಗೆ ವಜ್ರದುಂಗುರವನ್ನು ಸೃಷ್ಟಿಸಿ ಕೊಟ್ಟರು. "ಈ ವಜ್ರದಲ್ಲಿ ಆಕೆ ಕಣ್ಣಿಗೆ ನನ್ನ ರೂಪ ಕಾಣಿಸುತ್ತದೆ. ಇದು ಡೈಮೆಂಡ್ ಹೌದು, ಆದರೆ, ನಿಮಗೆ ಮಾತ್ರ ಡೈಮೈಂಡ್ (ಮನೋನಾಶನ) ಸಾಧನೆಗೆ ಉಪಕರಣ ಎಂದರು. "ಭಗವಂತನನ್ನು ಧ್ಯಾನ ಮಾಡುತ್ತ ಮಾಡುತ್ತ, ಆಸೆಗಳೇ ಹಾಸುಹೊಕ್ಕಾಗಿ ತಯಾರಾಗಿರುವ ಮನಸ್ಸು ಎಂಬ ವಸ್ತ್ರ ಅಂತ್ಯಗೊಳ್ಳುತ್ತದೆ. ಆಸೆ ಅಳಿದರೆ ಮನಸ್ಸೂ

ಅಳಿಯುತ್ತದೆ" - ಎಂದರು. ಅವರಿತ್ತ ವಜ್ರವೇ ಆ ಉಪದೇಶದ ಗುರುತು ! ಗೋವಾದಿಂದ ಬಂದಿದ್ದ ಮತ್ತೊಬ್ಬ ಮಹಿಳೆಗೆ ಒಂದು ತಾಯಿತ ನಿರ್ಮಿಸಿ, ಕೊಟ್ಟರು, ಕೈ ಆಡಿಸಿ, "ಅವರಿಗೆಲ್ಲ ಆಯಿತು ! ನಿಮಗೆಲ್ಲಾ ?" ಎನ್ನುತ್ತ, ಎಂಥದ್ದೋ ಸುವಾಸನೆಯ ಸಿಹಿ ತಿಂಡಿಯನ್ನು ತುಂಬಾ ಸೃಷ್ಟಿಸಿ, ತಾವೇ ಹಂಚಿದರು. ನಮ್ಮ ಪೈಕಿ ಒಬ್ಬರನ್ನು ಅಂಗೈ ತೋರಿಸಲು ಹೇಳಿ, ಅದರ ತುಂಬ ದಿವ್ಯ ವಿಭೂತಿ ಸುರಿದರು. ಎಲ್ಲರಿಗೂ ಕೊಡು, ಎಂದು ಹೇಳಿದರು. ಮತ್ತೆ ಕೈ ಬೀಸಿದರು. ನಾವು ಆ ಜನರಿಗೆ ಅವರ ಕೈಗೆ ಬಂದ ಅವರ ಎಂಟು ಭಾವ ಚಿತ್ರಗಳನ್ನು, ಒಬ್ಬೊಬ್ಬರನ್ನಾಗಿ ಕರೆದು ನೀಡಿದರು.

ಆ ಮೇಲೆ ನಮ್ಮನ್ನು ಏಕಾಂತ ಸಂಭಾಷಣೆಗಾಗಿ, ಪಕ್ಕದ ಕೋಣೆಯೊಳಕ್ಕೆ ಒಬ್ಬೊಬ್ಬರಾಗಿ ಕರೆದರು. ನಮ್ಮ ಭಾಷೆಯಲ್ಲೇ ಮಾತನಾಡಿ ! ನಮ್ಮ ಸಮಸ್ಯೆಗಳನ್ನೆಲ್ಲ ಬಿಂಗಡಿಸಿ ವಿವರಿಸಿ, ಪರಿಹಾರ ಹೇಳಿದರು. ಬೊಕಿ ನೆಟ್ಟೆ ಅವರು, ಆಲಾಂಗ್ ಪ್ರಾಂತದ ಜನರ ಅಭಿಲಾಷೆಯಂತೆ, ಅಲ್ಲಿ ಒಂದು "ದೋನಿ-ಪೋಳೋ" ಗುಡಿ (ಸೂರ್ಯ-ಚಂದ್ರ)ಕಟ್ಟಬೇಕೆಂಬುದನ್ನು ಬಾಬಾರವರೇ ಹೇಳಬೇಕೆಂದೂ ನಿವೇದಿಸಿದರು. ಗುಡಿಯಲ್ಲಿ ಪ್ರತಿಷ್ಠೆ ಮಾಡುವುದಕ್ಕೆ ಅವರೇ ಒಂದು ಪ್ರತಿಮೆಯನ್ನು ಸೃಷ್ಟಿಸಿ ಅನುಗ್ರಹಿಸಬೇಕೆಂದೂ ಬೇಡಿಕೊಂಡರು. ಆಗ ಇನ್ನೂ ಬಾಬಾ ಅವರು ಎಲ್ಲರ ನಡುವೆ ದೊಡ್ಡ ರೂಂನಲ್ಲಿದ್ದರು.

ನಾವು ನಿಂತಿರುವಾಗಲೇ, ಎರಡೂ ಕೈಗಳನ್ನೂ ಒಟ್ಟಾಗಿ ಬೀಸಿದರು. ಆಗ ಉತ್ಪತ್ತಿಯಾದ ಒಂದು ದೊಡ್ಡ ಪಂಚಲೋಹದ ತಗಡನ್ನು ತೋರಿಸುತ್ತ "ಇಗೊ! ಈ ಕಡೆ ಸೂರ್ಯ, ಆ ಕಡೆ ಚಂದ್ರ"; ಇದನ್ನೇ ಪ್ರತಿಷ್ಠೆ ಮಾಡಿ ಎಂದರು. "ಕೇಳಿ! ಇದನ್ನು ಗುಡಿಯೊಳಗಿರಿಸಿ, ಪ್ರತೀ ಆದಿತ್ಯವಾರ, ಪ್ರತೀ ಹುಣ್ಣಿಮೆ ದಿನ ಆರಾಧನೆ ನಿಲ್ಲಿಸಬೇಕು, ತಪ್ಪದೆ, ನಂದಾದೀಪ ಮಾತ್ರ ಯಾವಗಲೂ ಬೆಳಗುತ್ತಿರಲಿ"- ಎಂದರು. "ನೀವು ಈಗ ಪ್ರಾಣಿಗಳನ್ನು ದೋನಿ ಪೋಳೋಗೆ ಬಲಿ ಕೊಡುತ್ತಿದ್ದೀರಿ. ಪಶುಗಳನ್ನಲ್ಲ ಬಲಿ ಕೊಡಬೇಕಾದದ್ದು, ದೇವರ ಮಕ್ಕಳನ್ನು ಕೊಂದರೆ, ದೇವರಿಗೆ ಸಂತೃಪ್ತಿ ಆಗುವುದಿಲ್ಲ. ನಿಮ್ಮ ಪಶುಗುಣವನ್ನು, ಮೃಗಸ್ವಭಾವವನ್ನು ಸಾಯಿಸಿದರೆ, ದೇವರಿಗೆ ಸಂತೋಷ. ಈಗಲೇ ಅದನ್ನು ನಿಮ್ಮಿಂದ ನಿಲ್ಲಿಸಲಾಗದೆ ಹೋದರೆ, ಗುಡಿಯಿಂದ ದೂರವಾಗಿ ಎಲ್ಲಾದರೂ ಮಾಡಿ. ನಾನು ನಿಮ್ಮೂರಿಗೆ ಬಂದಾಗ ಮಾತ್ರ, ಆ ಪ್ರದೇಶದಲ್ಲೇ ಮಾಡಬಾರದು"- ಎಂದರು. ಗುಡಿಯ ಪ್ಲಾನನ್ನು, ಅಲ್ಲೇ ಬಿದ್ದಿದ್ದ ಲಕೋಟೆಯ ಖಾಲಿ ಜಾಗದಲ್ಲಿ ಬರೆದುಕೊಟ್ಟರು. ಚಚ್ಚೌಕ ಗರ್ಭಗೃಹ. ಅದರ ಮುಂದೆ ಚಕ್ರಾಕಾರವಾದ ಗೆರೆ ಎಳೆದರು. "ಇದೇಕೆ ಸ್ವಾಮಿ?"- ಎಂದು ಶಿಲ್ಪಶಾಸ್ತ್ರ ಪ್ರವೀಣರು ಪ್ರಶ್ನಿಸಿದರು. "ಈ ಜನಾಂಗ ದೇವಾರಾಧನೆ ರೂಪವಾದ ನೃತ್ಯ ಮಾಡುತ್ತಾರಲ್ಲವೇ"- ಎಂದು ಉತ್ತರಿಸಿದರು. ಅವರಿಗೆ ಆಶ್ಚರ್ಯವಾಯಿತು; ತಮಗೆ ಗೊತ್ತಿರಲಿಲ್ಲ ಆ ವಿಷಯ.

ಅನಂತರ ಇದ್ದಕ್ಕಿದ್ದಂತೆ ಸ್ವಾಮಿ, ಬೋಕೆನ್ ಎಟ್ಟೆಯ ಚರಿತ್ರೆಯನ್ನು ಎಲ್ಲರೆದುರಿಗೂ ಹಾಳೆ ಹಾಳೆ ತಿರುವಿ ಬಯಲು ಮಾಡಿದರು! ಅಂದರೆ ಅವರ ಉದರ ರೋಗದ ದಾರುಣ ಕಥೆ! ದಿಬ್ರುಗಡ, ಗೌಹತಿ, ಷಿಲ್ಲಾಂಗ್ ವೈದ್ಯರುಗಳಿಗೆ ಅದನ್ನು ನಿವಾರಿಸಲಾಗಲಿಲ್ಲ. ಕಲ್ಕತ್ತಾಗೆ ಬಂದ ಕೂಡಲೇ ನೀವು, "ಇಲ್ಲಿ ಭಾರೀ ಡಾಕ್ಟರುಗಳಿದ್ದಾರೆ, ಅವರನ್ನು ಕೇಳೋಣ"- ಎಂದು ಬೇಡಿಕೊಂಡಿರಿ. ಮದ್ರಾಸ್‌ನಲ್ಲೂ ಅಷ್ಟೆ. ಆದರೆ ಪುಟ್ಟಪರ್ತಿಯಲ್ಲಿ ಬಾಬಾ ಇದ್ದಾರೆ; ಅಲ್ಲಿಗೇ ಹೋಗೋಣ ಎಂದು ಸಾಹೇಬರು ಸಮಾಧಾನ ಹೇಳಿದರು. ತಕೊ! ಈ ವಿಭೂತಿ, ತಿನ್ನು"- ಎಂದು ಹೇಳುತ್ತ, ಒಂದು ಹಿಡಿ ತುಂಬ ಸೃಷ್ಟಿಸಿಕೊಟ್ಟರು. ಅಂದೇ ಆಗಲೇ ನೋವು ಮಾಯವಾಯಿತು. ಕ್ಯಾನ್‌ಟೀನಲ್ಲಿ ಚೆನ್ನಾಗಿ ಚಪಾತಿ ಪಲ್ಯ ತಿಂದರು. ಅನಂತರ ದಿನವೊಂದಕ್ಕೆ, ಅವರ ಊಟಕ್ಕೇನೇ ಮೂವತ್ತು ರೂಪಾಯಿ ಖರ್ಚು ಬೀಳುತ್ತಿತ್ತು. "ಬೋಕೆನ್ ಎಟ್ಟೆಯ ಉದರ ರೋಗ ಸಂಹಾರದ ವಿಷಯ ಆಲಾಂಗ್ ಪ್ರಾಂತದಲ್ಲಿ ಪ್ರಸಾರವಾಯಿತು. ವರ್ಷೇ ವರ್ಷೇ ಆ ಕಡೆಯಿಂದ ನೂರಾರು ಜನ ಸ್ವಾಮಿ ದರ್ಶನಕ್ಕೆ ಬರತೊಡಗಿದರು.

ಇಂತಹ ದಿವ್ಯ ಪ್ರೇಮ ಹರಿದಾಗ, ಮರುಭೂಮಿಯ ಹಾಗೆ ಕಾದು ಕಂಗೆಟ್ಟ ಹೃದಯ ಸೀಮೆ, ಶ್ರದ್ಧಾ ಭಕ್ತಿ, ದಯಾ ಧರ್ಮಗಳು ಬೆಳೆಯುವ ಹಚ್ಚ ಹಸುರು ಹೊಲವಾಗುತ್ತದೆ. ಪುಟ್ಟಪರ್ತಿ ಸತ್ಯಸಾಯಿ ಆಸ್ಪತ್ರೆಯಲ್ಲಿ ಸೇವೆ ಮಾಡುತ್ತಿದ್ದ ಡಾ| ಜಾನಕಿ ರಾಮರಾವ್, ಬರೆದ ಒಂದು ಪತ್ರದಲ್ಲಿ, ಭಗವತ್ ಪ್ರೇಮದ ಉತ್ತಮ ಉದಾಹರಣೆ ಕಾಣಬಹುದು. "ರೋಗಿಯ ಪಲ್ಸ್ ಗುರುತಿಗೆ ಸಿಗಲಿಲ್ಲ; ರಕ್ತದೊತ್ತಡವೇ ಕಾಣಿಸಲಿಲ್ಲ. ಅಸುನೀಗುತ್ತಿದ್ದಾನೆ, ಆಯಿತಿನ್ನೇನು ಎಂದು ನಾನೂ ಡಾ| ಭಾಸ್ಕರ ರಾಯರೂ ನಿರ್ಧರಿಸಿದೆವು. ಪಕ್ಕದ ಚಿಕ್ಕ ಕೋಣೆಗೆ ಅವನನ್ನು ಸಾಗಿಸಿ ಮಲಗಿಸಿದೆವು. ಕೊರಮಿನ್ ಚುಚ್ಚು, ಸ್ವಾಮಿ ಕೊಟ್ಟಿದ್ದ ಪೊಟ್ಟಣ ಬಿಚ್ಚಿ, ಬಾಯಿಗೆ ಕೊಂಚ ವಿಭೂತಿ ಹಾಕಿದೆವು. ಬೆಳಿಗ್ಗೆ ಆ ಗಂಟೆಗೆ ರೋಗಿಗೆ ಖಾಯಿಲೆಯ ಲಕ್ಷಣಗಳೊಂದೂ ಇಲ್ಲ. ರಾತ್ರಿ ಯಾರೋ ನನ್ನನ್ನೆಬ್ಬಿಸಿ ಭುಜ ಹಿಡಿದು ನಡೆಯಿಸಿ, ಮಲಮೂತ್ರ ವಿಸರ್ಜನೆ ಮಾಡಿಸಿ, ಮತ್ತೆ ತಂದು ಮಲಗಿಸಿದರು ಅಂತಾನೆ ಮಹಾರಾಯ! ಆಸ್ಪತ್ರೆ ನರ್ಸಿಗೂ ಆಳಿಗೂ ಆ ವಿಷಯವೇ ತಿಳಿಯದು. ಆತ ಹೇಳಿದ್ದೇನೋ ನಿಜಕ್ಕೂ ನಿಜ!"

ಶಿವರಾತ್ರಿಗಾಗಿ ಮದ್ರಾಸಿಂದ ಬರುತ್ತಿದ್ದ ಡಾ | ರಂಗರಾಯರ ಕಾರಿಗೆ ಬೆಂಕಿ ತಗುಲಿ ಉರಿದಾಗ, ಮರಳೆರಚಿ ಅದನ್ನು ಆರಿಸಿ, ಪೆಟ್ರೋಲುರಿಯದೆ ಉಳಿದು ಪ್ರಯಾಣ ಮುಂದುವರಿಸಿ, ಸನ್ನಿಧಿ ಸೇರಿದ್ದು ಸ್ವಾಮಿ ಕರುಣೆ. ಕರ್ನಲ್ ಎ.ಕೆ. ರಾವ್, ಅರುಣಾಚಲ ಪ್ರದೇಶದ ರಾಜ್ಯಪಾಲ. ಅವರ ರಾಜಭವನದ ಆವರಣದಲ್ಲಿ ಬಿದಿರು ಮೆಳೆ ಉರಿದು

ಹಚ್ಚಿದ್ದಾಗ, 'ಸಾಯಿಬಾಬಾ' - ಎಂಬ ಕೂಗು. ರಾಜಾ ಅವರು ಹೇಳಿದಂತೆ, "ಹನ್ನೆರಡು ಅಗ್ನಿಶಾಮಕ ಯಂತ್ರಗಳು ಶ್ರಮಿಸಿದ್ದರೂ ಆರಿಸಲಾಗದಷ್ಟು ವೇಗದಲ್ಲಿ" ಆ ಭಯಂಕರ ಬೆಂಕಿಯನ್ನು ತಣ್ಣಗೆ ಮಾಡಿತು. ಆ ಮೆಳೆಯ ಸುತ್ತ ಇದ್ದ ಗೂರ್ಖಾ ಜನರ ಗುಡಿಸಲುಗಳನ್ನು ಸಂರಕ್ಷಿಸಲು ಸ್ವಾಮಿ ಮಾಡಿದ ಪ್ರೇಮ ಸಂಕಲ್ಪ.

"ನನ್ನ ಅಣ್ಣನವರ ತೊಡೆ ಎಲುಬು ಅಪಘಾತಕ್ಕೆ ಸಿಕ್ಕಿ ಮುರಿದು ಆರು ತಿಂಗಳಾಗಿತ್ತು. ಸ್ವಾಮಿ ನನ್ನ ತಿರುಚಿನಾಪಳ್ಳಿ ಮನೆಗೆ ದಯಮಾಡಿಸಿದಾಗ, ಅವರನ್ನು ಹಿಂದಿನ ಕೋಣೆಯ ಕುರ್ಚಿಯಲ್ಲಿ ಕೂರಿಸಿದ್ದೆ. ಮುಂದಿನ ಹಾಲ್‌ನಲ್ಲಿ ಭಜನೆ ನಡೆಯುತ್ತಿತ್ತು. ಅದರ ಮಧ್ಯದಲ್ಲೇ ಸ್ವಾಮಿ ಎದ್ದು ಅವರ ಹತ್ತಿರಕ್ಕೆ ಹೋದರು. ವಿಭೂತಿ ಸೃಷ್ಟಿಸಿ ಅವರ ಬಾಯಿಗೆ ಹಾಕಿ ತಿನ್ನಿಸಿದರು. ಮತ್ತೆ ಭಜನೆ ನಡೆಯುವಲ್ಲಿ ಬಂದು ಕುಳಿತು, ನನ್ನ ಕಿವಿಯಲ್ಲಿ "ನಿನ್ನ ಅಣ್ಣನ ಕಾಲು ಸರಿಯಾಯಿತು" - ಎಂದರು. ೩ ದಿನಗಳಲ್ಲಿ ಮನೆಯೊಳಗೆ ನಡೆದ ; ವಾರದಲ್ಲಿ ಹೊರಗಿಳಿದು ತೋಟವನ್ನು ಪರಾಂಬರಿಸಿದ. ತಿಂಗಳಾಗುವುದರೊಳಗೆ ಬೆಳಗಿನ ಬಿರುಸು ನಡಿಗೆ ಮತ್ತೆ ಮೊದಲು ಮಾಡಿದ." ಹೀಗೆಂದು ಪಾಂಡ್ಯನ್ ಬ್ಯಾಂಕ್ ಸ್ಥಾಪಕ ಸುಂದರಂ ನನಗೆ ಪತ್ರ ಬರೆದರು.

ವಿಶಾಖಪಟ್ಟಣದ ಪ್ರಸಿದ್ಧ ನೇತ್ರ ವೈದ್ಯ, ಡಾ | ಎಂ. ಎಸ್. ರಾಮಕೃಷ್ಣರಾವ್ ಇವರ ಅನುಭವ ಕೇಳಿ : "ಕಂಜಕ್ಟಿವೈಟಿಸ್ ಎಂಬ ರೋಗದಿಂದ ನರಳುತ್ತಿದ್ದ ಒಬ್ಬರಿಗೆ, ಮಾಮೂಲು ಮದ್ದುಗಳನ್ನೇ ಉಪಯೋಗಿಸಿ ಶುಶ್ರೂಷೆ ಮಾಡುತ್ತಿದ್ದೆ. ಆದರೆ ಬಲಗಣ್ಣಿಗೆ ಡೆನ್‌ಡ್ರಿಟಿಕ್ ಹುಣ್ಣು ಎಂಬ ಅಪಾಯ ತಗಲಿರುವುದು ಪತ್ತೆಯಾದಾಗ, ಆ ವೈರಸ್ ವಿಷ ಜೀವಾಣುವನ್ನು ಹೇಗೆ ತಡೆಯುವುದು ಎಂಬ ಭಯದಿಂದ ಕಂಗೆಟ್ಟೆ. ಅಮೆರಿಕಾದಲ್ಲಿ ಮಾತ್ರ ತಯಾರಾಗುತ್ತಿದ್ದು ಮಾರಾಟವಾಗುತ್ತಿದ್ದ ಐಡಿಯು ಎಂಬ ಔಷಧಿಯಿಂದಲೇ ಆ ಕಣ್ಣನ್ನುಳಿಸಲು ಸಾಧ್ಯ ಎಂದು ನನಗೆ ತಿಳಿದಿತ್ತು. ಆದರೆ ಅದನ್ನು ಪಡೆಯುವುದು ಹೇಗೆ ? ಒಂದೆರಡು ದಿನಗಳಲ್ಲಿ ಪಾಪ, ಆತನ ಎಡಗಣ್ಣಿಗೂ ಹರಡಿತು ಆ ಭಯಂಕರ ಹುಣ್ಣು ! ನನ್ನ ಗುರುಗಳಾದ ಪ್ರೊ | ಸೂರ್ಯಪ್ರಸಾದರಾವ್ ಅವರನ್ನು ಅಂಗಲಾಚಿದೆ ; ಹೇಗಾದರೂ ಐಡಿಯು ತರಿಸಿಕೊಡಿ ಎಂದೆ. ಅಷ್ಟರೊಳಗೆ ಏನಾದರೂ ಒಂದು ಚಿಕಿತ್ಸಾ ಕ್ರಮವನ್ನನುಸರಿಸಬೇಕಲ್ಲವೆ ಎನ್ನುತ್ತ, ಸ್ವಾಮಿ ಕೊಟ್ಟಿದ್ದ ವಿಭೂತಿಯನ್ನೇ ರೆಪ್ಪೆಗಳ ಮೇಲೆ ತುಂಬಿ, ಹತ್ತಿಯಿಂದ ಮುಚ್ಚಿ ಕಟ್ಟು ಹಾಕಿ, ಅವರನ್ನು ಸಮಾಧಾನಪಡಿಸಿದೆ. ಆ ರಾತ್ರಿ ಐಡಿಯು ಸಿಕ್ಕಿತು ಎಂಬ ಸುದ್ದಿ ಬಂತು. ನನ್ನ ಪ್ರಾರ್ಥನೆಗೆ ಸ್ವಾಮಿ ಕನಿಕರಿಸಿದರಲ್ಲಾ ಎಂದು ಹಿಗ್ಗಿದೆ. ಬೆಳಗ್ಗೆ ಆತನ ಎರಡು ಕಣ್ಣುಗಳಿಗೂ ಔಷಧಿ ಹಚ್ಚುವುದಕ್ಕಾಗಿ,

ಹಿಂದಿನ ದಿನ ತುಂಬಿದ್ದ ವಿಭೂತಿಯನ್ನು ಒರಸಿ ತೆಗೆದೆ. ಕಣ್ಣಲ್ಲಿ ಹುಣ್ಣೆ ಇಲ್ಲ; ಕಾರ್ನಿಯಲ್ ಮೈಕ್ರೊಸ್ಕೋಪ್‌ನಿಂದ ಪರೀಕ್ಷಿಸಿದೆ. ಅದರ ಗುರುತು ಕೂಡ ಇಲ್ಲ."

ಡಾ | ಹಿಸ್ಲಪ್ ಎಂಬುವರು ಅಮೆರಿಕಾದಲ್ಲಿ ಹಲವಾರು ವರ್ಷಗಳು ಕಾಲೇಜು ಪ್ರಾಧ್ಯಾಪಕರಾಗಿದ್ದು, ಈತ ತಮ್ಮ ಸ್ವಂತ ಪಾರಿಶ್ರಾಮಿಕ ಸಂಸ್ಥೆಯೊಂದನ್ನು ನಡೆಸುತ್ತಿದ್ದಾರೆ. ಮಹೇಶ್ ಯೋಗಿಯ ಆಪ್ತ ಶಿಷ್ಯನಾಗಿದ್ದರು. ಬೌದ್ಧ ವಿಹಾರಗಳಲ್ಲಿದ್ದುಕೊಂಡು ಧ್ಯಾನಾಭ್ಯಾಸ ಮಾಡಿದವರು. ಅವರು ಹೇಳುತ್ತಾರೆ, "ಸತ್ಯಸಾಯಿ ಅವತಾರ ಪುರುಷನ ಸನ್ನಿಧಿಯಲ್ಲಿ ನಾನೊಬ್ಬ ಮಗು. ಅವರು ನನಗೆ ಪ್ರೀತಿಯ ತಾಯಿ, ಕಲಿಸುವ ತಂದೆ. ಅವರಲ್ಲಿ ನನಗೆ ನಿಶ್ಚಲವಾದ ವಿಶ್ವಾಸ" - ಎಂದು. ಈ ಮಾತನ್ನು ಡಾ | ರಾಮಕೃಷ್ಣ ರಾವ್ ನಿಜವೆಂದು ಸಮರ್ಥಿಸುತ್ತಾರೆ.

ತಾಮಸ ತುಂಬಿದ ಮಂಕುತನದಿಂದ ನಮ್ಮನ್ನೆಚ್ಚರಗೊಳಿಸಲು, ಸ್ವಾಮಿ ಅನಿರೀಕ್ಷಿತ ಆಶ್ಚರ್ಯಗಳನ್ನು ನಮ್ಮೆದುರು ಪ್ರಕಟಿಸುತ್ತಾರೆ. ಉನಾಯಿ ಎಂಬ ಉತ್ತರ ಪ್ರದೇಶ ಗ್ರಾಮದಿಂದ ಭಗವಾನ್‌ದಾಸರು ಬರೆಯುತ್ತಾರೆ : "ನನ್ನ ನೆರೆಮನೆ ಪೂಜಾಗೃಹದಲ್ಲಿರುವ ಸತ್ಯಸಾಯಿ ಚಿತ್ರದಿಂದ, ಪರಿಮಳ ಬೀರುವ ಭಸ್ಮ ಎಡೆ ಬಿಡದೆ ಉದುರುತ್ತಿವೆ. ಅವರ ಜೊತೆ ನಾನೂ ಅಲ್ಲಿಗೆ ಬಂದು, ಸ್ವಾಮಿಯ ದರ್ಶನ ಪಡೆದು ಪುನೀತರಾಗೋಣವೆಂದಿದ್ದೇನೆ." ಅವತಾರ ಬಂದಿದೆ, ದರ್ಶನದಿಂದ ಬದುಕನ್ನು ಸಾರ್ಥಕಪಡಿಸಿಕೊಳ್ಳಿ ಎಂಬ ಆಹ್ವಾನ, ಈ ಪವಾಡ-ವಿಭೂತಿಯ ಅಂತರಾರ್ಥ ತಿಳಿಯದೆ, ಅದಕ್ಕೆ ಅಪಾರ್ಥವನ್ನಂಟಿಸಿ ಹೆದರುವ ಜನತೆಯೂ ಇದೆ, ಭಾರತದಲ್ಲಿ. ಅಂಥವರ ಮನೆಗಳಲ್ಲಿ ಅರಿಶಿನ, ಕುಂಕುಮ, ಅಮೃತಧಾರೆ - ಇತ್ಯಾದಿ ಚಿಹ್ನೆಗಳನ್ನು ಸ್ವಾಮಿ ವರ್ಷಿಸುತ್ತಿದ್ದಾರೆ. ಬೆಣ್ಣೆ ಅಕ್ಷತೆ, ಮಣಿಗಳು, ನಾಣ್ಯಗಳು, ತಮ್ಮ ಫೋಟೋಗಳು, ಇತ್ಯಾದಿಯನ್ನು ಅನುಗ್ರಹಿಸುತ್ತಿದ್ದಾರೆ. ಅವರ ವಿಷಯವನ್ನುದುವರೆಗೂ ಕೇಳದ, ಕೊಂಡಾಡದ ಜನರನ್ನೂ, ಇಂಥ ಪವಾಡಗಳ ಮೂಲಕ ತಮ್ಮ ಕಡೆಗೆ ಆಕರ್ಷಿಸಿ ಅನುಗ್ರಹಿಸುತ್ತಾರೆ.

ಷಿಲ್ಲಾಂಗ್‌ನಿಂದ ಗೊಗೋಯಿ ಎಂಬವರು, "ಬಾಬಾ ಚಿತ್ರಪಟಕ್ಕೆ ಪುಷ್ಪಗಳನ್ನರ್ಪಿಸುವಾಗ, ಅಮೃತಬಿಂದುಗಳು ಉಕ್ಕಿಬರುತ್ತವೆ" - ಎಂದು ಬರೆದರು. ಕಲ್ಕತ್ತಾದಿಂದ ಷೆರಿಂಗ್ ಎಂಬವರು, "ಬಾಬಾ ಚಿತ್ರಪಟಗಳನ್ನೆಲ್ಲ ಕೆಳಗಿರಿಸಿ ಶುಭ್ರ ಮಾಡಿದಳು, ನನ್ನ ಪತ್ನಿ. ಮತ್ತೆ ಅವನ್ನು ಸ್ವಸ್ಥಾನದಲ್ಲಿರಿಸಿದಾಗ, ದೇಹ ಭಾಗದಿಂದ ಪೂರಾ ಅಮೃತವರ್ಷ !" ಎನ್ನುತ್ತಾರೆ. ಭುವನೇಶ್ವರದ ಶಿವಪ್ರಸಾದ್ ಅವರು, "ಕೆಲವು ದಿವಸಗಳಿಂದ ಬಾಬಾ ಅವರ ದಿವ್ಯ ಚಿತ್ರಪಟದಿಂದ ತೀರ್ಥ ಬೀಳುತ್ತಿದೆ. ಗಾಬರಿಯಿಂದ

ನಾನು ಅದನ್ನೊರೆಸಿದೆ. ಆದರೆ ಮತ್ತೆ ಎರಡು ಮೊಣಕಾಲಿಂದಲೂ ಬೀಳುತ್ತಲೇ ಇದೆ" - ಎಂದು ಪತ್ರ ಬರೆದಿದ್ದಾರೆ. ಬರ್ಹಾನ್‌ಪುರದಿಂದ ಡಾ | ವಿಘ್ನೇಶಂ ಅವರು ಕೇಳುತ್ತಾರೆ, "ನನ್ನ ಮನೆಯಲ್ಲಿ ತಮ್ಮ ಪಟದಿಂದ ಸ್ವಾಮಿ ವಿಭೂತಿ ಸುರಿಸುತ್ತಿದ್ದಾರೆ. ಆದ್ದರಿಂದ ನಾನು ಯಾವ ವಿಶೇಷ ಪೂಜೆ ಮಾಡಬೇಕು ? ಆಹಾರ ಪಾನೀಯಗಳಲ್ಲಿ ಎಂಥ ಇತಿಮಿತಿಗಳನ್ನು ಪಾಲಿಸಬೇಕಾಗಿದೆ ?"

ಡಿಲ್ಲಿಯಿಂದ ಒಂದು ತಂತಿ ಬಂತು. ಪಾದ ಪಂಕಜಗಳಿಂದ ಜೇನು ಸುರಿಯುತ್ತಿದೆ. ನಿಲ್ಲಿಸಬಾರದು ಎಂಬ ಪ್ರಾರ್ಥನೆಯನ್ನು ಸ್ವಾಮಿಗೆ ತಿಳಿಸಿ, ಹೆಚ್. ಪಿ. ಮಿಶ್ರ "ಸೋನಾಪುರದಲ್ಲೊಂದು ಟೀ ತೋಟ. ಅಲ್ಲಿಯ ಶ್ರಮಜೀವಿಗಳು ಓಂಕಾರ ಸುಪ್ರಭಾತ ಮುಗಿಸಿ, ನಗರ ಸಂಕೀರ್ತನೆ ಮುಗಿಸಿ ಹಿಂತಿರುಗಿ, ಪಟದ ಮುಂದೆ ನಿಂತು "ಜೈ ಜಗದೀಶ ಹರೇ" ಎಂದು ಹಾಡಿದಾಗ, ಅಮೃತಬಿಂದುಗಳು ನೂರಾರು, ಪಟದಿಂದ ಹೊರಬಂದವು. ಇದನ್ನು ಕುರಿತು ಡಾ | ಬರುವಾ, "ಸ್ವಾಮಿ, ನಮ್ಮೆದುರು ಪ್ರತ್ಯಕ್ಷವಾಗಿದ್ದರೆಂಬುದು ನಮಗೆ ಧೃಢವಾಯಿತು" - ಎಂದು ತಿಳಿಸಿದರು. ನಾಗಾಲ್ಯಾಂಡಿನ ಕೊಹಿಮಾ ನಗರದಿಂದ, ರೇಡಿಯೋ ಸ್ಟೇಷನ್ ಸಂಚಾಲಕರು ಮುರಳೀಧರ ಎಂಬವರು ಹೀಗೆ ಬರೆದಿದ್ದಾರೆ : "ನನ್ನ ಮನೆಗೆ ತಿರುಪತಿ ವೆಂಕಟೇಶ್ವರನ ಭಕ್ತರಿಬ್ಬರು ಬಂದರು ; ಭಜನೆಯಲ್ಲಿ ಕುಳಿತರು. ಆರತಿ ಸಮಯದಲ್ಲಿ ಅವರು ಅಡ್ಡಬಿದ್ದರು. ಆಗ ಬಾಬಾ ಚಿತ್ರಪಟದಿಂದ ಯಾವುದೋ ಬಿತ್ತು. ತೆಗೆದುನೋಡಿದಾಗ, ವೆಂಕಟೇಶ್ವರ ದೇವಸ್ಥಾನದಲ್ಲಿ ನಮಗೆ ಸಿಗುವ ಶ್ರೀಪಾದ ರೇಣು."

ಸ್ವಾಮಿಯ ಕೃಪಾದೃಷ್ಟಿ, ದೀನದಲಿತರ ಮೇಲೂ ದುರ್ಬಲರ ದುಷ್ಟರ ಮೇಲೂ ಪ್ರಸಾರವಾಗುತ್ತಲೇ ಇದೆ. ಸ್ವಾಮಿ ಭಕ್ತಳಾದ ನ್ಯೂಯಾರ್ಕ್‌ನ ಹಿಲ್ಡಾಚಾರ್ಲ್‌ಟನ್‌ರವರಿಗೆ, ಮೇರಿ ಎಂಬ ಯುವತಿ ಈ ರೀತಿ ಬರೆದಿದ್ದಾಳೆ : "ನಾನು ಮಾದಕ ವಸ್ತುಗಳ ಸೇವನೆಯನ್ನು ನಿಮ್ಮ ಪ್ರೇರಣೆಯಿಂದ ನಿಲ್ಲಿಸಿದಾಗ, ಕಾಮಾಲೆಯಿಂದ ನರಳತೊಡಗಿದೆ. ಆಗ ಗೆಳತಿಯೊಬ್ಬಳು ಬಾಬಾ ಅವರು ತನಗೆ ಕೊಟ್ಟಿದ್ದ ವಿಭೂತಿ ಕೊಂಚ ನನಗೆ ಕೊಟ್ಟಳು. ಕೆಲವೇ ದಿನಗಳಲ್ಲಿ ಆರೋಗ್ಯವಂತಳಾದೆ. ಸಾಯಿಬಾಬಾ ದೈಹಿಕವಾಗಿಯೂ ಮಾನಸಿಕವಾಗಿಯೂ ರಕ್ಷಿಸಿದ್ದಾರೆ. ನನ್ನ ತಾಯಿಯ ಸಂತೋಷಕ್ಕೆ ಪಾರವೇ ಇಲ್ಲ. ಮತ್ತೆ ಕಾಲೇಜು ಸೇರಿ ವಿದ್ಯಾಭ್ಯಾಸವನ್ನು ಶ್ರದ್ಧೆಯಿಂದ ಮುಂದುವರಿಸುತ್ತಿದ್ದೇನೆ. ನನ್ನ ವಿಷಯ ತಿಳಿದು ಮೂರು ಹುಡುಗಿಯರು, ತಾವೂ ಮಾದಕ ಮಾತ್ರೆಗಳ ಚಟದಿಂದ ಪಾರಾಗಿದ್ದಾರೆ".

ಪೆದ್ದ ಗೊಟ್ಟಾಪಾಲಂ ಜಾನಕಿ ರಾಮಯ್ಯನಿಗೆ ಬಾಬಾ ವಿಷಯ ತಿಳಿದಿತ್ತು. ಆದರೆ ನಮ್ಮ ದೇಶದ ಮೂಲೆ ಮೂಲೆಯಲ್ಲೂ ಮೆರೆಯುತ್ತಿರುವ ಬೈರಾಗಿಗಳಂತೆ, ಅವರೂ ಒಬ್ಬರು

ಎಂದು ಅಲ್ಲಗಳೆದಿದ್ದ. ಅವನ ಗ್ರಾಮದಾಚೆ ಗುಡ್ಡದ ಮೇಲಿನ ಗುಡಿಯ ದೇವರೇ ಅವನಿಗೆ ಸರ್ವಾಭೀಷ್ಟದಾಯಕ. ತಾತ, ಮುತ್ತಾತಂದಿರ ಕಾಲದಿಂದಲೂ ಪೂಜೆ ಪುರಸ್ಕಾರ, ಹರಕೆ ಮುಡಿಪು ಎಲ್ಲ ಆ ಶಿವಲಿಂಗಕ್ಕೇನೆ. ಅಲ್ಲಿ ಶಿವರಾತ್ರಿ ದೊಡ್ಡ ಉತ್ಸವ. ಜಾನಕಿರಾಮಯ್ಯನದೇ ಸಂಪೂರ್ಣ ಕಾರುಭಾರ. ಆದರೆ ಇನ್ನು ಎರಡೇ ದಿನ ಇರುವುದು ಎಂದಾಗ, ಅವನಿಗೆ ಜ್ವರ, ಹೊಟ್ಟೆನೋವು, ಭೇದಿ. ಹತ್ತಿರ ಆಸ್ಪತ್ರೆಯಾಗಲಿ, ಊರಲ್ಲಿ ಡಾಕ್ಟರಾಗಲಿ ಇಲ್ಲ. ಗಂಟಲು ಹುಣ್ಣು, ಅನ್ನ ನುಂಗಲಾರ, ನೀರು ಕುಡಿಯಲಾರ, ಸೊಪ್ಪುಸೊದೆ, ಬೇರು ನಾರು, ಮಂತ್ರಮಾಟ ಯಾವುದರಿಂದಲೂ ಗುಣ ಕಾಣಲಿಲ್ಲ. ೧೫ನೆ ತಾ| ಶಿವರಾತ್ರಿ. "೧೫ನೆ ತಾ| ರಾತ್ರಿ ಕಿಂ ಕರ್ತವ್ಯಂ ? ಯಾರೋ ನೆಂಟರು ಪುಟ್ಟಪರ್ತಿಯಿಂದ ಹೊತ್ತು ತಂದು ಆ ಮನೆಯಲ್ಲಿ ಬೀರುವಿನ ಮೇಲಿರಿಸಿದ್ದ ಸತ್ಯಸಾಯಿ ಬಾಬಾ ಅವರ ಸಣ್ಣ ವಿಗ್ರಹವೊಂದರ ನೆನಪಾಯಿತು. ಅದನ್ನೇ ನೋಡುತ್ತ, ಅವರೆದುರು ಗೋಗರೆಯುತ್ತ ನಿದ್ದೆ ಬಂತು. ಕನಸಿನಲ್ಲಿ ಬಾಬಾ ಕಾಣಿಸಿಕೊಂಡರು. ಬಟ್ಟಲು ನೀರು ತೋರಿಸಿ, ಕುಡಿ ಎಂದರು. ಸಾಧ್ಯವಿಲ್ಲ ; ಒಂದು ತೊಟ್ಟೂ ಇಳಿಯದು ; ನೋವು ವಿಪರೀತ" - ಎಂದೆ. ನನ್ನ ಹೆಂಡತಿ ಕೈಯಲ್ಲಿ ಒಂದು ಚೆಂಬು ನೀರು ತರಿಸಿ, ಕುಡಿ ಎಂದರು. ಅದನ್ನೆಲ್ಲ ಕುಡಿದು ಚೊಂಬು ಖಾಲಿ ಮಾಡಿದೆ : ಎಚ್ಚರವಾಯಿತು. ೧೧ ಗಂಟೆ ರಾತ್ರಿ. ಜ್ವರ, ಭೇದಿ, ನೋವು ಎಲ್ಲ ಮಂಗಮಾಯ. ೧೫ ತಾ| ಊರೆಲ್ಲಾ ಓಡಾಡಿ, ಗುಡಿಗೆ ಹೋಗಿ ಬಂದೆ. ೧೫ನೆ ತಾ | ಉತ್ಸಾಹದಿಂದ ಮಹೋತ್ಸವ ಜರುಗಿಸಿ, ಸಹಸ್ರಾರು ಪ್ರಜೆಗಳಿಗಾನಂದ ಹಂಚಿದೆ. ಸತ್ಯ ಸಾಯಿಬಾಬಾ ಸಾಕ್ಷಾತ್ ಶಿವನೇ. ಅಲ್ಲಿಗೆ ಈ ಊರಿಂದ ಹೇಗೆ ಪ್ರಯಾಣ ಮಾಡುವುದು ಎಂದು ತಿಳಿಸಿ" - ಎಂದು ನನಗೆ ಪತ್ರ ಬರೆದರು.

ಎರುಕ್‌ವಾಡಿಯಾ ಎಂಬವರು, ಬೆಂಗಳೂರು ವಿಕ್ಟೋರಿಯಾ ಆಸ್ಪತ್ರೆಗೆ ಹಲವಾರು ಸಲ ಭೇಟಿಕೊಟ್ಟು, ಅಲ್ಲಿಯ ಡಾಕ್ಟರುಗಳಿಂದ ತನ್ನ ಶ್ವಾಸಕೋಶ ಪರೀಕ್ಷೆ ಮಾಡಿಸಿಕೊಂಡಾಗ, "ನ್ಯೂ ಮೋ ತೊರಾಕ್ಸ್" - ಎಂಬ ಭಯಂಕರ ರೋಗನಾಮವನ್ನು ಅದಕ್ಕೆ ಅಂಟಿಸಿ ಕಳುಹಿಸಿದರು. ಬಲಕೋಶಕ್ಕೆ ಅದು ಹೆಚ್ಚು ತಗುಲಿದೆ ಎಂದು ಎಚ್ಚರಿಸಿದರು. ಪುಟ್ಟಪರ್ತಿಗೆ ಬಂದರು; ದರ್ಶನ ಸಿಕ್ಕಿತು. ಅಷ್ಟೆ, ತೃಪ್ತರಾಗಿ; ಹಿಂದಕ್ಕೆ ಹೋಗಿ, ಕ್ಷಯಾಸ್ಪತ್ರೆಯಲ್ಲಿ ಮತ್ತೊಮ್ಮೆ ಪರೀಕ್ಷಿಸಿಕೊಂಡರು. "ನ್ಯೂ ಮೋ ತೊರಾಕ್ಸ್" - ಅಂತ ಯಾರು ಹೇಳಿದರು ? ಅದರ ಸುಳಿವೇ ಇಲ್ಲ. ಬಲಗಡೆ ಕೋಶ ಎಡಗಡೆಯದಕ್ಕಿಂತ ಬಲಿಷ್ಟವಾಗಿದೆಯಲ್ಲಾ"- ಎಂಬ ತೀರ್ಪು ಸ್ವಾಮಿಯ ಅನುಗ್ರಹ ದೃಷ್ಟಿಯಿಂದ ಅವರಿಗೆ ಲಭಿಸಿತು.

ಹಾಲಂಡರ್ ನಿಕೊಲಾಸ್ ಎಂಬ ವೃದ್ಧ, ವಿಪರೀತ ಜ್ವರದಿಂದ ನರಳುತ್ತ ನರಳುತ್ತ, ನವರಾತ್ರಿ ಅಡಾಉಡಿಯಲ್ಲಿ ನಿಲಯದಲ್ಲಿರಲಾರದೆ, ಆಸ್ಪತ್ರೆ ಸೇರಿದ್ದ, ಪುಟ್ಟಪರ್ತಿಯಲ್ಲೇ. ಒಂದು ರಾತ್ರಿ ಡಾಕ್ಟರುಗಳು, "ಸಾಯಿರಾಂ ! ಇವನನ್ನು ದೇವರೇ ಕಾಪಾಡಬೇಕು" - ಎಂದು ಮಾತನಾಡಿಕೊಳ್ಳುತ್ತಿದ್ದುದು ಅವನ ಕಿವಿಗೆ ಬಿತ್ತು. ಆ ರಾತ್ರಿ ಅವನೆದುರು ಸ್ವಾಮಿಯ ಕಣ್ಣು, ಕೂದಲು, ಮುಖ, ಮಂದಹಾಸ ಕ್ಷಣಕ್ಷಣಕ್ಕೂ ಪ್ರತ್ಯಕ್ಷವಾದವು. ಪ್ರಣವನಾದ ಕೇಳಿಸಿತು. ಬೆಳಗ್ಗೆ ಆತ ತುಂಬಾ ಚೇತರಿಸಿಕೊಂಡಿದ್ದ. ಹತ್ತು ಗಂಟೆಗೆ ಸರಿಯಾಗಿ ಅಪರಿಚಿತ ಅಮೆರಿಕನ್ ಭಕ್ತನೊಬ್ಬನು ಅವನ ಹತ್ತಿರ ಬಂದು, "ಸ್ವಾಮಿ ನನ್ನನ್ನು ಕರೆದು, ಆಸ್ಪತ್ರೆಯಲ್ಲಿ ನಿಕ್ (ಅವನ ಬಳಕೆ ಹೆಸರು) ಮಲಗಿದ್ದಾನೆ. ಅವನಿಗೆ ಹೇಳು, ನಾನು ರಾತ್ರಿ ಪೂರಾ ಅವನ ಪಕ್ಕದಲ್ಲೇ ಇದ್ದೆ ಅಂತ. ಪಾಪ, ಅವನಿಗೆ ಹೃದಯಾಘಾತವಾಯಿತು, ರಾತ್ರಿ" ಎಂದು ಅವನಿಗೆ ತಿಳಿಸಿದರು. ಕಷ್ಟದಲ್ಲಿರುವವರಿಗೆಲ್ಲ ಅವರು ಏಕೈಕ ಆಸರೆ.

ಬೆಂಗಳೂರಿನ ಟಾಟಾ ಇನ್‌ಸ್ಟಿಟ್ಯೂಟ್ ಪ್ರಾಧ್ಯಾಪಕರು, ಡಾ | ಸೂರಿ ರಾಮಕೃಷ್ಣ ಅವರಿಗೆ, ತಾವು ಪುಟ್ಟಪರ್ತಿಯಲ್ಲಿದ್ದಾಗ ಒಂದು ತಂತಿ ಬಂತು : ರಾತ್ರಿ ೯-೩೦ಕ್ಕೆ; "ಸೆರಿಬ್ರಲ್ ತ್ರೋಂಬೋಸಿಸ್ ತಗುಲಿದ್ದರಿಂದ ತಾಯಿಯನ್ನು ದೊಡ್ಡಾಸ್ಪತ್ರೆಗೆ ಸೇರಿಸಿದ್ದೇವೆ "- ಎಂದು ಹೈದರಾಬಾದಿನಿಂದ ! ಅವರ ಪರವಾಗಿ ನಾನೇ ಧೈರ್ಯಮಾಡಿ ವಿಷಯವನ್ನು ಸ್ವಾಮಿಗೆ ತಿಳಿಸಿದೆ. "ಈಗ ತಾನೆ ನಾನೂ ಆಸ್ಪತ್ರೆಗೆ ಹೋಗಿದ್ದೆ; ಎಲ್ಲ ಸರಿ ಹೋಗಿದೆ. ಹಾಯಾಗಿ ಮಲಗಿ ನಿದ್ದೆ ಹೋಗು ಅಂತ ಹೇಳು ಆತನಿಗೆ" - ಎಂದರು ಸ್ವಾಮಿ. ಅನಂತರ ತಿಳಿಯಿತು. ಅವರ ತಂದೆ ಡಾ | ಭಗವಂತರವರ ಹೇಳಿಕೆ ಮೇರೆಗೆ. "ಮರದ ತುಂಡಿನ ಹಾಗೆ ಮಲಗಿದ್ದವಳು, ಇದ್ದಕ್ಕಿದ್ದ ಹಾಗೆ ಕಣ್ಣೆರೆದು ಸುತ್ತ ನೋಡಿದಳು. ಮೈಯಲ್ಲಿ ಚೇತನ ಹರಿಯಿತು. ಆಗ ನಾನು ಕೇಳಿದೆ, ಮಕ್ಕಳಿಬ್ಬರನ್ನು ಕರೆಯಿಸೋಣವೆ ? ನಿನಗೂ ಆಸೆ ಇರುತ್ತದೆ, ಅವರಿಗೂ ಇರುತ್ತದೆ. ಅಂತ ಅದಕ್ಕವಳು, "ಬೇಡ ಬೇಡ, ಈಗ ತಾನೆ ಬಾಬಾ ಬಂದಿದ್ದರು ; ಮಾತಾಡಿಸಿದರು. ಪರವಾಯಿಲ್ಲ, ಅಂತ ಪ್ರಸಾದ ಕೊಟ್ಟರು. ಬೇಗನೆ ಮನೆಗೆ ಹೋಗಬಹುದು ಆಸ್ಪತ್ರೆಯಿಂದ, ಅಂತ ಹೇಳಿದರು," ಎಂದಳು.

ಅಸ್ಸಾಂ ರಾಜಧಾನಿ ಗೌಹತಿಯಿಂದ ೩೦ ಮೈಲಿ ಆಚೆ ರಂಗೀಯಾ ಎಂಬಲ್ಲಿಯ ಕಾಲೇಜು ಪ್ರಿನ್ಸಿಪಾಲ್ ಬೀರೇನ್ ಬಾರ್ದಲಾಯ್ ಅವರು, ನಿಲುವುಗನ್ನಡಿಯೊಂದಕ್ಕೊರಗಿಸಿಟ್ಟಿದ್ದರು, ಎರಡು ಚಿತ್ರಪಟಗಳನ್ನು, ಬಾಬಾ ಅವರ ಅವುಗಳ ಮೇಲಂಚಿಗೆ ಸರಿಯಾಗಿ ಕನ್ನಡಿ ಮೇಲೆ, ಎಡದಿಂದ ಬಲಕ್ಕೆ ಇಂಗ್ಲೀಷಿನಲ್ಲಿ, "ಆಶೀರ್ವಾದಗಳು... ಶ್ರೀ ಸತ್ಯ ಸಾಯಿಬಾಬಾ" - ಎಂಬ ಅಕ್ಷರಗಳು ಮೂಡಿ ಬಂದು ಬೆಳಗುತ್ತಿವೆ ! ಲಂಡನ್‌ನಿಂದ ಸೀತಾರಾಂ ಎಂಬ ಎಡಿಟರ್ ಪುಟ್ಟಪರ್ತಿಗೆ ಬಂದಾಗ,

ಸ್ವಾಮಿ ಅವರನ್ನು, "ರಾತ್ರಿ ಮಲಗುವ ಮೊದಲು ಗ್ಯಾಸ್ ಮುಚ್ಚದೆ ಇದ್ದರೆ, ಆ ವಿಷವಾಯು ಉಸಿರಲ್ಲಿ ಸೇರಿ, ಜೀವಕ್ಕೆ ಅಪಾಯ ಅಂತ ತಿಳಿಯದೆ ನಿಮಗೆ ? ನಾನೇ ಬಂದು ನಾಲ್ಕಾರು ಸಲ ಆಫ್ ಮಾಡಬೇಕಾಯಿತು. ಹುಷಾರಾಗಿರು" - ಎಂದು ಮೂದಲಿಸಿದರು. ಮಹಾರಾಷ್ಟ್ರದ ನಂದುರ್ಬಾರ್ ಎಂಬ ಊರಿಂದ, ಆರ್. ಕೆ. ಗೋಲಾಪ್ ಎಂಬುವರು, "ಸನಾತನ ಸಾರಥಿ" ಪತ್ರಿಕೆಗೆ ಕಾಗದ ಬರೆದರು : "ಸುಮಾರು ೪-೧೫ ಗಂಟೆ, ರಾತ್ರಿ. ಏಳು ಏಳು ಏಳು ಎಂದು ಹೆಸರು ಹಿಡಿದು ಕರೆದ ಹಾಗಾಯಿತು. ಇಷ್ಟು ಬೇಗ ಎದ್ದು ಮಾಡುವುದೇನಿದೆ, ಎಂದು ನಾನು ಮಲಗೇ ಇದ್ದೆ. ಕಣ್ಣು ತೆರೆದು ನೋಡೋ, ಅಷ್ಟಾದರೂ ಮಾಡು, ಎಂದು ಕೇಳಿಸಿತು. ನೋಡುತ್ತೇನೆ ಕಿಟಕಿಯಾಚೆ ಕಳ್ಳ ! ಎದ್ದು ಕೂಗಿಕೊಂಡಾಗ, ಅಸಾಮಿ ಪರಾರಿ. ಬಾಗಿಲಾಚೆ ನೆಲದ ಮೇಲೆ ಉದ್ದಕ್ಕೂ ಬಾಬಾ ವಿಭೂತಿಯ ಗೆರೆ."

ಕೊಡಗು ಅಪ್ಪಯ್ಯನವರ ಪತ್ರ. "ಆಗಸ್ಟ್ ತಿಂಗಳೊಂದು ದಿನ. ಕರೆಂಟ್ ಬಂದ್. ಕಗ್ಗತ್ತಲೆಯ ರಾತ್ರಿ. ಊಟ ಮುಗಿಸಿ, ಕುಮಾರ್ ಹಾಸಿಗೆ ಮೇಲೆ ಬಿದ್ದುಕೊಂಡ. ಹಳೇ ಮುರುಕಲು ಮನೆ ; ಅವನೊಬ್ಬನೇ ಅದರಲ್ಲಿ. ಮೋಂಬತ್ತಿಯೊಂದರ ಬೆಳಕಿನಲ್ಲಿ, ಸ್ವಾಮಿ ಪಟದೆದುರು ಊದುಬತ್ತಿ ಹಚ್ಚಿಟ್ಟು, ಕೊಂಚಹೊತ್ತು ಭಜನೆ ಮಾಡಿದ. ಹೊರಗಡೆ ಮಳೆಗಾಳಿ, ಮಿಂಚು ಸಿಡಿಲು, ಗಟ್ಟಿಯಾಗಿ ಯಾರೋ ಕೂಗಿದರು. "ಕುಮಾರ್ ! ಓಡು ! ಓಡು ! ಬೇಗ". ಬಾಗಿಲು ತೆರೆದು ಕತ್ತಲೆಯೊಳಕ್ಕೆ ಓಡಿದ ಹುಡುಗ. ಇಪ್ಪತ್ತಡಿಗಳಾಚೆ ರಸ್ತೆ ಸೇರಿದಾಗ, ಮನೆ ಕುಸಿದು ದೊಪ್ಪನೆ ಬಿತ್ತು. ಬೆಳಗ್ಗೆ ನೋಡಿದರು ; ಹಾಳಾಗದೆ ಇದ್ದ ಪದಾರ್ಥ ಒಂದೇ ಒಂದು, ಗಾಜಿನ ಕಟ್ಟು ಹಾಕಿಸಿದ್ದ ಬಾಬಾ ಚಿತ್ರಪಟ !

ಪಾಲಘಾಟ್ (ಕೇರಳ) ನಗರದ ಕೊಪ್ಪಂ ಬಡಾವಣೆಯಲ್ಲಿ, ಸಾಯಿಭಕ್ತ ಸೇತು ಮಾಧವನ್ ನಾಯರ್‌ಗೆ ಒಂದು ಪತ್ರ ಬಂತು. ರಕ್ತದಿಂದಲೇ ಬರೆದ, ತಲೆಬುರುಡೆ, ಎಲುಬು ತುಂಡುಗಳ ಭೀಕರ ಗುರುತು, ಎಲ್ಲಕ್ಕಿಂತ ಹೆಚ್ಚಾಗಿ ನಕ್ಸಲೈಟ್‌ರವರ ಪತ್ರ. ನೀನು ನಿಮ್ಮ ಮನೆಯಲ್ಲಿ ಭಜನೆ ನೆಪದಲ್ಲಿ ಜನ ಸೇರಿಸಿ, ಅಕ್ಕಪಕ್ಕದವರಿಗೆ ಅಶಾಂತಿ, ನಮಗೆ ಆಕ್ರೋಶ ಉಂಟು ಮಾಡುತ್ತಿದ್ದೀಯ. ಏಳು ದಿವಸ ಅವಧಿ ಕೊಟ್ಟಿದ್ದೇವೆ. ಅಷ್ಟರಲ್ಲಿ ನಿಲ್ಲಿಸಿ ತೆಪ್ಪಾಗಾಗದಿದ್ದರೆ ತಲೆ ತೆಗೀತೇವೆ ". ಹತ್ತು ದಿನಗಳ ಹಿಂದೆ, ನಕ್ಸಲೈಟ್ ತಂಡವೊಂದು ಮೂರು ಮೈಲಿ ಆಚೆ ಇದ್ದ ಶ್ರೀಮಂತನ ಮನೆಗೆ ನುಗ್ಗಿ, ಯಜಮಾನರ ಶಿರಚ್ಛೇದ ಮಾಡಿ ರುಂಡವನ್ನು ಮನೆ ಬಾಗಿಲಿಗೆ ನೇತಾಡಿಸಿದ್ದರು.

ಸೇತುಮಾಧವ ಯಾರನ್ನು ಶರಣು ಹೊಕ್ಕಾನು ? ಸ್ವಾಮಿಯನ್ನೇ ! ನಾಮಸಂಕೀರ್ತನವೇ ರಕ್ಷಾಕವಚ. ಆಪದಿ ಕಿಂ ಕರಣೀಯಂ ? ಸ್ಮರಣೀಯಂ

ಚರಣಯುಗಳಂ ಆಂಬಾಯಾಃ. ಅಖಂಡ ಭಜನ ಸಪ್ತಾಹವನ್ನು ನಿಶ್ಚಯಿಸಿದ. ರಾತ್ರಿ ಹಗಲು ಏಳು ದಿನ, ಬಿಡುವಿಲ್ಲದೆ ನೂರಾರು ಜನ ಭಜನೆ ಹಾಡಿದರು. ಎಂಟನೇ ದಿನ ನಾಲ್ಕೂವರೆ ಗಂಟೆಗೆ, ಓಂಕಾರ ಜಪ, ಸುಪ್ರಭಾತಗಳಿಗಾಗಿ ಮುಖ ತೊಳೆದು ಸಿದ್ಧವಾಗಲು ಪ್ರಯತ್ನಿಸುವಾಗ, ಪಕ್ಕದ ಕಿಟಕಿ ಕಂಬಿಗಳ ಮಧ್ಯದಿಂದ, ಹೊರಗೆ ನಿಂತಿದ್ದ ವ್ಯಕ್ತಿಯೊಬ್ಬ, ಮಚ್ಚುಕತ್ತಿಯನ್ನು ಗುರಿಯಿಟ್ಟು ಬೀಸಿದ. ಆದರೆ ಅಷ್ಟು ಹೊತ್ತಿಗೆ ಸರಿಯಾಗಿ, ಕೆಂಪು ಬಣ್ಣದ ಜ್ಯೋತಿಯೊಂದು, ಸೇತು ಮಾಧವನನ್ನು ಥಟಕ್ಕನೆ ನೂಕಿ, ಮೂಲೆಯಲ್ಲಿ ಬೀಳಿಸಿ, ಉಳಿಸಿತು. ಮಚ್ಚುಕತ್ತಿ ಠಣ್ ಎಂದು ನೆಲಕ್ಕೆ ಬಿತ್ತು. ಕಿಟಕಿ ಆಚೆ, ಕಳ್ಳ, ಕೊಲೆಪಾತಕ, ಧಡ ಧಡನೆ ಪರಾರಿ. ಭಕ್ತರು ಬಂದು ಏನಾಯ್ತು ಬಂದು ವಿಚಾರಿಸಿದಾಗ, ನಾಯರ್ ಮೈ ತುಂಬ ವಿಭೂತಿ ವರ್ಷ !

ಕ್ಯಾಪ್ಟನ್ ಬೋಸ್ ಎಂಬವರು, ಇಂಡೋನೇಷಿಯಾದಲ್ಲಿ ಭಾರತ ರಾಯಭಾರಿ ಕಚೇರಿಯಲ್ಲಿದ್ದಾಗ, ಭಾರೀ ಕಾರೊಂದನ್ನು ಕೊಂಚ ಅಗ್ಗವಾಗಿ ಕೊಂಡರು. ಅದನ್ನು ಸ್ವದೇಶಕ್ಕೂ ತಂದರು. ಅವರ ಕಚೇರಿ ಅಸ್ಸಾಂನ ಗೌಹತಿಯಲ್ಲಿತ್ತು. ಪಂಜಾಬ್ ರಾಜ್ಯದ ಅಂಬಾಲಾದಿಂದ ಅವರ ಹೆಂಡತಿಯನ್ನೂ ಮಾವನನ್ನೂ ಅದೇ ಕಾರಲ್ಲಿ ಕೂರಿಸಿಕೊಂಡು, ಗೌಹತಿಗೆ ತಾನೇ ನಡೆಸುತ್ತ ತರಬೇಕೆಂದು ಅವರಿಗೆ ಆಸೆ. ಕುದಿವ ರಕ್ತ, ಖುಷಿ ಜೀವನ, ಸಾಹಸ ಪರಾಕ್ರಮಗಳಿಗೆ ತವರೂರಾದ ಕ್ಷಾತ್ರ ಮನೋಭಾವ ! ಬರಬರುತ್ತ, ಗಂಗಾ ಪ್ರವಾಹದಿಂದ ಹಾಳಾದ ರಸ್ತೆಗಳು, ಮುರಿದ ಸೇತುವೆಗಳು, ಅಲ್ಲಲ್ಲಿ ಮೊಣ ಕಾಲೆತ್ತರದ ನೀರು ರಸ್ತೆಗೆ ಅಡ್ಡ, ಸಂದುಗೊಂದು ಬಳಸಿ, ಕೆಸರು ಕಾಲುವೆ ದಾಟಬೇಕಾಗಿ ಬಂತು. ತೆವಳುತ್ತ ತೊದಲುತ್ತ ಕುಂಟುತ್ತ ಕಿರಿಚುತ್ತ ಆ ರಾಜವಾಹನ, ಹರಿಹರಗಂಜ್ ಎಂಬ ಊರಾಚೆ ಕುಳಿತೇ ಬಿಟ್ಟಿತು. ಹಿಂಭಾಗದ ಚಕ್ರಗಳೆರಡೂ ಅರ್ಧಕ್ಕಿಂತ ಹೆಚ್ಚು ಕೆಸರಲ್ಲಿ ಮುಳುಗೇ ಬಿಟ್ಟಿತು. ಮುಂದಿನ ಒಂದು ಚಕ್ರ ಮುಕ್ಕಾಲು ಭಾಗ ಹೂತುಕೊಂಡಿತು. ರಾತ್ರಿ ೧೧.೩೦ ಗಂಟೆ. ಒಂದು ಪ್ರಾಣಿಯೂ ಗೋಚರವಾಗಲಿಲ್ಲ. ಸಿಕ್ಕರೂ ಜನರಿಂದ ಏನು ತಾನೆ ಸಾಧ್ಯ? ಹತ್ತಿರ ಕಾಣಿಸಿದ ಒಂದು ಸ್ಕೂಲು ವರಾಂಡದಲ್ಲಿ. ಎರಡೆರಡು ಬೆಂಚು ಜೋಡಿಸಿ, ಕಾಲು ನೀಡಿ ಮಲಗಿದರು. ಗೌಹತಿಯನ್ನು ಬೋಸ್ ಆದಷ್ಟು ಬೇಗ ತಲಪಬೇಕಾಗಿತ್ತು. ಕೋರ್ಟ್ ಮಾರ್ಷಲ್ ಎಂಬ ಸೈನ್ಯ ನ್ಯಾಯಾಲಯದಲ್ಲಿ ಹಾಜರಾಗಬೇಕಾದ್ದು ಅವರ ಡ್ಯೂಟಿ, ಬಾಬಾ ಹೇಳುತ್ತಾರೆ, "ಡ್ಯೂಟಿ ನಿನ್ನ ದೇವರು" - ಎಂದು.

ಉದಯವಾಯಿತು. ಕಾರು ಇನ್ನೂ ಕೊಂಚ ಹೆಚ್ಚು ಆಳ ಹೂತು ಹೋಗಿತ್ತು. ಆರೇಳು ಜನ ಹಳ್ಳಿಗರೂ ಹತ್ತು ಹನ್ನೆರಡು ಹೈಕಳೂ, ಹಲ್ಲು ಕಿರಿಯುತ್ತ ಕಾರು ಸುತ್ತ ಮಳೆಯಲ್ಲಿ ನಿಂತಿದ್ದರು. ಅವರು ಯಾರೂ ಬೋಸ್‌ರವರ ಸಹಾಯಕ್ಕೆ ಬರುವಂಥವರಲ್ಲ. ಭಾರೀ ಕಾರು. ಎಂಜಿನ್ ಅಶ್ವಶಕ್ತಿ

ತುಂಬ. ಒಳಗೆ ಕುಳಿತು ಎಂಜಿನ್ ಸ್ಟಾರ್ಟ್ ಮಾಡಿ ನೋಡಿದರು. ಬೇಡ ಬೇಡ, ಎಂದು ಅವರ ಧರ್ಮ ಪತ್ನಿ ಹಿಂದೆ ನಿಂತು ಕೂಗಿಕೊಂಡರು. ಸಂಪೂರ್ಣ ನಿರಾಶರಾದರು ಬೋಸ್. "ಬಾಬಾರನ್ನೇ ಕಾಪಾಡಬೇಕು. ಬೇರೆ ಗತಿ ಕಾಣೆ " - ಎಂದು ತಲೆಯ ಮೇಲೆ ಕೈಯಿಟ್ಟು ರಸ್ತೆ ಪಕ್ಕದಲ್ಲಿ ಕೂತರು.

ಆಗ ಕಾಣಿಸಿತು, ತಮ್ಮ ಕಡೆಗೆ ನಡೆದು ಬರುತ್ತಿರುವ, ಸೌಮ್ಯ ಮುಖದ, ಒಬ್ಬ ಮಧ್ಯವಯಸ್ಸಿನ, ಬಿಚ್ಚಿದ ಕೊಡೆ ಸಹಿತ ! ಆತ ಬಡಪಾಯಿ, ಕಾರನ್ನು ವೀಕ್ಷಿಸಿದ. ಹತ್ತಿರ ನಿಂತು ಒಂದು ಸುತ್ತು ಬಂದ. ಬೋಸನ್ನು, ಡ್ರೈವರ್ ಸೀಟ್‌ನಲ್ಲಿ ಕುಳಿತು ಎಂಜಿನ್ ಸ್ಟಾರ್ಟ್ ಮಾಡಿ ಎಂದ. ಮರುಮಾತಾಡಲು ನಾಲಗೆ ಏಳಲಿಲ್ಲ. ಬಲಗಡೆಯಿಂದ ಒಳನುಗ್ಗಲಾಗಲಿಲ್ಲ. ಎಡಗಡೆಯಿಂದ ತೂರಿ, ಚಕ್ರ ಹಿಡಿದು ಕುಳಿತರು. ಕಾರು ತುಂಬ ಎಂಥ ಸ್ವರ್ಗೀಯ ಪರಿಮಳ ! ಬಂದ ಆತ, ಬೋಸರ ಪತ್ನಿ ಕೈಗೆ ಕೊಡೆಯನ್ನು ಕೊಟ್ಟು ; ಮಾವ ಅಲ್ಲೇ ಇರಲಿ ಅಂತ ಸನ್ನೆ ಮಾಡಿ. ಕಾರಿನ ಹಿಂದೆ ಬಂದು ಬಗ್ಗಿ, ಬಲಗೈಯಿಂದ ಇಡೀ ಕಾರನ್ನೆತ್ತಿ ಮುಂದಕ್ಕೆ ನೂಕಿ, ಕೆಸರಾಚೆಯ ಗಟ್ಟಿ ರಸ್ತೆಗೆ ತಳ್ಳಿದ. "ಹುಂ ನೀವಿಬ್ಬರೂ ಕೂಡಿರಿ" - ಎನ್ನುತ್ತ ಬಾಗಿಲು ತೆಗೆದ. ಅವರು ಕುಳಿತ ಕೂಡಲೇ ಕಾರು ಹೊರಟಿತು. ಆಗ ಆತನನ್ನು ಬೋಸರು ಹತ್ತಿರ ಕರೆದು, "ತಾವು ಯಾರು ?" ಎಂದು ಕಣ್ಣೀರು ಸುರಿಸುತ್ತ ಕೇಳಿದರು. "ನಾನು ಚೌಕೀದಾರ್ ; ಕಾಯುವುದೇ ನನ್ನ ಡ್ಯೂಟಿ. ನೀನೇಕೆ ನನ್ನನ್ನ ರಾತ್ರಿಯೇ ಕರೆಯಲಿಲ್ಲ ?" ಎಂದುತ್ತರಕೊಡುತ್ತ ಆತ, ಬಿರಬಿರನೆ ಹತ್ತು ಹೆಜ್ಜೆ ನಡೆದ. ಹನ್ನೊಂದನೆ ಹೆಜ್ಜೆಗೆ ಎತ್ತ ಹೋದನೋ ಯಾರು ಬಲ್ಲರು ? ಬಾಬಾ, ಪರಮ ಕರುಣಾ ನಿಧಿ, ಮಾರ್ಗ ಬಂಧು ತನ್ನ ಬುದ್ಧಿ ಶಕ್ತಿ, ತನ್ನ ಕಾರೊಳಗಿನ ಅಶ್ವಶಕ್ತಿ, ಇವನ್ನೇ ನಂಬಿ ಆತ ಆದಷ್ಟು ಉದ್ಯಮ ಮಾಡಿ ಸೋತು, ಇನ್ನು ನನ್ನಿಂದಾಗದು, ನೀನೇ ಶರಣು ಎಂದಾಗ, ಸ್ವಾಮಿ ಚೌಕೀದಾರನಾಗಿ ಬಂದು, ಒಂದೇ ಕೈಯಿಂದ ಕಾರನ್ನೆತ್ತಿ ನೂಕಿ ನಡೆಸಿದ ಪುರುಷಾ ಕಾರ ಕರ್ಮಣ್ಯೆ ವಾಧಿಕಾರಸ್ತೇ.

ಮೆಕ್ಸಿಕೊ ರಾಷ್ಟ್ರಕ್ಕೂ ಸಂಯುಕ್ತ ಸಂಸ್ಥಾನಕ್ಕೂ ನಡುವಣ ಗಡಿಯ ಗೆರೆಯ ಮೇಲಿನ ಇಂದ್ರಾದೇವಿಯ ಯೋಗ ಶಿಕ್ಷಣಕೇಂದ್ರ. ಸುತ್ತಲೂ ನಿರ್ಜನಾರಣ್ಯ. ಹತ್ತು ಸಾವಿರ ಗುಡ್ಡ. ಆಗಾಗ ಕಾಡುಗಿಚ್ಚು ಸಂಭವ. ಒಮ್ಮೆ ಭೀಕರವಾಗಿ ಮೈಲಿಗಟ್ಟಲೆ ಬಳಸಿ ಉರಿದು, ಅವರ ಬಂಗಲೆಯನ್ನೂ ನುಂಗಲು ನಾಲಗೆ ಚಾಚಿತು. ಸಾಯಿರಾಂ ಎಂಬ ಮೊರೆಗೆ ಹೆದರಿ, ಹೊರ ಅಂಗಳದಲ್ಲಿದ್ದ ಎರಡು ಗುಡಾರಗಳನ್ನೂ ಒಂದು ಲಾರಿಯನ್ನೂ ಸ್ವಾಹಾಮಾಡಿ ಹಿಂತಿರುಗಿತು. ಮತ್ತೊಂದು ಸಲ ಹಾಹಾಕಾರವೆಬ್ಬಿಸುತ್ತ, ಎದುರಿಗಿದ್ದುದನ್ನೆಲ್ಲ ಧಗಧಗನೆ ದಗ್ಧ ಮಾಡುತ್ತ ಬಂದ ಅಗ್ನಿದೇವನನ್ನು ಕಂಡು ಹೆದರಿ, ಇಂದ್ರಾದೇವಿ ತಮ್ಮ ಪೂಜಾಗೃಹದಲ್ಲಿದ್ದ ಪಟದ ಮುಂದೆ ಅಡ್ಡಬಿದ್ದು ಹಲುಬಿದಾಗ, ಇದ್ದಕ್ಕಿದ್ದಂತೆ ಗಾಳಿ ಇತ್ತಿಂದತ್ತ ತಿರುಗಿ, ಆಕೆಗೆ ಅಭಯ ಪ್ರದಾನವಾಯಿತು. ಪುಟ್ಟಪರ್ತಿಗೆ ಬಂದು ಕೃತಜ್ಞತೆ ಅರ್ಪಿಸಿದಾಗ, ಸ್ವಾಮಿ ಅವರಿಗೆ ಒಂದು ರಕ್ಷೆ ಸೃಷ್ಟಿಸಿ ಕೊಟ್ಟು "ಇನ್ನು ಆ ಜಾಗಕ್ಕೆ ಅಗ್ನಿಬಾಧೆ ಇಲ್ಲ" - ಎಂದು ಆಶ್ವಾಸನವಿತ್ತರು.

ಕೇರಳದ ಕಲ್ಲಿಕೋಟೆಯಲ್ಲಿ, ಮುರಳೀಧರನ್, ರೇಡಿಯೋ ಸ್ಟೇಷನ್ ಡೈರೆಕ್ಟರಾಗಿದ್ದರು. ನಾಗಾಲ್ಯಾಂಡಿನ ಕೊಹಿಮಾಗೆ ವರ್ಗವಾಗುವ ಮುನ್ನ, ಸ್ವಾಮಿಯ ಕೇರಳ ಸಂಚಾರದುದ್ದಕ್ಕೂ, ಅವರೂ ಅವರ ವ್ಯಾನೂ ಹಿಂಬಾಲಿಸುತ್ತ ಬಂದವು. ನನ್ನ ಸ್ವಗ್ರಾಮ ತೃಪ್ಪೂಣಿತ್ತುರ ಎಂಬ ಊರಲ್ಲಿ, ನಾನು ಚಿಕ್ಕಂದಿನಲ್ಲಿ ಚಿಕಿತ್ಸಾ ಲಾಭ ಹೊಂದಿದ ಆಸ್ಪತ್ರೆಗೆ ಸೇರಿದಂತೆ, ಮಕ್ಕಳ ವಾರ್ಡು ಕಟ್ಟಿಸಲು ಒಬ್ಬರು ದಾನಿ ಒಪ್ಪಿದರು. ಕೇರಳದ ವೈದ್ಯ ಶಾಖಾ ಮಾತ್ಯರು, ವೆಲ್ಲಿಂಗ್‌ಟನ್ ಎಂಬವರು ಅಧ್ಯಕ್ಷರು. ಸ್ವಾಮಿ ಅದಕ್ಕೆ ಶಂಕು ಸ್ಥಾಪನೆ ಮಾಡಿದರು. ಆಗ ನಡೆದ ವಿವಿಧ ಕಾರ್ಯಕ್ರಮಗಳನ್ನೂ ಇತರ ಸ್ಥಳಗಳಲ್ಲಿ ಸ್ವಾಮಿ ಅನುಗ್ರಹಿಸಿದ ಉಪನ್ಯಾಸಗಳನ್ನೂ ಅವರು ರಿಕಾರ್ಡ್ ಮಾಡಿಕೊಂಡರು. ಅವುಗಳಿಂದ ಹಲವು ಅಣಿ ಮುತ್ತುಗಳನ್ನಾರಿಸಿ ಪೋಣಿಸಿ, ಒಂದು ಪ್ರೋಗ್ರಾಮನ್ನು ಸಿದ್ಧಪಡಿಸಿ, ಆಕಾಶವಾಣಿ ಮೂಲಕ ಪ್ರಸಾರ ಮಾಡಿದರು. ಆದರೆ ಎಲ್ಲಕ್ಕಿಂತ ಅವರಿಗೆ ಹರ್ಷ ಉಂಟುಮಾಡಿದ್ದು ಯಾವುದೆಂದರೆ, ಸ್ವಾಮಿ ತಮ್ಮ ತುತ್ತತುದಿ ಉಪನ್ಯಾಸದಲ್ಲಿ, "ಶಿವರಾತ್ರಿ ಮುಗಿಸಿ ನಾನು ಮತ್ತೆ ಕೇರಳಕ್ಕೆ ಬರುತ್ತೇನೆ. ಕಣ್ಣೂರಿಂದ ತಿರುವನಂತಪುರದವರೆಗೆ ಪ್ರವಾಸ ಮಾಡಿ, ಒಂದೊಂದರಲ್ಲಿ ಮೂರು ಮೂರು ದಿನ ತಂಗಿ, ನಿಮಗೆ ಸಂಪೂರ್ಣ ಆನಂದ ಕೊಡುತ್ತೇನೆ" - ಎಂದ ಮಾತು. ರೇಡಿಯೋ ನಿಲಯಕ್ಕೆ ಸ್ನೇಹಿತರೊಬ್ಬರು ಬಂದಾಗ, ಮುರಳೀಧರ ಆ ಮಾತನ್ನೇ ಮೆಲುಕು ಹಾಕುತ್ತ, ಸ್ವಾಮಿಯ ಮತ್ತೊಂದು ಕೇರಳ ದಿಗ್ವಿಜಯವನ್ನು ಚಿತ್ರಿಸಿಕೊಂಡು ಆನಂದಿಸುತ್ತಿದ್ದರು. ಆತ ಸುದ್ದಿಯನ್ನು ನಂಬಲಿಲ್ಲ. ಎಲ್ಲಿ ಬರುತ್ತಾರೆ ; ಸುಮ್ಮನೆ ಹೇಳುತ್ತಾರೆ ಅಷ್ಟೆ, ಎಂಬ ರಾಗ ಎಳೆದ. ಆಗ ಮುರಳೀಧರ "ನಾನು ಸುಮ್ಮನೆ ಕೂಡುವುದಿಲ್ಲ. ಶಿವರಾತ್ರಿ ಕಳೆದು ವಾರ ಮುಗಿಯಿತೆಂದರೆ, ಅವರ ಆ ಉಪನ್ಯಾಸದ ಟೇಪು ಸಹಿತ ಹೋಗಿ, ಹೊರಡಲಿಲ್ಲ ಅಂದರೆ, ಅವರಿಗೆ ಅವರ ಮಾತನ್ನೇ ಶ್ರುತಪಡಿಸಿ, ಮೂದಲಿಸುತ್ತೇನೆ, ಎಂದರು. ಭಕ್ತಿಯ ಉದ್ರೇಕದಿಂದ ಬಂದಿದ್ದ ಮಿತ್ರ, "ಖಡಾಖಂಡಿತ, ಅಷ್ಟು ಸ್ಪಷ್ಟ ವಾಗ್ದಾನ ಮಾಡಿದಾರೆಯೇ ? ಕೊಂಚ ಕೇಳೋಣ. ಆ ಟೇಪು ತರಿಸಿ, ರಿಕಾರ್ಡ್‌ನಲ್ಲಿ ಹಾಕಿ" - ಎಂದ. ಮುರಳೀಧರನಿಗೆ ಹಿಡಿಯಲಾರದ ಉತ್ಸಾಹ, ಸಂತೋಷ. ತರಿಸಿ ಸ್ವಿಚ್ ಆನ್ ಮಾಡಿದಾಗ, ಮಧುರ ವಾಕ್ ಪ್ರವಾಹ ಕಿವಿ ಕರುಳುಗಳಿಗೆ ಅಮೃದೌತಣವನ್ನು ಬಡಿಸಿತು. ಕಟ್ಟಕಡೆಯ ಐದು ನಿಮಿಷಗಳಲ್ಲೇ, ತಾವು ಮತ್ತೆ ಬಂದು, ಆನಂದವರ್ಷ ಸುರಿಸುವ ಸುವಾರ್ತೆ. ಮುರಳಿಯ ಕಿವಿಗಳು ನಿಮಿರಿ ನಿಂತುವು. ಆದರೆ ಆ ವಾಕ್ಯಗಳೇ ಬರಲಿಲ್ಲ. ಸ್ವಾಮಿಯ ತೆಲುಗು ಮಾತು.... ವಸ್ತಾನು ... ಇಸ್ತಾನು, ಉಂಟಾನು, ನಿಲಿಸ್ತಾನು, ಎಲ್ಲ ಮಾಯ. ಒಂದೊಂದು ವಾಕ್ಯಕ್ಕೂ, ಹೇಳಿ ಮುಗಿಸಿದ ಕೂಡಲೆ, ಕಸ್ತೂರಿ ಹೇಳಿದ ಮಲಯಾಳ ವಾಕ್ಯ - ವರಾಂ, ಕೊಡುಕ್ಕಾಂ, ಇರಿಕ್ಕಾಂ, ನಿಕ್ಕಾಂ- ಎಲ್ಲ ಮಾಯ ! ಯಾರು ಒರಸಿದ ಹಾಗಿಲ್ಲ. ಏಕೆಂದರೆ ಟೇಪ್‌ನಲ್ಲಿ ಖಾಲಿ ಇಲ್ಲ. ಉಪನ್ಯಾಸ ತರ್ಜುಮೆ ನಿರರ್ಗಳವಾಗಿ ಸಾಗುತ್ತಲೇ ಇದೆ. "ಮೂದಲಿಸುತ್ತೇನೆ, ಈ ಮಾತನ್ನು ಶ್ರುತಪಡಿಸಿ" - ಅಂದರಲ್ಲಾ. ಆ ಮಾತು ಮಾತ್ರ ಹೇಗೋ ಆ ಟೇಪಲ್ಲಿ ಇಲ್ಲ. ಮುರಳೀಧರ ಕುರ್ಚಿಯೊಳಗೆ ಕುಸಿದಿದ್ದರು.

ಆ ದಿನ ವಸಂತ ಪಂಚಮಿ ಎಂಬುದು ಅವರಿಗೆ ತಿಳಿಯಿದು. ಲಖಿಂಪುರಕ್ಕೆ ಹೋಗಿ ಅಲ್ಲಿಂದ ಗೌಹತಿಗೆ ವಿಮಾನ ಹತ್ತಿ, ಮತ್ತೆ ಕಲ್ಕತ್ತ, ಮದ್ರಾಸ್, ಬೆಂಗಳೂರು ಮಾರ್ಗವಾಗಿ ಶ್ರೀಯವರ ಪಾದಸನ್ನಿಧಿಗೆ ಪ್ರಯಾಣ ತೀರ್ಥಯಾತ್ರೆ. ಗೌಹತಿ ; ವಿಮಾನ ನಿಲ್ದಾಣ ಸೇರಿದಾಗ, ಅವರಿಗೆ ಒಂದು ಫೋನ್ ಸುದ್ದಿ ಕಾದಿತ್ತು. ಅವರ ಮಗನಿಂದ. "ಅಪ್ಪಾ ! ಪೂಜೆ ರೂಂ ಸ್ವಾಮಿ ಪಟಕ್ಕೆ ಎಂಥದು ಅಂಟಿಸಿ ಹೋದೀ ?" "ಏನೋ ಅದು ? ನಾನ್ಯಾಕೆ ಅಂಥ ಚೇಷ್ಟೆಗೆ ಹೋಗಲಿ. ಅಮ್ಮನನ್ನು ಕೇಳು, ಏನದು ?" ಕೆಂಪು ರೇಷ್ಮೆ ದಾರ, ಕುಚ್ಚು ಸಹಿತ ; ಸ್ವಾಮಿ ಎಡಗೈ ಮಣಿಕಟ್ಟಿಗೆ ಸರಿಯಾಗಿ... "ನಾನೇನೂ ಮಾಡಲಿಲ್ಲ. ಇರಲಿ ಹಾಗೆಯೇ, ನಾನು ಬಂದ ಮೇಲೆ..." "ಅಪ್ಪಾ ! ಕಟ್ಟು ಹಾಕಿಸಿದೇವಲ್ಲಾ, ಆ ಗಾಜಿನ ಮೇಲಲ್ಲ ರೇಷ್ಮೆ ದಾರ. ಒಳಗೆ, ಪಟಕ್ಕೂ ಗಾಜಿಗೂ ನಡುವೆ. ಇದನ್ನು ಕೇಳಿದವರೊಬ್ಬರು ವಸಂತ ಪಂಚಮಿ ದಿನ ಸೋದರನ ಕೈಗೆ ದಾರ ಕಟ್ಟುವ ಪದ್ಧತಿಯನ್ನು ಹೇಳಿದರು. ಆ ಹೊತ್ತು ಆ ಹಬ್ಬ ಅಂತರ ಅವರಿಗೆ ಅನಂತರ ತಿಳಿಯಿತು. ಆನಂದದಾಯಿ, ನಮ್ಮ ಸ್ವಾಮಿ.

ಬೀಥೋವನ್ ಎಂಬ ಜರ್ಮನ್ ಸಂಗೀತ ಶಾಸ್ತ್ರ ವಿದಗ್ಧ, ಗಾನ ಕಲಾ ವಿಶಾರದ ಪತ್ರ ಬರೆಯುತ್ತ, ಹೀಗೆ ಹೇಳಿದ್ದಾನೆ : ಭಗವಂತನ ಅದ್ಭುತ ಲೀಲೆ ಒಂದನ್ನು ಗಮನಿಸಿದರೆ ಸಾಲದೆ ಅವನು ಸರ್ವಜ್ಞ, ಸರ್ವಶಕ್ತ, ಸರ್ವವ್ಯಾಪಿ ಎಂದು ಅರಿತುಕೊಳ್ಳಲು ? "ನನ್ನ ಸಂಕಲ್ಪ, ವಜ್ರ ಸಂಕಲ್ಪ" - ಎಂದು ಸ್ವಾಮಿ ಒಂದು ಕಾಲೇಜು ಆಡಳಿತ ಸಮಿತಿಯ ಕಾರ್ಯದರ್ಶಿಗೆ ಒಮ್ಮೆ ಬರೆದಿದ್ದಾರೆ.

ಅದೇ ಲಖಿಂಪುರ (ಅರುಣಾಚಲ ಪ್ರದೇಶ)ದಲ್ಲಿ, ಲಕ್ಷಕುಮಾರ್ ಎಂಬ ವಿದ್ಯಾ ಇಲಾಖೆಯ ಡಿವಿಷನಲ್ ಇನ್ಸ್‌ಪೆಕ್ಟರ್. ಆತ ಇಂಗ್ಲಿಷ್, ಸಂಸ್ಕೃತ, ತತ್ವಶಾಸ್ತ್ರ ಮೂರರಲ್ಲೂ ಎಂ.ಎ. ಡಿಗ್ರಿ ಪಡೆದಿರುವ ಮಹಾ ಪಂಡಿತ. ಸ್ವಾಮಿಯನ್ನು ಕುರಿತು ಯಾವಾಗಲೋ ಯಾರೋ ಬರೆದ ಲೇಖನವನ್ನೋದಿ, ಹತ್ತರೊಟ್ಟಿಗೆ ಹನ್ನೊಂದು ಎಂದು ತಿರಸ್ಕರಿಸಿದ್ದ ಮಹಾರಾಯ.

ಒಂದು ದಿನ ಟಪಾಲಿನಲ್ಲಿ, ಅಂಚೆಯವನು ಮೂರು ಪುಸ್ತಕಗಳ ಒಂದು ಪಾರ್ಸಲನ್ನು ಅವರ ಕೈಗಿತ್ತನು. ಬಾಬಾರ ಚರಿತ್ರೆ, ಉಪನ್ಯಾಸ, ಸೂಕ್ತಿಗಳು ಪ್ರಚಾರ ತಂತ್ರದ ಬಲೆಗೆ ಬೀಳಬಾರದೆಂದು ನಿಶ್ಚಯಿಸಿ, ಮೂರನ್ನೂ ಬೀರು ಒಳಕ್ಕೆಸೆದು ಸುಮ್ಮನಾದರು. ದಿನವೂ ರಾತ್ರಿ ಮನೆಯವರೆಲ್ಲ ಮಲಗಿ ನಿದ್ರೆ ಮಾಡಿದ ಮೇಲೆ, ಭೋಜನ ಮೇಜಿನ ಮೇಲೆ ಮಂಡಿಯೂರಿ ಕುರ್ಚಿಯಲ್ಲಿ ಕುಳಿತು, ತದೇಕ ಧ್ಯಾನದಲ್ಲಿ ಪಾಣಿನಿಯ ಮಹಾ ಪುರಾತನ ಸಂಸ್ಕೃತ ವ್ಯಾಕರಣ ಗ್ರಂಥ "ಅಷ್ಟಾಧ್ಯಾಯಿ"ಯನ್ನು ಪಠಿಸುವುದು ಅವರ ಪದ್ಧತಿ. (ಸಂಪ್ರಾಪ್ತೇ ಸನ್ನಿಹಿತೇ ಕಾಲೇ, ನಹಿ ನಹಿ ರಕ್ಷತಿ ಡುಕೃಂಕರಣೇ ಎಂಬ ಶಂಕರಾಚಾರ್ಯರ ಉಪದೇಶ ಅವರಿಗೆ ರುಚಿಸಿರಲಿಲ್ಲ). ಒಂದು

ರಾತ್ರಿ ಡುಕೃಂಕರಣದಂಥ ಕಬ್ಬಿಣದ ಕಡಲೆಯನ್ನು ಅವರು ಮೆಲ್ಲುತ್ತಿದ್ದಾಗ, ಬಾಬಾ ಕೋಣೆಯಲ್ಲಿ ಕಾಣಿಸಿಕೊಂಡು, ಕೆಂಪು ಗೌನು, ಮಂದಹಾಸ, ಕುರುಳೋಳಿ ಸಹಿತ, ಹತ್ತಿರದ ಕುರ್ಚಿಯಲ್ಲಿ ಕುಳಿತರು. "ನನಗೆ ಭಯವಾಗಲಿ, ಆಶ್ಚರ್ಯವಾಗಲಿ ಆಂದೋಳನವಾಗಲಿ ತೋರಲಿಲ್ಲ. ಬಹಳ ದಿನದಿಂದ ಪರಿಚಿತರಂತೆಯೇ ಬಾಬಾ ವರ್ತಿಸಿದರು. "ನಿನಗೆ ಪುಸ್ತಕ ಕಳುಹಿಸಿದ್ದೆ." "ಹೌದು, ಬಂತು.". "ಅವನ್ನು ಓದು". "ಏಕೆ ? ಬೇರೆ ಎಷ್ಟೋ ಉದ್ಗ್ರಂಥಗಳಿವೆ ನನ್ನಲ್ಲಿ, ಪಾಣಿನಿ ಇತ್ಯಾದಿ. ಅವುಗಳಲ್ಲಿರುವುದು ಬರೀ ಜಳ್ಳು". "ಒಂದು ಪುಟವನ್ನು ಕೂಡ ತಿರುವಿ ಹಾಕಿಲ್ಲ ನೀನು. ಆಗಲೇ ತೀರ್ಪು ಕೊಡುವ ದಾರ್ಷ್ಟ್ಯಕ್ಕಿಳಿದು ಬಿಟ್ಟೆಯಲ್ಲಾ. ಬುದ್ಧಿವಂತ, ಮೂರು ಎಂ.ಎ. ಡಿಗ್ರಿ ಪಡೆದವನು ಹೀಗೆ ಹೇಳುವುದುಂಟೆ?" ಆಗ ಅವರು ಬೀರಿದ ಮಂದಹಾಸದ ವಿಲಾಸವನ್ನು ನಾನೆಂದಿಗೂ ಮರೆಯುವಂತಿಲ್ಲ."

ನನ್ನ ಮಗ ಷಿಲ್ಲಾಂಗ್‌ನಲ್ಲಿ ಜಿಯಾಲಜಿ ಇಲಾಖೆಯಲ್ಲಿ ಉನ್ನತಾಧಿಕಾರಿಯಾಗಿದ್ದಾಗ, ಕೃಷ್ಣಕುಮಾರರನ್ನು ಕಂಡು, ಅವರ ಮಾತನ್ನು ಟೇಪಿನಲ್ಲಿ ಮುದ್ರಿಸಿ ಇರಿಸಿಕೊಂಡಿದ್ದಾನೆ. ವಿವರ ಹೀಗಿದೆ : "ಪುಸ್ತಕಗಳನ್ನು ಓದದೆ, ಅವುಗಳನ್ನು ಕಳುಹಿಸಿದವರೆದುರಿಗೆ ಜಳ್ಳು ಎಂದು ಹೇಳಿದ್ದಕ್ಕೆ ನಾನು ನಾಚಿದೆ. ಓದುತ್ತೇನೆ ಎಂದು ಒಪ್ಪಿ, ಬೀರು ಕಡೆ ತಿರುಗಿ ಎದ್ದೆ. ಅಷ್ಟರಲ್ಲಿ ಅವರು ಅದೃಶ್ಯರಾದರು. ಆದರೂ ಕೊಟ್ಟ ಮಾತು ಕಾಪಾಡಲು ಕೂತು ಮೂರನ್ನೂ ಕೂಲಂಕುಷವಾಗಿ ಓದಿದೆ. ಅಲ್ಲಿಯವರೆಗೆ ನಾನು ಮತ ಪ್ರವರ್ತಕರ, ಆಧ್ಯಾತ್ಮಿಕ ಗುರುಗಳ ಚರಿತ್ರೆಗಳ ಕಡೆ ಗಮನ ಇಟ್ಟಿರಲಿಲ್ಲ. ತತ್ವಶಾಸ್ತ್ರದ ಮೇಲೇನೆ ನನ್ನ ಆಸಕ್ತಿ ಅಭಿರುಚಿ. ಆದರೂ ಆ ಗ್ರಂಥಗಳಲ್ಲಿ, ಉಪನಿಷತ್ ಶಾಸ್ತ್ರದ, ಪೂರ್ವ ಪಶ್ಚಿಮ ತತ್ವವೇತ್ತರ ಸಿದ್ಧಾಂತಗಳ ಸಾರವನ್ನೇ ಸವಿದೆ. ಸರಳ ಸುಮಧುರ ಶೈಲಿ, ದಿವ್ಯ ಭವ್ಯ ಉಪದೇಶ, ಅಪರೂಪ ಸ್ಫೂರ್ತಿ - ಮೂರು ಕಂಡೆ ನಾನು ಆ ಗ್ರಂಥಗಳಲ್ಲಿ. ಹತ್ತು ದಿನಗಳು ಕಳೆದಿರಬಹುದು. ಪಾಣಿನಿಯ ಒಂದು ವ್ಯಾಕರಣ ಸೂತ್ರದೊಂದಿಗೆ ಹೆಣಗಾಡುತ್ತಿದ್ದೆ. ರಾತ್ರಿ ಹನ್ನೊಂದೂವರೆ ಗಂಟೆ. ಬಾಬಾ ಮತ್ತೆ ಬಂದರು. ಅದೇ ಕುರ್ಚಿಯಲ್ಲಿ ಕುಳಿತು, "ಪುಸ್ತಕಗಳನ್ನು ಓದಿ ಮುಗಿಸಿದಿ ಎಂದು ತಿಳಿಯಿತು" - ಎಂದರು. "ಹೌದು, ಓದಾಯಿತು". ನನಗೆ ಗೊತ್ತು ನಿನಗೆ ಅವು ತುಂಬಾ ಪ್ರಿಯವಾಗಿವೆ. ನನಗೆ ಆಗಲೇ ಗೊತ್ತಿತ್ತು; ಆದ್ದರಿಂದಲೇ ಕಳುಹಿಸಿದ್ದು ಓದಿದರೆ ಮನಸ್ಸಿಗೆ ಹಿಡಿಯುತ್ತದೆ."

ಪ್ರೇಮ, ಕರುಣೆ, ಆ ಮಾತುಗಳನ್ನು ರುಚಿಸುವಂತೆ ಮಾಡಿತು. ಅಂಥ ಮೃದು ಮಧುರ ವಾಕ್ಕು ನಾನೆಂದು ಕೇಳಿರಲಿಲ್ಲ. "ಈಗ ಮುಂದಕ್ಕೊಂದು ಕೆಲಸಮಾಡು. ಅವನ್ನು ಭಾಷಾಂತರ ಮಾಡು" - ಅಂದರು. "ಅಯ್ಯೋ ! ಅದು ಕಠಿನ ಕೆಲಸ" - ಎಂದೆ. "ಹೌದು, ಕಠಿನವೇ ! ಆದರೂ ನೀನು ಮಾಡಬಲ್ಲೆ, ಮಾಡು." ಆಗ ನಾನು ಎದ್ದು, ಪುಸ್ತಕ, ಕಾಗದ ತರಲು ಬೀರು ಕಡೆ ತಿರುಗಿದೆ. ಅಷ್ಟರೊಳಗೆ, ಅವರು ಅದೃಶ್ಯರಾದರು.

"ಭಾಷಾಂತರ?" ಯಾವ ಭಾಷೆಗೆ ಎಂದು ಅವರು ಹೇಳಲಿಲ್ಲ. ಅರುಣಾಚಲ ಪ್ರದೇಶದ ಸಾಮಾನ್ಯ ಜನರಾಡುವ "ಆದಿ" ಭಾಷೆಯೇ ? ಅಥವಾ ಹಿಂದಿಯೇ ? ಹಿಂದಿಯಾದರೆ ಅವರು ಲಕ್ನೋ ಕಡೆ ಹೋಗುತ್ತಿದ್ದರು. ನನ್ನ ಬಳಿ ಬಂದು ಬಲವಂತ ಮಾಡುತ್ತಿರುವುದು ಆದಿ ಭಾಷೆಗಾಗಿಯೇ ಎಂದು ನಿಶ್ಚಯಿಸಿ, ಕೈಂಕರ್ಯ ಪ್ರಾರಂಭ ಮಾಡಿದೆ.

ಆ ಭಾಷೆಯಲ್ಲಿ ಪದಸಾಮಾಗ್ರಿ ತೀರಾ ಕಡಿಮೆ. ಪದಾರ್ಥಗಳನ್ನು ಗುರುತಿಸುವ ಪದಗಳು ಸಿಗುತ್ತವೆ ; ತತ್ವಾರ್ಥ ಸೂಚಿಸುವ ಪದಬಂಧಗಳನ್ನು ನಾವೇ ನಿರ್ಮಿಸಬೇಕು. ಅಂತೂ ಒಂದು ಮಾತನ್ನು ಮನದಲ್ಲಿ ನಿಲ್ಲಿಸಿ, ಸಾಕೆ ಸಾಲದೆ - ಎಂದು ಸಂದೇಹಿಸುತ್ತಿದ್ದಾಗ, ಬಾಬಾ ಮತ್ತೆ ಬಂದರು. ಅದೇ ಕುರ್ಚಿಯಲ್ಲಿ ಕೂತರು ; ಅದೇ ಆನಂದಾಮೃತವರ್ಷಿಣೀ ವಾಣಿ ! "ಭಾಷಾಂತರ ಪ್ರಾರಂಭವಾಯಿತೆ ?" ತಲೆಯೆತ್ತಿ ನೋಡಿದರೆ, ಭವ್ಯ ದರ್ಶನ. "ತುಂಬಾ ಕಷ್ಟ ; ನನಗೆ ತೃಪ್ತಿ ಇಲ್ಲ. ಬೇಡಿ, ನನ್ನನ್ನು ಬಿಟ್ಟುಬಿಡಿ" - ಎಂದು ಅಂಗಲಾಚಿದೆ. ಆಗ ಅವರು ನನ್ನ ಭುಜದ ಮೇಲೆ ಕೈ ಇರಿಸಿ, "ನೀನು ಅಚ್ಚುಕಟ್ಟಾಗಿ ಮಾಡಬಲ್ಲೆ. ಏಕೆ ಹಿಂಜರಿಯುತ್ತೀ ? ಮಾಡೇ ತೀರಬೇಕಾದ ಕೆಲಸಗಳೆಲ್ಲವೂ ಕಷ್ಟವಾಗಿಯೇ ತೋರುತ್ತವೆ. ನಿನ್ನಿಂದ ಇದು ಸಾಧ್ಯ ; ಸಾಧ್ಯವಾಗುತ್ತಾ ಇದೆ' - ಎಂದರು. ಕಾಣದಾದರು.

ಇದರಿಂದ ನನ್ನ ಉತ್ಸಾಹ ಇಮ್ಮಡಿಸಿತು. ಮೂರನ್ನೂ ಭಾಷಾಂತರಿಸಿ ಸಂತುಷ್ಟನಾದೆ. 'ಆದಿ' ಆಡುವ ಹಳ್ಳಿಗರಿಗೆ ಓದಿದೆ ; ಅವರಿಗೆ ವಿಷಯ ಎದೆಗೆ ನಾಟಿತು. ಮತ್ತೊಂದು ಕೆಲಸವೂ ನಾನರಿಯದೆ ನಡೆದು ಹೋಯಿತು. ನನ್ನ ಭಾಷಾಂತರ ಕೂಡ ಸಮರ್ಪಕವಾಗಿ ಜರುಗಿತು. ಸ್ವಾಮಿ ಅನುಗ್ರಹಿಸಿದ ಮೂರು ಸಂದರ್ಶನಗಳಿಂದ, ದರ್ಶನ, ಸ್ಪರ್ಶನ, ಸಂಭಾಷಣೆಗಳಿಂದ, ನಾನು ಹೊಸಬನಾದೆ. ನನ್ನ ಕಚೇರಿ ಸ್ನೇಹ-ಸೌಹಾರ್ದದಿಂದ ತುಂಬಿತು. ನೌಕರರಿಗೆ ನಾನು ನವನೀತನಾದೆ. ಅವರನ್ನು ಅರಿತದ್ದರಿಂದ, ನನ್ನಲ್ಲಿನ ಆರು ಅರಿಗಳೂ ನಿಶ್ಚೇತನರಾಗುತ್ತಿದ್ದಾರೆ. "ಎಲ್ಲೋ ಹೇಗೋ ಯಾವುದನ್ನೋ ಆಶ್ರಯಿಸಿ, ಆತ್ಮನನ್ನೇ ಅಸಡ್ಡೆಯಿಂದ ಕಂಡ ನನ್ನನ್ನು, ಸ್ವಾಮಿ ಹುಡುಕಿ ಹರಸಿ ಉಳಿಸಿದರು. ಅವರ ಪ್ರೇಮ ಅಷ್ಟು ವಿಶಾಲ, ಅಷ್ಟು ಉಚಿತ. ನಾರ್ವೆಯಿಂದ ಬಂದ ಟಿಡಿಮನ್ ಎಂಬವರಿಗೆ ಸ್ವಾಮಿ, "ಈ ಹೊತ್ತಿನಿಂದ ನೀನು ಗುರುವನ್ನರಸಬೇಕಾಗಿಲ್ಲ ; ನಾನೇ ನಿನ್ನ ಮಾರ್ಗಬಂಧು." ಇಂದ್ರಾದೇವಿ ಮೆಕ್ಸಿಕೊದಿಂದ ಕರೆದು ತಂದ ಸಾಧಕನೊಬ್ಬ "ಸ್ವಾಮಿ ! ಪ್ರಶಾಂತಿ ನಿಲಯದ ಪುಣ್ಯ ವಾತಾವರಣದಲ್ಲಿ ಧ್ಯಾನ ಮಗ್ನನಾಗಿರುವಾಗ, ಆನಂದದ ಅಲೆಗಳು ಅನುಭವವಾಗುತ್ತವೆ" ಎಂದ. ಆಗ ಸ್ವಾಮಿ, "ಪರಮಾತ್ಮನಲ್ಲಿ ಐಕ್ಯವಾದಾಗಿನ ಆನಂದದ ಒಂದು ಅಗಳು ಅದು. ಪೂರ್ಣ ಸಂತರ್ಪಣೆಗಾಗಿ ಪ್ರಯತ್ನಿಸು" - ಎಂದರು. ಧೈರ್ಯ, ದಾರ್ಢ್ಯ, ಧೀಶಕ್ತಿ, ಧರ್ಮಬುದ್ಧಿ - ಇವನ್ನೆಲ್ಲ ಕೊಡುವ ದಣಿ ಅವರು.

ಲೋಕ ಸಂಗ್ರಹವೇ ಈ ಅವತಾರದುದ್ದೇಶ. ಪ್ರೇಮದಿಂದ ನಿತ್ಯಜೀವನವನ್ನು ತುಂಬಿರಿ ಆಗದಲೇ ನೀವು ಭಕ್ತರೆನಿಸಿಕೊಳ್ಳಲರ್ಹರು. ತೋರಿಕೆಗಾಗಿ ಯಾವುದನ್ನೂ ಮಾಡಬಾರದು. ನಿಮಗೆ ನೀವು ಮೋಸಮಾಡಬೇಡಿ, ನಿಮ್ಮ ಮಾತು, ನಿಮ್ಮ ಆಚರಣೆ ಅನ್ಯೋನ್ಯ ಪೂರಕವಾಗಿರಬೇಕು. ಇಲ್ಲದಿದ್ದರೆ ಅಂತರ್ಯಾಮಿ ದೇವರಿಗೆ ಅಪರಾಧ ಮಾಡಿದಂತೆ."

"ನಾನೇ ನೀವೆಲ್ಲ, ನನ್ನದೇ ಈ ಪ್ರಪಂಚ, ನಾನಿಲ್ಲದ ಜಾಗವಿಲ್ಲ ಎಂಬ ವಿಶ್ವಾಸವನ್ನು ನಿಮ್ಮಲ್ಲಿ ಬೇರೂರಿಸಲು ನಾನು ಸಂಕಲ್ಪಿಸಿದ್ದೇನೆ. ಆ ವಿಶ್ವಾಸ ನಿಮ್ಮಲ್ಲಿ ದೃಢವಾದರೆ, ಅಸತ್ಯ, ಅಧರ್ಮ, ಅನ್ಯಾಯ, ಅಕ್ರಮಗಳಲ್ಲಿ ನಿಮ್ಮ ಆಸಕ್ತಿ ಅಸ್ತಮಿಸುತ್ತದೆ."

ಅಂಥ ದಿವ್ಯ ಬೋಧೆಯನ್ನು ಕೇಳಿದ, ಪಾಶ್ಚಾತ್ಯ ದೇಶದಿಂದ ಬಂದ ಭಕ್ತರು, ಆಂಗ್ಲಭಾಷೆಯಲ್ಲಿ ಒಂದು ಕೀರ್ತನೆ ರಚಿಸಿ, ಅಪ್ಪಣೆ ಪಡೆದು ಸಮ್ಮೇಳನದಲ್ಲಿ ಹಾಡಿ ಹರ್ಷಗೊಂಡರು.

ಸಾಯಿ ಬಾಬಾ !ಸಾಯಿ ಬಾಬಾ ! ಎಂಥ ದಯಾ ! ಎಂಥ ದಯಾ !

ತಾಯಿ ತಂದೆ ಅವರೇ ನಮ್ಮ ಸೋದರಾ ಸೋದರಿ

ಅವರೇ ಎಲ್ಲ, ಅವರೇ ಎಲ್ಲ, ಅನ್ಯರೇ ಇಲ್ಲ

ನಾವಿದ್ದದ್ದೆಲ್ಲ ಅವರಲ್ಲೇ ಅವರಿಂದಲೇ

ನಾವಿರುವುದೆಲ್ಲ ಅವರಲ್ಲೇ ಅವರಿಂದಲೇ

ಕಣ್ಣಿದ್ದೂ ಕಾಣದ್ದನ್ನ ಕಾಣುವುದರಿಂದಲೇ

ಸಾಯಿ ಬಾಬಾ ! ಸಾಯಿ ಬಾಬಾ ! ಎಂಥ ದಯಾ ! ಎಂಥ ದಯಾ !

ಕಣ್ಣೆಂಬ ಇಂದ್ರಿಯದ ಶಕ್ತಿ ತೀರ ಅಲ್ಪ. ಕೆಂಪಿನ ಕೆಳಗೆ, ವಯಲೆಟ್ಟಿನ ಆಚೆ, ಹಾಯುವ ಕಿರಣಗಳನ್ನು ಗ್ರಹಿಸುವ ಶಕ್ತಿ ಅದಕ್ಕಿಲ್ಲ. ಅದೂ ಅಲ್ಲದೆ, ಕಣ್ಣಿಗೆ ಬಯಸಿದ್ದೇ ಬಯಲು ; ಅದು ಮನಸ್ಸಿನ ಮನೆ ಆಳು. ಹತ್ತಿದ್ದರೆ, ಕಣ್ಣಿಗೆ ಹನ್ನೊಂದು ಕಾಣಿಸುತ್ತದೆ. ಹತ್ತೂ ಒಂದು ಎಂಬುದನ್ನದು ಕಾಣದು. ಸಾಯಿ ದೃಷ್ಟಿ ನಮ್ಮ ಮೇಲೆ ಬಿದ್ದಾಗ ಮಾತ್ರ, ಅನೇಕತ್ವದಲ್ಲಿ ಏಕತ್ವ ಗೋಚರವಾಗುತ್ತದೆ, ಎಂಬುದು ಆ ಪಾಶ್ಚಾತ್ಯರು ತಿಳಿದುಕೊಂಡ ಸತ್ಯ.

ಜನ್ಮದಿನೋತ್ಸವದ ನಂತರ, ಸ್ವಾಮಿ ಬೆಂಗಳೂರು ಬೃಂದಾವನಕ್ಕೆ ಪ್ರಯಾಣ ಮಾಡಿದರು. ಮುಂದಿನ ತಿಂಗಳು ಡಿಸೆಂಬರ್.

ಆಗ ನಡೆದ ಮಹಾದ್ಭುತ ಲೀಲಾ ನಾಟಕ ಯಾವ ಪುರಾಣದಲ್ಲೂ ಇಲ್ಲ ; ಯಾವ ನವೀನದಲ್ಲೂ ಇಲ್ಲ ! ಅಂಥದನ್ನು ರವಿಯೂ ಕಂಡಿರಲಿಲ್ಲ, ಕವಿಯೂ ಕಂಡಿರಲಿಲ್ಲ.



ಓದಿ ಮುಂದಿನ ಅಧ್ಯಾಯ.

# ಕನಿಕರದ ಕರುಳು

"ನಿಮ್ಮ ವಾಗ್ದಾನಂತೆ ನೀವು ಶ್ರೀಲಂಕೆಗೆ ಬರುತ್ತೀರಿ ಎಂದು ನಾವು ನಿರೀಕ್ಷಿಸುತ್ತಿದ್ದೆವು. ಆದರೆ ಬರುವುದಿಲ್ಲ ಎಂಬ ನಿಮ್ಮ ತಂತಿ ನಿನ್ನೆ ತಲುಪಿದಾಗ, ಸ್ವಾಮಿಯ ಮೇಲೆ ನಮಗಿದ್ದ ನಂಬಿಕೆ ಇಮ್ಮಡಿಸಿತು". ಭಗವಾನ್ ಶ್ರೀ ಸತ್ಯಸಾಯಿ ಸೇವಾ ಸಮಿತಿ, ಕೊಲಂಬೋ ಮಹಾನಗರ, ಇದರ ಅಧ್ಯಕ್ಷ ಮಹಾಶಯ ನನಗೆ ಹೀಗೆ ಬರೆದರು! ಇದು ಬೇಜವಾಬ್ದಾರಿ ಹಾಗಿರಲಿ, ಬೇಮರ್ಯಾದೆ ಕೂಡ, ಅಲ್ಲವೆ?

ಶ್ರೀಲಂಕಾ ದ್ವೀಪದಲ್ಲಿನ ಹತ್ತಾರು ಸಮಿತಿಗಳ ಆದರಾಹ್ವಾನದ ಮೇರೆಗೆ, ಸ್ವಾಮಿ ನನಗೆ ಹೋಗಿ ಬರುವಂತೆ ಅನುಮತಿ ದಯಪಾಲಿಸಿದ್ದರು. ಅದನ್ನೊಂದು ತೀರ್ಥಯಾತ್ರೆ ಎಂದು ಭಾವಿಸಿ, ನಾನೂ ಸರ್ವಸಿದ್ಧತೆಗಳನ್ನು ಅಳವಡಿಸಿಕೊಂಡು, ರೈಲುಟಿಕೆಟ್ಟು, ಏರೋಪ್ಲೇನ್ ಟಿಕೆಟ್ಟು, ಬ್ಯಾಗು, ಕೈ ಚೀಲ, ವಿ.ಐ.ಪಿ. ಪೆಟ್ಟಿಗೆ ಸಹಿತ, ವೈಟ್‌ಫೀಲ್ಡು ಬೃಂದಾವನಕ್ಕೆ ಹೋದೆ. ಆ ರಾತ್ರಿ ಮದ್ರಾಸ್ ಮೆಯಿಲ್ ಗಾಡಿ ಎತ್ತಿ ಪ್ರಯಾಣ ಪ್ರಾರಂಭಿಸುವುದೆಂತ. ಜಯಪ್ರದವಾಗಿ ಹೋಗಿ ಬಾ, ಎಂಬ ಆಶೀರ್ವಚನಕ್ಕಾಗಿ, ಸ್ವಾಮಿಯ ಪಾದ ಮುಟ್ಟಿ ನಮಸ್ಕಾರ ಮಾಡಿದೆ.

"ಎಲ್ಲಿಗೆ?" "ಶ್ರೀಲಂಕೆಗೆ ಹೊರಟಿದ್ದೇನೆ ಸ್ವಾಮಿ". "ಏಕೆ? ಲಂಕೆ ಬೇಡ. ಅವರಿಗೊಂದು ಟೆಲಿಗ್ರಾಂ ಕೊಡು. ನಾಳೆ ನನ್ನ ಜೊತೆಗೆ ಗೋವಾಗೆ ಬಾ". ಆ ನನ್ನ ತಂತಿ ಸಿಕ್ಕಿದಾಗ, ಕೋಲಂಬೋದವರು ನನಗೆ ಬರೆದ ಪತ್ರವನ್ನೇ ನಾನು ಆಗಲೇ ಉದಹರಿಸಿದ್ದು. ಶ್ರೀ ತ್ಯಾಗರಾಜಯ್ಯ, ಅದರಲ್ಲಿ ನನಗೆ ತಿಳಿಸಿದ್ದು ಹೀಗೆ: "ನೀವು ನಮ್ಮ ಆಹ್ವಾನವನ್ನು ಮನ್ನಿಸಿ, ಈ ದ್ವೀಪದಲ್ಲಿ ಹತ್ತು ದಿನಗಳು ನಮ್ಮೊಂದಿಗಿದ್ದು, ನಾವು ರೂಪಿಸಿರುವ ಕಾರ್ಯಕ್ರಮದಂತೆ ಉಪನ್ಯಾಸ ಕೊಡಲು ಒಪ್ಪಿರುವುದಕ್ಕೆ ತುಂಬಾ ಸಂತೋಷ ಪಟ್ಟೆವು. ಆದರೆ ಆ ಪತ್ರವನ್ನು ಸರ್ವ ಸದಸ್ಯರ ಸಭೆ ಮುಂದೆ ಓದಿ ಮುಗಿಸಿದ ಕೂಡಲೇ, ಡಾ| ನಲ್ಲೈನಾದನ್ ಮಾತಾಡಿ," ಕಸ್ತೂರಿಗಳೇನೋ ಸಂತೋಷದಿಂದ ಸಮ್ಮತಿಸಿ ಪತ್ರ ಕಳುಹಿಸಿದ್ದಾರೆ. ಆದರೆ ನನ್ನ ಮಾತು ಕೇಳಿ; ಅವರು ಬರದೇನೇ ಇರಬಹುದು. ಕೈಗೆ ಬಂದ ತುತ್ತು ಬಾಯಿಗೆ ಬರುವ ಮಧ್ಯ ಜಾರಿ ಬೀಳುವುದೂ ಉಂಟು! ಇನ್ನೇನು ಬಂದರು ಅನ್ನುವಷ್ಟರಲ್ಲೇ ಬರುವುದಿಲ್ಲ ಎಂಬ ತಂತಿ ಬಂದೀತು" - ಎಂದು ಅಪಶಕುನ ನುಡಿದರು. ನಿಮ್ಮ ತಂತಿ ಬಂದಾಗ, ನಮಗೆ ಅರ್ಥವಾಯಿತು. "ಸಾಯಿ ವಿನಾ ತೃಣಮಪಿನ ಚಲತಿ" -ಅಂತ ನಲ್ಲೈನಾದನ್ ಬಾಯಲ್ಲಿ ಅಷ್ಟ ಮಾತನ್ನಾಡಿಸಿದವರು ಸ್ವಾಮಿ ಎಂಬುದು ಸ್ಪಷ್ಟವಾಯಿತು!

ಮರುದಿನ ಮಧ್ಯಾಹ್ನ ಮೂರು ಕಾರುಗಳು ಗೋವಾ ನಗರಗಳನ್ನು ಗುರಿಯಾಗಿರಿಸಿಕೊಂಡು, ಜೋಗದ ಜಲಪಾತ, ಕಾರ್ವಾರ್ ಮಾರ್ಗದಲ್ಲಿ ಹೊರಟವು. ಅಮೆರಿಕಾದ ಕ್ಯಾಲಿಫೋರ್ನಿಯಾ

ಸಂಸ್ಥಾನದಿಂದ ಬಂದಿದ್ದ ಮೂರು ಸೋದರಿಯರೂ ನಮ್ಮ ಜೊತೆ ಇದ್ದರು. ಜಾನ್ ಫೂಯಿಲರ್ ಎಂಬ ಟೀಚರ್, ಇಂದ್ರಾದೇವಿ ಎಂಬ ಯೋಗಶಾಸ್ತ್ರ ವಿದುಷಿ, ಶ್ರೀಮತಿ ರಾಜಗೋಪಾಲನ್ ಎಂಬ ಇಟಲಿ ದೇಶದ ಮಹಿಳೆ, ಭಾರತೀಯ ತತ್ತ್ವಶಾಸ್ತ್ರ ವಿದಗ್ಧ ಹಾಗೂ ಪ್ರಬೋಧಕ ಶ್ರೀಜಿಡ್ಡು ಕೃಷ್ಣಮೂರ್ತಿಯವರ ಆಪ್ತಕಾರ್ಯದರ್ಶಿ ಓಹಾಯಿ ನಿವಾಸಿ ಶ್ರೀ ರಾಜಗೋಪಾಲನ್ ಅವರ ಗೃಹಲಕ್ಷ್ಮಿ. ಬೃಂದಾವನದಿಂದ ಹೊರಟಾಗ ಭಕ್ತರು, ಎಡಬಲಗಳಲ್ಲಿ ವಿರಹತಾಪದಿಂದ ಬಾಡಿದ ವದನ ತೋರಿಸುತ್ತ ಕೈ ಬೀಸುತ್ತಿದ್ದರು. ತುಮಕೂರು ದಾಟಿ ತಿಪಟೂರು ಕಡೆಗೆ ಕಾರುಗಳು ಧಾವಿಸಿದುವು. "ವಿಶಾಲ ಪ್ರಪಂಚ, ಶಾಂತ ವಾತಾವರಣ, ಪಕ್ಷಿಗಳ ಚಿಲಿಪಿಲಿ, ಎಮ್ಮೆಗಳ ಧೈರ್ಯ, ಎಲ್ಲವೂ ನಮಗೆ ತೀರ ಹೊಸತೆನಿಸಿದುವು" - ಎಂದು ಬರೆದಿದ್ದಾಳೆ ನನಗೆ, ಆ ಟೀಚರ್. " ಶಾಂತಿ ನನಗೆ ಬಹಳ ವರ್ಷಗಳಿಂದ ದೂರದ ಕನಸಾಗಿತ್ತು. ಆ ಕನಸು ನನಸಾದದ್ದು ಸ್ವಾಮಿ ಸನ್ನಿಧಿಯಲ್ಲೇ" - ಎಂದಿದ್ದಾಳೆ.

ತಿಪಟೂರು ದಾಟಿದ ಕೂಡಲೇ, ಸ್ವಾಮಿ, ಕಾರುಗಳನ್ನು ಬಲಗಡೆಗೆ ಹೋಗುತ್ತಿದ್ದ ಒಂದು ಮಣ್ಣಿನ ರಸ್ತೆಹಿಡಿಯುವಂತೆ ಹೇಳಿದರು. ಅಲ್ಲಿ ಸಿಕ್ಕಿದ ಒಂದು ಕೆರೆ ಅಂಚಿನಲ್ಲಿ ನಿಲ್ಲಿಸಿದರು. ಕಾರಲ್ಲಿದ್ದ ಟಿನ್ನುಗಳು, ಟಿಫನ್ ಕ್ಯಾರಿಯರ್‌ಗಳನ್ನು ತಾವೇ ತೆಗೆದು, ತೆರೆದು, ಕುಳಿತಿದ್ದ ನಮ್ಮ ತಟ್ಟೆಗಳನ್ನು ತುಂಬಿದರು. ಡ್ರೈವರುಗಳೂ ನಮ್ಮ ಸಾಲಲ್ಲೇ ಕುಳಿತು ನಮ್ಮ ಜೊತೆಗೆ ತಿಂದರು. ಗುಂಪನ್ನೂ, ಗುಂಪಿನ ನಡುವಣ ಮೋಹನ ಸ್ವರೂಪವನ್ನೂ ಕಂಡು, ಬಿಟ್ಟ ಕಣ್ಣು ಬಿಟ್ಟ ಹಾಗೆ ನಿಂತಿದ್ದ, ಎಂಟು ಹತ್ತು ರೈತರಿಗೂ ಕೈತುಂಬ ಪ್ರಸಾದ ದೊರೆಯಿತು.

ಮತ್ತೆ ಕಾರು ಹತ್ತಿ ಹೊರಟಾಗ, ಸ್ವಾಮಿಯ ಕಾರು ಟಾರ್ ರಸ್ತೆಯ ಮೇಲೆ ಹರಿಯಲು ಹಿಂಜರಿಯಿತು. ಸಾಮೋಪಾಯದಿಂದಲೇ ಅರ್ಧ ಮೈಲಿ ಮುಂಬರಿಯಿತು. ಜೋಗ ೧೨೦ ಮೈಲಿ ಆಚೆ ಇದೆ, ಎಂದು ಅದಕ್ಕೆ ಗೊತ್ತಾಯಿತೋ ಏನೋ. ರಾತ್ರಿ ೮ ಗಂಟೆ ಹೊತ್ತಿಗೆ ಮೊಂಡು ಹಿಡಿದು, ಇದ್ದ ಸ್ಥಾನದಿಂದ ಕದಲಲೇ ಇಲ್ಲ. "ವಾಪಾಸ್ ಹೋಗೋಣ. ಜೋಗದ ಪ್ರವಾಸೀ ಮಂದಿರದ ವಾತಾವರಣ ಇವತ್ತು ಸರಿಯಿಲ್ಲ", - ಎಂದು ಹೇಳಿ, ಸ್ವಾಮಿ ಕಾರನ್ನು ಹಿಮ್ಮುಖ ತಿರುಗಿಸಿದಾಗ, ಸಲೀಸಾಗಿ ತಂಟೆ ತಕರಾರಿಲ್ಲದೆ, ಮೂರು ಕಾರುಗಳೂ ಬೃಂದಾವನ ತನಕ ಓಡಿದುವು.

ಸ್ವಾಮಿಯ ಅಂತರಂಗ, ಜೋಗದ ಯಾತ್ರೆಯನ್ನನುಮೋದಿಸಲಿಲ್ಲ. ನಮ್ಮಲ್ಲಿ ಯಾರಿಗೂ ಆಶಾಭಂಗವಾಗಿಲಿಲ್ಲ. ಸ್ವಾಮಿಯ ಸಾನ್ನಿಧ್ಯ ಅಷ್ಟು ಗಂಟೆಗಳ ಕಾಲ ಸಿಕ್ಕಿತಲ್ಲಾ; ಅದೇ ನಮಗೆ ಸಾವಿರ ಜೋಗಗಳು! ಜಾನ್ ಬರೆಯುತ್ತಾಳೆ; "ಬೆಂಗಳೂರಿಗೆ ಹಿಂದಿರುಗುತ್ತಿದ್ದಾಗ, ಒಂದು ನಕ್ಷತ್ರ ಬಿತ್ತು. ನಾನು ಚಕಿತಳಾದೆ. ಸ್ವಾಮಿಯ ಗಮನವನ್ನು ಆ ನಕ್ಷತ್ರ ಸೆಳೆಯಿತು. ಅವರ ಸಂಕಲ್ಪದಿಂದಲ್ಲದೆ

ಅದು ಬೀಳುವುದು ತಾನೆ ಹೇಗೆ? ದಾರಿ ಯುದ್ದಕ್ಕೂ, ಸ್ವಾಮಿ ಮಧುರ ಸ್ವರದಿಂದ ಹಾಡುತ್ತಲೇ ಇದ್ದರು. ಆ ಹಾಡು ಕೇಳಲು ತಾರೆ ಇಳಿದು ಬಂತೋ ಏನೋ?"

ಬೃಂದಾವನದಲ್ಲಿ ಎಲ್ಲರೂ ಊಟ ಮುಗಿಸಿ, ನಮ್ಮ ನಮ್ಮ ಬಿಡಾರಗಳನ್ನು ಮತ್ತೆ ಪ್ರವೇಶಿಸಿ ನಿದ್ರೆ ಮಾಡಿದೆವು. "ಭಾನುವಾರ ಉದಯಂ ನಾನು ಎದ್ದಾಗ, ನನ್ನ ಮನಸ್ಸು ತುಮುಲದಲ್ಲಿ ತಾಂಡವಾಡಿತು! ಏಕೆ ಹೀಗಾಯಿತು? ಕಾರು ಏಕೆ ತಂಟೆ ಮಾಡಿತು? ಜೋಗ ಏನು ಪಾಪ ಮಾಡಿತ್ತು? ವಾಪಸ್ ಬರುವಾಗ ಸ್ವಾಮಿ, "ಜೋಗ್"ನ್ನು "ಜೋಕ್" ಎಂದು ತಿರುಗಿಸಿ ನಗಿಸಿದ್ದರ ಅಂತರಾರ್ಥವೇನು?" - ಎಂದೆಲ್ಲ ಸಂದೇಹಿಸಿ ನಾನು ತಲೆ ಕೆಡಿಸಿಕೊಂಡೆ", ಎಂದು ಬರೆದಿದ್ದಾಳೆ, ಜಾನ್! " ಆ ದಾರಿ ತುಂಬಾ ಬಳಸು, ದ್ರಾವಿಡ ಪ್ರಾಣಾಯಾಮ, ಶಿವಮೊಗ್ಗ, ಭದ್ರಾವತಿ, ಸಾಗರ, ಸೊರಬ ದಾಟುವಾಗ ಕಗ್ಗತ್ತಲೆ. ಅಲ್ಲಿಯವರೆಲ್ಲ ಸ್ವಾಮಿ ಅವರ ಊರು ಹಾದು ಹೋದರೆಂದು ಕೇಳಿದಾಗ, ಅಯ್ಯೋ, ದರ್ಶನ ಸಿಗಲಿಲ್ಲವಲ್ಲಾ, ಎಂದು ಪರಿತಪಿಸುತ್ತಾರೆ, ಎಂದೆಲ್ಲ ಸ್ವಾಮಿ ಹೇಳಿದ್ದರು, ಹಿಂದಿರುಗಿದಾಗ,

ಅವರದೇ ತೀರ್ಮಾನ, ಹೋದದ್ದು ಬಂದದ್ದು ಎರಡೂ ಜೋಗ್ ಬೇಡ, ಜೋಕ್ ಸಾಕು ಎಂಬ ನಿರ್ಣಯ ಅವರದೇ! ಪುನಃ ಸೋಮವಾರ, ಎರಡು ಕಾರುಗಳು ಗೋವಾ ನಗರಕ್ಕೆ ಪ್ರಯಾಣ ಪ್ರಾರಂಭಿಸಿದುವು. ದಾರಿ ಉದ್ದಕ್ಕೂ ಆಧ್ಯಾತ್ಮ ಬೋಧೆ, ಪ್ರಶ್ನೋತ್ತರ ಪ್ರವಾಹ, ಗಾನವಾಹಿನಿ, ಹಾಸ್ಯವಿಲಾಸ! ಹಾವೇರಿ ಹತ್ತಿರ ಕೈ ಆಡಿಸಿ, ನೇರಳೆ ಹಣ್ಣಿನ ಸೃಷ್ಟಿ." ಯಮುನಾ ತೀರದಲ್ಲಿ ಈ ಹಣ್ಣನ್ನೇ ನಾನು ನನ್ನ ಜೊತೆ ಹುಡುಗರಿಗೆ ಕೊಡುತ್ತಾ ಇದ್ದೆ"- ಎಂಬ ಚಮತ್ಕಾರದ ಚಕಮಕಿ! ಮಟ ಮಟ - ಮಧ್ಯಾಹ್ನ ಎರಡು ಗಂಟೆಗೆ ಧಾರವಾಡ ತಲುಪಿ, ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿ ಡಾ| ಅಣ್ಣಾ ಸಾಹೇಬ ಅಡ್ಕೆಯವರ ಬಂಗಲೆಯ ಮುಂದೆ ಇಳಿದೆವು.

ಭೋಜನ ಮುಗಿಸಿದ ನಂತರ ........ ಅವತಾರ ಪುರುಷನಿಗೆ ವಿಶ್ರಾಂತಿ ಹೇಗೆ ದೊರಕೀತು? ಅತಿಥಿಗಳಾಗಿ ಸ್ವಾಮಿಯ ಸಹ ಪಂಕ್ತಿಗಳಾಗಲು ಬಯಸಿ ಬಂದ ಬಿರುದಾಂಕಿತರು, ಬಿಡುವಿಲ್ಲದೆ ತಮ್ಮ ಸಮಸ್ಯೆಗಳನ್ನು ಸ್ವಾಮಿಯ ಮುಂದಿರಿಸಿ ಪರಿಹಾರ ಬೇಡಿದರು.

"ಏಸುಕ್ರಿಸ್ತ ಹೀಗೆಯೇ, ಇಷ್ಟೇ ಕನಿಕರದಿಂದ ಪ್ರಶ್ನೆಗಳಿಗೆ ಸಮಾಧಾನ ನೀಡಿರಬೇಕು. ಅವರು ಆಡುವ ಮಾತು ನನಗೆ ತಿಳಿಯದು; ಆದರೆ ಅದರ ಸಾರವನ್ನು ಗ್ರಹಿಸುತ್ತಿದ್ದೆ"- ಎನ್ನುತ್ತಾಳೆ ಜಾನ್.

ಕೂಡಲೇ ನಾವು ಗೋವಾಭಿಮುಖವಾಗಿ ಹೊರಟೇ ಬಿಟ್ಟೆವು. ಸ್ವಾಮಿಯ ಸಂಗಡ ಆ ಫಿಯಟ್ ಕಾರಲ್ಲಿ ನಾನು, ಕರ್ನಾಟಕ ವಿದ್ಯುಚ್ಛಕ್ತಿ ಬೋರ್ಡು ಚೇರ್ಮನ್ ಶ್ರೀ ಅಪ್ಪಾ - ಇಬ್ಬರೇ ಇದ್ದೆವು.

ರಾಜಾರೆಡ್ಡಿಯವರು ಚಾಲಕರು. ರಸ್ತೆ ದುರಸ್ತಾಗದೆ, ಹಳ್ಳ ದಿಣ್ಣೆಗಳು ಸಾಲಾಗಿ ಸಿಕ್ಕಿದುವು. 'ಸ್ಲೋ! ಸ್ಲೋ' - ಎಂದು ಹಿಂದಿನ ಸೀಟಿನಿಂದ ಸ್ವಾಮಿ ರೆಡ್ಡಿಯವರನ್ನು ಎಚ್ಚರಿಸುತ್ತಲೇ ಇದ್ದರು. "ತುಂಬಾ ಪಷ್ಟ ಸ್ವಾಮಿ, ನಮಗೂ"- ಎಂದು ನಾನು ದನಿ ಕೂಡಿಸಿದೆ. ಆಗ ಸ್ವಾಮಿ ಹೇಳಿದರು, "ಎತ್ತಿ ಕುಕ್ಕುತ್ತದೆ ಇಲ್ಲಿ, ನನ್ನ ಸೀಟು. ಹೊಟ್ಟೆಯಲ್ಲಿನ ಒದ್ದಾಟ ನಿಮಗೆ ಹೇಗೆ ತಿಳಿಯುತ್ತೆ!"

ಸೂರ್ಯಾಸ್ತಮನ ಮುಹೂರ್ತ! ಪಶ್ಚಿಮ ಘಟ್ಟದ ಬೆಟ್ಟಗಳನ್ನು ಪೂರ್ವದಿಕ್ಕಿನಿಂದ ಹತ್ತುತ್ತಿದ್ದೆವು. ಇಕ್ಕೆಲದ ಹೆಮ್ಮರಗಳು ಉದ್ದನೆಯ ನೆರಳನ್ನು ರಸ್ತೆ ಗಡ್ಡ ಹಾಸಿದುವು. ತುತ್ತ ತುದಿಗೇರಿದಾಗ, ಸೂರ್ಯ ಸಮುದ್ರ ಸ್ನಾನಕ್ಕೆ ಸಿದ್ಧನಾದ. ಪಾಪ, ಎನಿಸುತ್ತದೆ ಯೋಚನೆ ಮಾಡಿದರೆ. ಒಂದು ದಿನ ಕೂಡ ರಜ ತೆಗೆದುಕೊಳ್ಳದೆ, ಸೂಟಿ ಅನುಭವಿಸಿದೆ, ಸ್ಟ್ರೈಕ್ ಮಾಡದೆ, ಖಾಯಿಲೆ ಬೀಳದೆ, ಈ ಸೂರ್ಯ ಲೆಕ್ಕಾಚಾರದಂತೆ ಎದ್ದು ಬಿದ್ದು ಒದ್ದಾಡುತ್ತಿದೆಯಲ್ಲಾ! ಕತ್ತಲೆ ಕವಿದರೂ, ಗೂಬೆ ಕೂಗಿದರೂ, ಕಳ್ಳ ನುಗ್ಗಿದರೂ ಬೆಳಗಾಗುತ್ತದೆ ಎಂಬ ಭರವಸೆ ಭಗವಂತ ನೀಡುತ್ತಿದ್ದಾನಲ್ಲಾ ಅದೂ ಅವನ ಕೃಪೆ ಎಂದು ನಾನು ಸ್ವಾಮಿಗೆ ಕೈ ಮುಗಿದೆ.

ಗೋವಾ ಗಡಿ ಸೇರಿದಾಗ ಎಂಟೂವರೆ ಗಂಟೆ. ನಮ್ಮ ಕಾರುಗಳ ಜೊತೆ, ಆಕಾಶದ ನಕ್ಷತ್ರ ಮಾಲೆಗಳೂ ಗೋವಾನಗರಕ್ಕೆ ಬಂದವು. ಆ ರಾಜ್ಯದ ಗಡಿಯಲ್ಲೇ ಶ್ರೀ ನಕಲ್‌ಸೇನ್ ಎಂಬ ಅಲ್ಲಿಯ ಗವರ್ನರು ಸ್ವಾಮಿಯನ್ನು ಸ್ವಾಗತಿಸಿದರು. ಅಲ್ಲಿದ್ದ ವಿಶ್ರಾಂತಿ ಭವನದಲ್ಲಿ ನಮಗೆ ಕಾಫಿ ಸತ್ಕಾರ ನಡೆಯಿತು. ತರುವಾಯ ಕಾರುಗಳು, ಅಂಕು ಡೊಂಕು ರಸ್ತೆ ಮೇಲೆ ಬಳಸಿಕೊಂಡು, ಒಂಬತ್ತು ಕಾಲು ಗಂಟೆಗೆ "ಕಾಬೊ ರಾಜ ನಿವಾಸ್"- ಎಂಬ ರಾಜಭವನ ಸೇರಿದುವು. ಬೆಂಗಳೂರು ಬೃಂದಾವನದಿಂದ ನಾವು ಆ ದಿನ ೩೮೫ ಮೈಲಿಗಳು ಕಾರಲ್ಲೇ ಪ್ರಯಾಣ ಮಾಡಿದ್ದೆವು. ಒಂದೇ ಉಸಿರಿಗೆ ಎಲ್ಲೂ ನಿಲ್ಲದೆ ಗೋವಾ ತಲಪಬೇಕೆಂದು ಸ್ವಾಮಿ ಒತ್ತಾಯ ಪಡಿಸುತ್ತಿದ್ದರು.

ಆ ರಾಜಭವನ ಒಂದು ಪುರಾತನ ಸೌಧ. ಪೋರ್ಚುಗೀಸರು ತಮ್ಮ ಗವರ್ನರ್ ಜನರಲ್‌ರವರ ನಿವಾಸಕ್ಕಾಗಿ ಮೂರು ಶತಮಾನಗಳ ಹಿಂದೆ ನಿರ್ಮಿಸಿದ್ದು. ಭವ್ಯ ಸ್ವರೂಪದ ಒಂದು ಕ್ರೈಸ್ತ ಮಂದಿರವೂ ಇತ್ತು, ಅದರ ಒಂದು ಮುಖ್ಯ ಪಾರ್ಶ್ವದಲ್ಲಿ . ೧೮ ಮೆಟ್ಟಿಲುಗಳನ್ನು ಹತ್ತಿ, ಭವನದ ದರ್ಬಾರ್ ಹಾಲ್ ಹಾದು, ಸ್ವಾಮಿಗಾಗಿ ಪ್ರತ್ಯೇಕಿಸಿದ ಪುಷ್ಪಾಲಂಕೃತ ಕೋಣೆಗಳಿಗೆ ಗವರ್ನರ್ ದಂಪತಿಗಳು ಭಗವಾನರನ್ನು ಸ್ವಾಗತಿಸಿದರು. ನಮಗೂ ಪ್ರತ್ಯೇಕ ಕೋಣೆಗಳನ್ನು ತೋರಿಸಿದರು.

ರಾಜಭವನದ ಭೋಜನ ವೈಭವ ಆ ರಾತ್ರಿ ಭಗವತ್ಸನ್ನಿಧಿಯಿಂದ ನೂರ್ಮಡಿಗೊಂಡಿತ್ತು. ಸಮವಸ್ತ್ರದ ಪರಿಚಾರಕರು, ಪೋರ್ಚುಗೀಸ್ ಗೌವರ್ನರುಗಳು ತಮ್ಮ ಸ್ರಾಮಾಜ್ಯದ ಇತರ ಪ್ರದೇಶಗಳಿಂದ ಸಂಪಾದಿಸಿದ ಸುಂದರಾಲಂಕೃತ ಬೆಳ್ಳಿ, ಬಂಗಾರ, ಪಿಂಗಾಣಿ ತಟ್ಟೆ, ಥಾಲಿ, ಬಟ್ಟಲು, ಚಮಚ, ಇತ್ಯಾದಿ ಅಮೂಲ್ಯ ವಸ್ತುಗಳು ಊಟವನ್ನೇ ಮೆರುಗುಪಡಿಸಿದುವು.

ಆದರೆ ಸ್ವಾಮಿ ಮಾತ್ರ ಏನನ್ನೂ ಭುಜಿಸಲಿಲ್ಲ. ಅತಿಥ್ಯವಿತ್ತ ದಂಪತಿಗಳು ಎಷ್ಟು ಬೇಡಿದರೂ, ದೇವರು ನೈವೇದ್ಯ ಸ್ವೀಕರಿಸಲಿಲ್ಲ. "ಹೋಗಿ ಮಲಗಿಕೊಳ್ಳಿ, ಪಾಪ! ತುಂಬಾ ಆಯಾಸ ಪಟ್ಟಿದ್ದೀರಿ. ಒಂದೇ ಸಮನೆ ಪ್ರಯಾಣ. ರಸ್ತೆಕೂಡ ಚೆನ್ನಾಗಿರಲಿಲ್ಲ" - ಎಂದು ನಮ್ಮನ್ನು ಬಲವಂತಪಡಿಸಿದರು. "ತಮ್ಮ ಜೊತೆ ಇದ್ದಾಗ, ನಮಗೆ ಆಯಾಸ ಹೇಗಾಗಬೇಕು?"- ಎಂದು ನಾನು ವಾದಿಸಿದೆ. "ನಿನ್ನ ಕವಿತ್ವ ಹಾಗಿರಲಿ; ಹೋಗಿ ಮಲಗಿಕೊ"- ಎಂದು ನನಗೆ ಹೊರಬಾಗಿಲು ತೋರಿಸಿದರು. "ಬೆಳಗ್ಗೆ ೮ ಗಂಟೆಗೆ ಸಾಕು, ನನಗೆ ಕಾಫಿ. ಅಲ್ಲಿಯ ತನಕ, ಬೇಡ" - ಎನ್ನುತ್ತ ಸ್ವಾಮಿ ತಮ್ಮ ಕೋಣೆಯನ್ನು ಪ್ರವೇಶಿಸಿದರು. "ಸ್ವಾಮಿ! ಪುಟ್ಟಪರ್ತಿಯಲ್ಲಿ ಸ್ವಾಮಿ ಆರು, ಆರೂವರೆಗೇನೇ ಕಾಫಿ .....?" - ಎಂದು ಶ್ರೀಮತಿ ಸೇನ್ ಪ್ರಾರಂಭಿಸಿದಾಗ , "ಹೇಳಿದ ಹಾಗೆ ಮಾಡುವುದನ್ನು ಕಲಿತುಕೊ ಮೊದಲು"- ಎಂದು ಆ ಮಾತು ಮುರಿದರು.

ಅವರ ಕೋಣೆಯಲ್ಲಿ ಅವರೊಬ್ಬರೇ ! "ನಾನು ಆ ಮೂಲೆಯಲ್ಲಿ ಮಲಗಿರುತ್ತೇನೆ ಸ್ವಾಮಿ, ತನಗೇನಾದರೂ....?" - ಎಂದು ಗವರ್ನರೂ ಸಾಹೇಬರು ಸೂಚಿಸಿದಾಗ, ಯಾರೂ ಬೇಡ, ನೀನು ಹೋಗು, ಎಂದು ಗದರಿಸಿದರು ಎಂತಲೇ ಹೇಳಬೇಕು. ನಾವೆಲ್ಲ ಕೆಳಗಿನ ಒಂದು ರೂಮಲ್ಲಿ, ಸ್ವಾಮಿ ಮಹಡಿ ಮೇಲೆ.

ಆ ರಾತ್ರಿ ಏನು ಆಯಿತು ಎಂಬುದನ್ನು ವಿವರಿಸಿ, ಒಂದು ವಾರದ ನಂತರ, ಸ್ವಾಮಿ ತಾವೇ ಬರೆದು ನನ್ನ ಕೈಯಲ್ಲಿ ಡಾ| ಭಗವಂತಂ, ಎಂ. ಎ., ಡಿಎಸ್ಸಿಸಿ, ಅವರಿಗೆ ಕೊಡಿಸಿದ ಪತ್ರ ಹೀಗಿದೆ: "ಏಳನೆಯ ತಾ| ರಾತ್ರಿ ಅನಿರೀಕ್ಷಿತವಾಗಿ ಆಶ್ಚರ್ಯ ಸಂಭವಗಳಾದುವು. ನನ್ನಿಂದ ಹಾಸಿಗೆಯಲ್ಲಿ ಮಲಗಲಾಗಲಿಲ್ಲ; ಕೂರಲೂ ಸಾಧ್ಯವಾಗಲಿಲ್ಲ, ಹೊರಳುವುದು ಕೂಡ ಅಸಾಧ್ಯವಾಯಿತು. ಮಾತು ಬಾರದು, ಕೂಗಿ ಕರೆಯುವುದಂತೂ ಸಾಧ್ಯವಿರಲಿಲ್ಲ. ಯಾರನ್ನೂ ಗಾಬರಿಗೊಳಿಸಬಾರದೆಂದು ಯಾರಿಗೂ ತೊಂದರೆ ಕೊಡಬಾರದೆಂದು, ನಾನು ಸದ್ದು ಮಾಡದೆ ಸುಮ್ಮನಿದ್ದೆ".

ಬೆಳಕು ಹರಿದು ೮ ಗಂಟೆಗೆ ಕಾಫಿಸಮೇತ, ಶ್ರೀಮತಿ ಸೇನ್ ಹೋದಾಗ ನಮಗೆ ತಿಳಿಯಿತು, ಏಕೆ ಹಿಂದಿನ ರಾತ್ರಿ ನಮ್ಮನ್ನು ಆತುರಪಡಿಸಿ ಕೆಳಗಿನ ಕೋಣೆಗೆ ಕಳುಹಿಸಿದ್ದು, ತಾವು ಏಳುವುದು

ಷ್ಟ ಎಂದು ಸೂಚಿಸಿದ್ದು, ಆಹಾರ ಏನೂ ತೆಗೆದುಕೊಳ್ಳದೆ ಉಳಿಸಿದ್ದದ್ದು, ಮೆಟ್ಟಿಲುಗಳನ್ನು ನಿಧಾನವಾಗಿ ಏರಿದ್ದು, ಕಾರಿನ ವೇಗ ತಗ್ಗಿಸಿ ಎಂದು ಬೇಡಿಕೊಂಡದ್ದು ಎಂಬುದಲ್ಲ... ಎಂಥದ್ದೋ ಜ್ವರ!

ಶ್ರೀಮತಿ ಸೇನ್ ಅವರು, "ಸ್ವಾಮಿ, ಇಲ್ಲಿಗೆ ಬರುತ್ತಲೂ ಅಸ್ವಸ್ಥರಾದಿರಿ! ಈ ರಾಜಭವನ, ಕೆಟ್ಟಮನೆ ಸ್ವಾಮಿ! ಎಂಥೆಂಥವರೋ ಇದ್ದ ಮನೆ ಸ್ವಾಮಿ"- ಎಂದು ಕಂಬನಿಗರೆದರು. ಆಗ ಸ್ವಾಮಿ "ಹಾಗೆನ್ನಬೇಡ, ಧಾರವಾಡದಿಂದ ಈ ಖಾಯಿಲೆಯನ್ನು ನಾನು ಇಲ್ಲಿಗೇಕೆ ತಂದೆ, ಗೊತ್ತೆ? ಈ ರಾಜಭವನದಲ್ಲಿ ಅದನ್ನು ಧ್ವಂಸ ಮಾಡುವುದಕ್ಕೆ" - ಎಂದರು.

ವಿಪರೀತ ನೋವು, ಹೊಟ್ಟೆಯೊಳಗೆ, ನಕುಲ್‌ಸೇನ್‌ರವರು ತಕ್ಷಣ ಮೆಡಿಕಲ್ ಕಾಲೇಜಿನಿಂದ ನಾಲ್ಕಾರು, ಊರಿಂದ ಇಬ್ಬರು ಮೂವರು ಡಾಕ್ಟರುಗಳನ್ನು ಕರೆಯಿಸಿದರು. ಸ್ವಾಮಿ ಅವರನ್ನೆಲ್ಲ ಬರಮಾಡಿಕೊಂಡು, ಅವರ ಬುದ್ಧ್ಯಾನುಸಾರ ತಮ್ಮ ಶರೀರವನ್ನು ಪರೀಕ್ಷಿಸಲೊಪ್ಪಿದರು. ಅನಂತರ ಅವರು ಒಟ್ಟು ಸೇರಿ, ಒಂದು ವರದಿ ತಯಾರು ಮಾಡಿ, ಗವರ್ನರಿಗೆ ಒಪ್ಪಿಸಿದರು: "ನೋವು ರಾತ್ರಿ ೩ ಗಂಟೆಯಿಂದ ತೀವ್ರವಾಯಿತು. ಉದರದ ದಕ್ಷಿಣ ಭಾಗದಲ್ಲಿ ಹೆಚ್ಚು ಕೆಳ ಹೊಟ್ಟೆಯಲ್ಲಿ ಹೆಚ್ಚು, ನಾಭಿ ಸುತ್ತ ಕೇಂದ್ರೀಕೃತ, ಬಲಗಡೆ ಜಾಸ್ತಿ. ಬಲಗಾಲು ನೀಡುವಾಗ, ತುಂಬಾ ನೋವಂತೆ. ಅತ್ತಿತ್ತ ಹೊರಳಿದರೆ ಹೆಚ್ಚಿನ ನೋವು. ಇಂದು ಬೆಳಿಗ್ಗೆ ಕೊಂಚ ಜ್ವರ, ವಾಂತಿಯ ಸೂಚನೆ"- ಎಂದು ಆ ವರದಿಯಲ್ಲಿತ್ತು. ವೈದ್ಯರೆಲ್ಲರೂ ಪ್ರವೀಣರೆ! ವ್ಯಾಧಿ ಯಾವುದೋ ತಿಳಿಯದು. ಅವರ ಆಡಾಊಡಿ ನೋಡುತ್ತ ಸ್ವಾಮಿ ತೆಪ್ಪಗೆ ಮಲಗಿದ್ದರು.

ಸೇನ್ ದಂಪತಿಗಳಿಗೆ ದಿಕ್ಕೆ ತೋಚಲಿಲ್ಲ. ಕಣ್ಣಿಗೆ ಕತ್ತಲೆ ಕಟ್ಟಿತು; ಆಶಾ ಗೋಪುರ ಕುಸಿಯಿತು. ಆ ದಿನ ಸಂಜೆ ೫ ಗಂಟೆಗೆ ನಗರದ ಅತೀ ವಿಶಾಲವಾದ ಮೈದಾನಂದ ಅಂಚಿನಲ್ಲಿ, ಆಗಲೇ ಸಿದ್ಧಪಡಿಸಿರುವ ಚಪ್ಪರದ ವೇದಿಕೆಯಿಂದ, ಭಗವಾನರು ಸಾರ್ವಜನಿಕ ಸಭೆಯನ್ನುದ್ದೇಶಿಸಿ ಭಾಷಣ ಮಾಡುವುದಾಗಿ, ನಾಲ್ಕಾರು ದಿನಗಳಿಂದ ಪ್ರಸಿದ್ಧ ಪಡಿಸುತ್ತಿದ್ದುದರಿಂದ, ಊರು ತುಂಬಾ ಉತ್ಸಾಹ.

ನಮ್ಮೊಂದಿಗಿದ್ದ ವಿದೇಶಿ ಮಹಿಳೆಯರು, ನಸುಕಿನಲ್ಲೇ ಗೋವಾ, ನಗರದಲ್ಲಿನ ಪ್ರಖ್ಯಾತ ಕ್ರೈಸ್ತ ದೇವಾಲಯಗಳನ್ನು ನೋಡಿ ಬರಲು ಹೊರಟು ಬಿಟ್ಟಿದ್ದರು. ಅಲ್ಲಿಂದ ಬಂದ ಕೂಡಲೇ ತಮಗಾದ ಅನುಭವವನ್ನು, ಜಾನ್ ಹೀಗೆ ತಿಳಿಸಿದ್ದಾಳೆ: "ರಾಜಭವನವನ್ನು ನಿಶ್ಶಬ್ದತೆ ಆವರಿಸಿತ್ತು. ಜನದಲ್ಲಿ ಯಾರಿಗೂ ಆಸಕ್ತಿ, ಅಭಿಲಾಷೆ ಇರಲಿಲ್ಲ. ಸ್ವಾಮಿ ಏಕೆ ಹೊರಬರಲಿಲ್ಲ? ಏಕೆ ಎಲ್ಲರ

ಮುಖವೂ ಬಾಡಿದೆ? ಎಂದು. ತಿಳಿದಿದ್ದವರು ಕೂಡ ತುಟಿ ತೆರೆಯಲಿಲ್ಲ. ತಾಳಲಾರದ, ಹೇಳಲಾರದ ಯಾವುದೋ ದುಃಖ ಪರಿಸ್ಥಿತಿ! ನಮಗೆ ಭಯ, ಕೇಳಬಹುದೋ ಕೇಳಬಾರದೋ? ಇರಲಿ! ತಾಳ್ಮೆಯಿಂದ ಇರೋಣ; ತಾನಾಗಿಯೇ ತಿಳಿಯುತ್ತೆ, ತಿಳಿಯಬಹುದಂಥದ್ದಾದರೆ! ಸಂಜೆ ಮೀಟಿಂಗಿಗೆ ಸ್ವಾಮಿ ಹೊರಡುತ್ತಾರೆ. ಆಗ ದರ್ಶನ ಸಿಗುತ್ತದೆ ಖಂಡಿತ. ನಾವು ಆ ದಾರಿಯಲ್ಲೇ ಬಂದೆವು. ಆಗಲೇ ಅರ್ಧ ಮೈದಾನ ಭರ್ತಿ!"

"ಐದು ಗಂಟೆಗೆ ಹತ್ತು ನಿಮಿಷ ಇದೆ ಎಂದಾಗ, ನಾವು ಮೂವರು ಮುಂಬಾಗಿಲ ಹತ್ತಿರ ಸಿದ್ಧರಾದೆವು. ಮೆಟ್ಟಲಿಳಿದು ಬರುವಾಗ ಫೋಟೋ ತೆಗೆಯಲು ಕ್ಯಾಮರಾ ಹಿಡಿದಿದ್ದೆವು. ಉದಯದಿಂದ ಸ್ವಾಮಿ ಕಣ್ಣಿಗೆ ಬಿದ್ದಿರಲಿಲ್ಲವಾದ್ದರಿಂದ, ಇಗೊ ಆಗೋ ಅಂತ ಎವೆಯಿಕ್ಕದೆ ಕಾದು ನಿಂತೆವು.

"ಬಾಬಾ ಅವರ ಅವತರಣದ ಸುದ್ದಿ ನನಗೆ ಮೊದಲು ತಿಳಿಸಿದ್ದು, ಒಬ್ಬಾಕೆ ನನ್ನ ಗೆಳತಿ. "ಅವರನ್ನು ಆರಾಧಿಸು, ಧ್ಯಾನಿಸು"- ಎಂದಳಾಕೆ. "ಹೇಗೆ ಅಮ್ಮ! ನಾನು ಯೇಸುವನ್ನಾಶ್ರಯಿಸಿ ಬಾಳುತ್ತಿದ್ದೇನೆ. ಅವರು ನನ್ನನ್ನು ರಕ್ಷಿಸುತ್ತಾರೆ ಎಂಬ ನಂಬಿಕೆ ದೃಢವಾಗಿದೆ ನನ್ನಲ್ಲಿ. ಬಾಬಾ ಏಸುವಾದರೆ, ಅವರನ್ನು ಆಗಲೇ ಆರಾಧಿಸುತ್ತಿದೇನಲ್ಲಾ! ಅಲ್ಲವಾದರೆ ನಾನು ಅವರ ಗೋಜಿಗೇ ಹೋಗೆನು"- ಎಂದಿದ್ದೆ. ಆ ಮೇಲೆ ಮತ್ತೊಂದು ಮಾತು ಹೇಳಿದೆ, ತುಂಟತನದಿಂದ. "ನೀನು ಹೇಳುವುದೆಲ್ಲ ನಿಜವಾದರೆ, ಏಸುವನ್ನಾಶ್ರಯಿಸುತ್ತಿದ್ದೇನೆ ಎಂಬ ಕಾರಣದಿಂದ ಬಾಬಾ ನನ್ನನ್ನು ಎಂದಿಗೂ ದೂಡುವುದಿಲ್ಲ. ಸುಮ್ಮನಿರು" ಎಂದೆ. ಮತ್ತೆ ನೆನಪಿಗೆ ಬಂತು, ಪ್ರಥಮ ದರ್ಶನಾನಂದ, ಭಯ, ಆಶ್ಚರ್ಯ, ಸಂತೋಷ ಸಂತೃಪ್ತಿ. ನನ್ನೊಂದಿಗೆ ಬಾಬಾ ಆಡಿದ ಮೊದಲನೆಯ ಮಾತು: "ಏಸು ಭಕ್ತಿ ನಿನ್ನಲ್ಲಿ ಬೇರೂರಿದೆ ಗೊತ್ತು. ನಾನೂ ಏಸುವೂ ಒಂದೇ, ನಿಜಕ್ಕೂ."

"ಆಗ ನನ್ನ ದೃಷ್ಟಿ ಮೆಟ್ಟಲುಗಳ ಸಾಲಿನ ಮೇಲೆ ಹರಿಯಿತು. ಆಗಲೇ ಸುದ್ದಿ ಹರಡಿತ್ತು, ಬಾಬಾ ಇನ್ನೂ ಹಾಸಿಗೆಯಿಂದೇಳಲಿಲ್ಲ. ಆಗಾಗ ವಾಂತಿ, ನೋವು.... ಮೈದಾನದಲ್ಲಿ ಇಪ್ಪತ್ತು ಸಾವಿರ ಜನ ಕಿಕ್ಕಿರಿದ್ದಾರೆ. ಹಳ್ಳಿಗಳಿಂದ ಬಂದವರೇ ಅದರಲ್ಲರ್ಧ. ಆ ಮೆಟ್ಟಿಲುಗಳು, ೨೮, ಇಳಿದೇ ಬರಬೇಕು. ಲಿಫ್ಟ್ ಇಲ್ಲ. ಆ ರಾಜಭವನದಲ್ಲಿ! ಅವನ್ನೆಲ್ಲ, ಇಳಿದು ತುಸು ದೂರ ನಡೆದು ಕಾರು ಹತ್ತಿ, ಮೈದಾನದಲ್ಲಿಳಿದು.....

"ಬಾಗಿಲು ತೆರೆಯಿತು. ಕಸ್ತೂರಿಗಳು ಬಂದರು ಈಚೆ, ಏಕೆ? ಕಸ್ತೂರಿ ಕಾರು ಹತ್ತಿದುದೇಕೆ? ಸ್ವಾಮಿ?... ಆಗ ನಮಗೆ ಆಕಾಶದಲ್ಲಿ ಕಾಣಿಸಿದ್ದು ಏನೆಂದರೆ, ಅರಬೀ ಸಮುದ್ರದಲ್ಲಿ ಸೂರ್ಯನ ನಿತ್ಯಾಸ್ತಮನ".

ಸ್ವಾಮಿ ನನ್ನನ್ನು ಹತ್ತಿರ ಕರೆದು, "ಹೋಗಿ ಆ ಜನರಿಗೆ ಹೇಳು.... ಅವತಾರ ಪುರುಷರು ಭಕ್ತ ರಕ್ಷಣಕ್ಕಾಗಿ ಬಂದಿರುತ್ತಾರೆ. ಭಕ್ತ ರಕ್ಷಣೆ ಅಂದರೆ, ಅವರಿಂದ ಸಹಿಸಲಾಗದ ನೋವು, ತೀರಿಸಲಾಗದ ಕರ್ಮ ಫಲವನ್ನು ಕೂಡ, ತಾವೇ ಸಹಿಸಿ, ತೀರಿಸಿ ಕಾಪಾಡುತ್ತಾರೆ. ಅಂಥ ಒಂದು ಕರುಣಾನುಗ್ರಹ ಇಲ್ಲಿ ಈಗ ನಡೆಯುತ್ತಿದೆ. ಹಿಂದೆ ಇಂಥ ಮಹಾ ಮಹಿಮಾನ್ವಿತ ಮುಹೂರ್ತಗಳಲ್ಲಿ, ನಾನು ಅವರ ಸಮೀಪದಲ್ಲಿದ್ದು ಪುನೀತನಾಗಿದ್ದೇನೆ. ಆದ್ದರಿಂದ, ಶೀಘ್ರದಲ್ಲೇ ಅವರು, ಈಗ ಸ್ವೀಕರಿಸಿರುವ ಭಕ್ತ ರುಜಿನವನ್ನು ಇಲ್ಲವೆನಿಸಿ, ಗೋವಾ ನಾಗರಿಕರಿಗೆ ತಮ್ಮ ದಿವ್ಯ ಸಂದೇಶವನ್ನನು ಗ್ರಹಿಸುತ್ತಾರೆ ಎಂದು ಮುಂತಾಗಿ ಹೇಳಿ, ಸಮಾಧಾನ ಪಡಿಸು ಎಂದರು. "ಇದಕ್ಕಾಗಿಯೇ ನಿನ್ನನ್ನು ಲಂಕೆಗೆ ಕಳುಹಿಸದೆ ಇಲ್ಲಿಗೆ ಕರೆದು ತಂದೆ. ಗುರು ಪೌರ್ಣಮಿಯಂದು ನಡೆದದ್ದನ್ನೆಲ್ಲ ವಿವರವಾಗಿ ಹೇಳು"- ಎಂದರು.

ನನ್ನ ಭಾಷಣ ಆ ಜನಸ್ತೋಮವನ್ನು ಚಕಿತಗೊಳಿಸಿತು. "ಹೀಗೂ ಉಂಟೆ?"- ಎಂದು ಆಶ್ಚರ್ಯಪಟ್ಟರು. ಬಹುಮಂದಿ, ಇಂಥ ಪರಮ ಕರುಣಾಮೂರ್ತಿ, ನಮ್ಮ ಊರಿಗೆ ವಿಜಯ ಮಾಡಿದ್ದಾರಲ್ಲಾ ಎಂದು ಸಂತೋಷಪಟ್ಟರು. ನನ್ನ ಹಿಂದೆ ಗುಂಪು ಗೂಡಿ ಬಂದು, ಗುರು ಪೌರ್ಣಮಿ ದಿನ, ನಾಲ್ಕು ಸಾವಿರ ಭಕ್ತರೆದುರು, ಸ್ವಾಮಿಯು ಭಕ್ತನೊಬ್ಬನಿಂದ ಸ್ವೀಕರಿಸಿದ, ಒಂದು ವಾರ ಸಹಿಸಿ ಸಹಿಸಿದ ಪಕ್ಷಪಾತವನ್ನು, ನಿಮಿಷಾರ್ಧದಲ್ಲಿ ಒಗೆದು ಬಿಸುಟು, ಯಥಾಪೂರ್ವ ಗಂಟೆಗಟ್ಟಲೆ ದಿವ್ಯೋಪನ್ಯಾಸ ದಯೆ ಪಾಲಿಸಿದ ಕಥೆಯನ್ನು ಮತ್ತೆ ಮತ್ತೆ ಹೇಳಿಸಿದರು.

ಆ ರಾತ್ರಿ ೮ ಗಂಟೆಗೆ ವೃಂದ ಬರೆದರ್ಪಿಸಿದ ವರದಿ ಹೀಗಿತ್ತು: "ಅಕ್ಯೂಟ್ ಪಾರಾಶಾಲಿಕ್ ಅಪ್ಪೆಂಡಿಸೈಟಿಸ್ (ಕರುಳು ಕೊನೆಯಲ್ಲಿ ಭಯಂಕರ ಹುಣ್ಣು) ಶಸ್ತ್ರಕ್ರಿಯೆಗೆ ಇಷ್ಟಪಡುತ್ತಿಲ್ಲ".

ಮೈದಾನದ ಮಹಾಸಭೆಗೆ ಸ್ವಾಮಿಯ ದರ್ಶನ ಸಿಗಲಿಲ್ಲವಾದ್ದರಿಂದ, ಪತ್ರಿಕಾ ಪ್ರತಿನಿಧಿಗಳು ಗವರ್ನರನ್ನೂ ಡಾಕ್ಟರುಗಳನ್ನೂ, ಸುತ್ತುಗಟ್ಟಿ ಸುದ್ದಿಗಾಗಿ ಕಾಡಿದರು. ಅಪ್ಪೆಂಡಿಸೈಟಿಸ್ ಎಂಬ ವೈದ್ಯರ ತೀರ್ಮಾನ, ಆಸೇತು ಹಿಮಾಚಲ ಜನಮನವನ್ನು ಕಂಪಿಸಿತು. ಬೊಂಬಾಯಿ, ಕಲ್ಕತ್ತ, ಮದ್ರಾಸ್, ಬೆಂಗಳೂರು, ಡಿಲ್ಲಿ ನಗರಗಳಿಂದ ಹೊರಡುವ ದಿನಪತ್ರಿಕೆಗಳು, ದಪ್ಪಕ್ಷರದ ಸಾಲುಗಳನ್ನು ಜೋಡಿಸಿ, ಸರ್ವತ್ರಸಾಯಿ ಲೀಲೆಯನ್ನು ಸಾರಿದುವು.

ರಾಜಭವನದ ಟೆಲಿಫೋನ್‌ಗೆ ಅಹೋರಾತ್ರಿ ಬಿಡುವೇ ಇಲ್ಲ. ಊರಿನ ತಂತಿ ಕಚೇರಿಗೆ ನೌಕರರಿಗೆ ವಿಶ್ರಾಂತಿಯೇ ಇಲ್ಲ... ದೇಶದ ಮೂಲೆ ಮೂಲೆಗಳಿಂದ ಆವೇದನೆ, ಆತಂಕ, ಆಶ್ಚರ್ಯ,

ಅನುಮಾನ, ಆತುರ, ಅವಿಶ್ವಾಸ, ಆಕ್ಷೇಪ, ಆಕ್ರಂದನ - ತಂತಿಯ ಮೂಲಕ, ದೂರವಾಣಿಯ ಮೂಲಕ.

"ಸ್ವಾಮಿ, ಬಹಳ ನೋವಲ್ಲವೆ? ಅದರ ನಿವಾರಣೆಗೆ ಏನಾದರೊಂದು ಪರಿಹಾರದ ಮದ್ದು?"- ಎಂದು ಡಾಕ್ಟರುಗಳು ಕೇಳಿದಾಗ, 'ಅಂಥ ನೋವಿಂದ ನನಗೆ ಹಿಂಸೆಯಾಗುತ್ತಿದ್ದರೆ, ನಾನದನ್ನು ಸ್ವೀಕರಿಸುತ್ತಲೇ ಇರಲಿಲ್ಲ'- ಎಂದರು. ಶ್ರೀಮತಿ ಸೇನ್ ಅವರು, 'ನಾನು ಪೂಜೆ ರೂಂನಲ್ಲಿ ಕುಳಿತು, ತಮ್ಮ ನೋವನ್ನು ನನಗೆ ಕೊಡಿ ಎಂದು ಬಹಳ ಹೊತ್ತು ಬೇಡಿಕೊಂಡೆ'- ಎಂದಾಗ, ನಮಗೆಲ್ಲರಿಗೂ ಅದು ಒಳ್ಳೆಯ ಯೋಚನೆ ಎಂದೆನಿಸಿತು. ಏಳೆಂಟು ಜನ ನಾವು ಸಾಲಾಗಿ ಅವರ ಮಂಚದ ಬಳಿಗೆ ನುಗ್ಗಿದೆವು. 'ಎಲ್ಲರಿಗೂ ಅದನ್ನು ಹಂಚಿ ಬಿಡಿ'- ಎಂದು ಅಂಗಲಾಚಿದೆವು. 'ನನಗೇನೂ ನೋವಿಲ್ಲ, ಇದ್ದರೂ ನಾನು ನನ್ನ ಭಕ್ತರಿಗೆ ಎಂದಿಗೂ ನೋವನ್ನು ಪ್ರಸಾದಿಸುವುದಿಲ್ಲವಲ್ಲಾ'- ಎಂದು ಉತ್ತರಿಸಿ, 'ಹೋಗಿ ಎಲ್ಲರೂ'- ಎಂದು ಕಳುಹಿಸಿಕೊಟ್ಟರು.

ಇಂದ್ರಾದೇವಿಗೆ ಸ್ವಾಮಿ ಒಂದು ಬೆಳ್ಳಿ ಡಬ್ಬಿ ಸೃಷ್ಟಿಸಿ ಕೊಟ್ಟಿದ್ದರು. ಅದರ ತುಂಬ ದಿವ್ಯ ವಿಭೂತಿ ಇತ್ತು. ಮುಚ್ಚಳದ ಮೇಲೆ ಸೊಗಸಾದ ಬೆಳ್ಳಿ ಗಣೇಶ ವಿಗ್ರಹ. 'ಕಷ್ಟದಲ್ಲಿ ನರಳುತ್ತಿರುವವರಿಗೆ ಈ ವಿಭೂತಿಯನ್ನು ಕೊಡು, ಶಮನವಾಗುತ್ತೆ'- ಎಂದರು. ಆಗ ಅದರ ಮಹತ್ವವನ್ನು ವರ್ಣಿಸಿದ್ದರು. ಅಲ್ಲದೆ, 'ಇದರಿಂದ ನೀನು ಎಷ್ಟು ತೆಗೆದರೂ ಮತ್ತೆ ತುಂಬಿರುತ್ತದೆ'- ಎಂಬ ಆಶ್ವಾಸನೆಯನ್ನಿತ್ತಿದ್ದರು. ಆಕೆ ಮಂಚದ ಹತ್ತಿರ ನಿಂತು, ಅದರಲ್ಲಿ ಒಂದು ಚಿಟಿಕೆ ಸ್ವಾಮಿಗೆ ಕೊಡಹೋದಾಗ, "ಛೆ! ಛೆ! ಅದು ಬರೀ ಸ್ವಾರ್ಥ! ನಾನು ಅದನ್ನು, ನೀನು ಇತರರಿಗೆ ಕೊಡುವುದಕ್ಕಾಗಲ್ಲವೆ ಕೊಟ್ಟಿದ್ದು? ನಾನು ಸೃಷ್ಟಿಸುವುದೆಲ್ಲ ನಿಮಗಾಗಿ, ನನಗಾಗಿ ಅಲ್ಲ'- ಎಂದು ನಿರಾಕರಿಸಿದರು.

ಜಾನ್ ಬರೀತಾಳೆ: "ಕಡೆಗೆ ನಾನು ರಾಜಭವನದ ಪೂಜಾರೂಂನಲ್ಲಿ ಮಂಡಿಯೂರಿ ಏಸುವನ್ನೇ ಬೇಡಿಕೊಂಡೆ. ತಮ್ಮನ್ನು ತಾವು ಚಿಕಿತ್ಸೆ ಮಾಡಿಕೊಳ್ಳಲಿಚ್ಛಿಸದ ಬಾಬಾ ಅವರನ್ನು, ನೀವಾದರೂ ಸರಿ ಮಾಡಿ ಎಂದು. ಆದರೆ ಅದು ಫಲಿಸುವುದಿಲ್ಲವೆಂದು ನಾನು ಕಂಡುಕೊಂಡೆ. ಏಕೆಂದರೆ ಏಸುವೇ ಬಾಬಾ; ಬಾಬಾ ಅವರೇ ಏಸು! ಆದ್ದರಿಂದ ಮತ್ತೊಂದು ಉಪಾಯ ಹುಡುಕಿದೆ. 'ಬಾಬಾ! ನೀವು ಜ್ಯೋತಿ; ನೀವು ಜ್ಯೋತಿಯ ಜ್ಯೋತಿ. ನಿಮ್ಮಲ್ಲಿ ನೆರಳಿಲ್ಲ. ಈ ಸತ್ಯವನ್ನೇ ಮತ್ತೆ ಮತ್ತೆ ಹೇಳಿದೆ. ನೋವು ಎಂಬ ನೆರಳು ಇಲ್ಲವಾಗಲಿ ಎಂದು ಪ್ರಾರ್ಥಿಸಿದೆ. ಆದರೆ ನನ್ನ ನೆನಪಿಗೆ ಬಂತು; ಭಗವಂತನ ಮಾಯಾ ಶಕ್ತಿಯಿಂದಲೇ ಅವತಾರ ರೂಪ ತಾಳುವುದು. ಈ ಖಾಯಿಲೆ ಕೂಡಾ

ಆ ಶಕ್ತಿಯ ಪ್ರಕಟಣೆ ಆಗಿರಬೇಕು ಎಂದೆನಿಸಿತು. ತಮಗೆ ಶರಣಾದವರೊಬ್ಬರ ತಾಪವನ್ನು ತಮ್ಮ ಸಂಕಲ್ಪದಿಂದ ತಾವು ತೆಗೆದುಕೊಂಡು, ಮಾಯಾ ನಾಟಕವಾಡುತ್ತಿರಬೇಕು ಎಂದುಕೊಂಡೆ.

"ಡಾಕ್ಟರುಗಳು ಮುಖ ಉದ್ದ ಮಾಡಿಕೊಂಡು, ಬಾಗಿಲಾಚೆ ಈಚೆ ನುಸುಳುತ್ತ ಪಿಸುಮಾತಾಡುತ್ತಿದ್ದರು. ಇಂದ್ರಾದೇವಿ ಪಕ್ಕದ ರೂಂನಲ್ಲಿ ಕುಳಿತು, ಬೆಳ್ಳಿ ಡಬ್ಬದ ವಿಭೂತಿಯನ್ನು ಬಾಬಾ ಭಾವ ಚಿತ್ರವೊಂದರ ಉದರದಲ್ಲಿ ಉಜ್ಜುತ್ತ, ಏನೇನೋ ಜಪಿಸುತ್ತಿದ್ದಳು. ಶ್ರೀಮತಿ ಸೇನ್ ಕಣ್ಣೊರಸುತ್ತ ಬಿಕ್ಕಿ ಬಿಕ್ಕಿ ಬೆದರುತ್ತ ಆಕೆ ಪಕ್ಕದಲ್ಲಿ ಕುಳಿತಿದ್ದರು.

"ಕಸ್ತೂರಿ ಮಾತ್ರ ಶಾಂತವಾಗಿ ಧೈರ್ಯದಿಂದ ಬಾಗಿಲೆದುರಿನ ಕುರ್ಚಿಯೊಂದರಲ್ಲಿ ಆಸೀನರಾಗಿದ್ದರು. ಇದೊಂದು ಮಹಾ ಪವಾಡ. ಭಕ್ತನೊಬ್ಬನ ಪ್ರಾಣ ರಕ್ಷಣೆಗಾಗಿ ಸ್ವಾಮಿ ಈ ಖಾಯಿಲೆಯನ್ನು ತಾವೇ ವಹಿಸಿಕೊಂಡಿದ್ದಾರೆ. ವಾರಗಳ ಕಾಲ ಅನುಭವಿಸಬೇಕಾದ ನೋವನ್ನು, ಸ್ವಾಮಿ ಎರಡು ಮೂರು ದಿನಗಳಲ್ಲೇ ಮುಗಿಸಿ, ಹಿಂದಿನಂತೆ ಓಡಿ, ಆಡಿ, ಹಾಡಿ, ಹರಸಿ, ನಕ್ಕು ನಗಿಸುತ್ತಾರೆ ಎಂದು ಅವರು ನಮಗೆ ಹೇಳುತ್ತಿದ್ದರು. ಅವರ ಸ್ಫೂರ್ತಿ ತುಂಬಿದ ಮಾತು ನಮ್ಮನ್ನೆಲ್ಲ ಸಂತೈಸಿದುವು; ಭಯಾಂದೋಳನಗಳನ್ನು ಕಮ್ಮಿ ಮಾಡಿದುವು. ಗವರ್ನರ್ ಕೂಡ, ಈ ಡಾಕ್ಟರುಗಳು ಏನೇ ಹೇಳಲಿ, ಸ್ವಾಮಿ ಮದ್ದು, ಸೂಜಿ, ಕತ್ತಿ, ಚಾಕು 'ಇಲ್ಲದೆ ಗುಣ ಹೊಂದಿ, ತಮ್ಮ ಈಶ್ವರತ್ವವನ್ನು ಪ್ರಪಂಚಕ್ಕೆ ಸ್ಪಷ್ಟ ತೋರಿಸುತ್ತಾರೆ ಎಂದು ನಂಬಿ ಕಸ್ತೂರಿ ಪಕ್ಕದಲ್ಲಿ ಗಂಭೀರವಾಗಿ ಕುಳಿತಿದ್ದರು.

"ಪಕ್ಷಪಾತ, ಹೃದಯಾಘಾತ, ಇವನ್ನು ಬಾಬಾ ಹೇಗೆ ಸಂಕಲ್ಪದಿಂದ ತಮ್ಮ ದೇಹದಲ್ಲಿ ಆವಾಹಿಸಿಕೊಂಡು, ಆ ಸಂಕಲ್ಪದಿಂದಲೇ ಅದನ್ನು ಕ್ಷಣ ಮಾತ್ರದಲ್ಲಿ ಬಿಸುಟು, ಭಕ್ತರಿಗೆ ಪರಮಾನಂದವನ್ನುಂಟು ಮಾಡಿದರು? ಹೇಳಿ"- ಎಂದು ನಾವು ಕಸ್ತೂರಿಯನ್ನು ಕೇಳಿದಾಗಲೆಲ್ಲ ಅವರು ಪುನಃ ಪುನಃ ಆಧುನಿಕ ಭಾಗವತದ ದಿವ್ಯೋಪಾಖ್ಯಾನವನ್ನು ನಮಗೆ ಸಂತೋಷವಾಗಿ ವಿವರಿಸಿದರು. ಅದನ್ನು ಕೇಳುತ್ತ ಕೇಳುತ್ತ, ಸಾಯಿ ಭಗವಾನರು ಅತೀ ಶೀಘ್ರದಲ್ಲೇ, ಎಂದಿನಂತೆ ನಮ್ಮನ್ನನುಗ್ರಹಿಸಿ ರಕ್ಷಿಸಿ ಹರ್ಷಗೊಳಿಸುತ್ತಾರೆ, ಎಂದು ನಂಬಿದೆವು. ನಾನು ಒಮ್ಮೆ ಬಾಬಾ ಅವರನ್ನು ಕೇಳಿದ್ದೆ: "ಬಾಬಾ, ಏಸುಕ್ರಿಸ್ತ ಏಕೆ ಶಿಲುಬೆ ಏರಿ ಅಷ್ಟು ಯಾತನೆ ತಿಂದ?" ಆಗ ಬಾಬಾ ಹೇಳಿದ್ದರು, 'ಮಹಾತ್ಮರು ಯಾರು ತಮ್ಮ ಶಕ್ತಿಗಳನ್ನು ತಮಗಾಗಿ ವಿನಿಯೋಗಿಸುವುದಿಲ್ಲ'. ಆ ಮಾತು ನೆನಪಾದಾಗಲೆಲ್ಲ ಹೃದಯ ತಂಪಾಗುವುದು. ಜೋಗಕ್ಕೆ ಹೋಗುವ ಕಾರನ್ನು ತಂಟೆಕೋರ ಮಾಡಿದ್ದು ಕೂಡ ಭಕ್ತ ರಕ್ಷಣೆಗಾಗಿಯೇ ಎಂದು ಊಹಿಸಿದೆ. "ಬಾಬಾ, ಬಾಬಾ! ನಿಮಗೆ ನನ್ನ

ಹೃದಯವನ್ನರ್ಪಿಸುತ್ತಿದ್ದೇನೆ. ನೀವೇ ನನ್ನ ಸರ್ವಸ್ವ"- ಎಂದು ಹೇಳುತ್ತ, ಅವರ ಕೋಣೆಯ ದಿಕ್ಕಿಗೆ ಮಂಡಿಯೂರಿ ಕೈ ಮುಗಿದೆ.

"ಆಗ ನಕುಲ ಸೇನ್ ಅವರು, ನನಗೂ ಇಂದ್ರಾದೇವಿಗೂ ಶ್ರೀಮತಿ ರಾಜ ಗೋಪಾಲನ್‌ರವರಿಗೂ ಸ್ವಾಮಿಯ ಕೋಣೆಯೊಳಗೆ ಪ್ರವೇಶಿಸುವಂತೆ ಸನ್ನೆ ಮಾಡಿದರು. ಸಂತಾಪ, ಸಂತೋಷ, ಸಹಾನುಭೂತಿ ಮಿಶ್ರ ಮನಸ್ಸಿನಿಂದ ನಾವು ಒಳಗೆ ಕಾಲಿರಿಸಿದೆವು. ಹಾಸಿಗೆ ಬರಿದಾಗಿತ್ತು! ಸ್ವಾಮಿ ನಮ್ಮೆದುರು ನಿಂತಿದ್ದರು- ಮೃದು ಮಧುರ ಹಾಸ ತೋಳಗಿತು. ಗೌನನ್ನು ತುಸು ಮೇಲಕ್ಕೆಳೆದು, 'ಮಾಡಿ' ಎಂದರು; ನಮಸ್ಕಾರ ದೊರಕಿತು. ಪಾದಸ್ಪರ್ಶನ ಸಹಿತ ತುಸು ಬಿಸಿ; ಮುಖ ಕೊಂಚ ನಿಷ್ಪ್ರಭೆ; ಮೈಯಲ್ಲಿ ನಿಶ್ಶಕ್ತಿ; ಕೆನ್ನೆ ಕೊಂಚ ಕುಸಿದಿತ್ತು. ಆದರೂ ನಮಗಾಗಿ ಎದ್ದು, ನಾಲ್ಕಡಿ ನಡೆದು ನಿಂತರು. "ಅಂಥದ್ದೇನೂ ಅಲ್ಲ; ಸ್ವಲ್ಪಕ್ಕೆ ಇವರು ಇಷ್ಟು ಸೇರಿಸಿ ಭಾರಿ ಭಯಂಕರ ಮಾಡುತ್ತಿದ್ದಾರೆ" ಎಂದರು. ನಾವು 'ಸ್ವಾಮಿ! ಡಾಕ್ಟರುಗಳಿಗೆ ಅವಕಾಶ ಕೊಡಿ ಸ್ವಾಮಿ'- ಎಂದು ಅಂಗಲಾಚಿದೆವು. 'ಅವರಿಗೇನು ಗೊತ್ತು? ಅವರೆಂಥದ್ದು ಮಾಡುತ್ತಾರೆ? ನನಗೆ ಬೇಕಾದ್ದು ಎಲ್ಲರ ಪ್ರೇಮ'- ಎಂದರು. ಬಾಗಿಲಾಚೆ ಒಂದೆರಡು ನಿಮಿಷ ನಿಂತು, ಅಲ್ಲಿದ್ದವರಿಗೂ ದರ್ಶನ ಕೊಟ್ಟು, ಮತ್ತೆ ಮಲಗಿದರು. ಆ ಮೇಲೆ ತಿಳಿಯಿತು ನಮಗೆ, ಡಾಕ್ಟರುಗಳು ಖಡಾಖಂಡಿತ ಹೇಳಿದ್ದರಂತೆ. ಕರುಳು ಹುಣ್ಣು ಹಣ್ಣಾಗಿ, ಒಡೆಯುವ ಘಟ್ಟದಲ್ಲಿದೆ; ಆದ್ದರಿಂದ ಅಂಗಾತ ಮಲಗೇ ಇರಬೇಕು, ಏಳಬಾರದು ಎಂದು.

ಹಲವಾರು ದಿನಗಳ ತರುವಾಯ, ಕ್ರಿಸ್ಮಸ್ ದಿನ, ಬೊಂಬಾಯಿಯಲ್ಲಿ ತಾವು ಮಾಡಿದ ಉಪನ್ಯಾಸದ ಮಧ್ಯೆ, ಸ್ವಾಮಿ ಈ ಹುಣ್ಣಿನ ವಿಷಯ ಪ್ರಸ್ತಾಪಿಸಿದರು. 'ಈ ದೇಹ ಗೋವಾ ನಗರದಲ್ಲಿ ಒಂದು ದೊಡ್ಡ ಖಾಯಿಲೆಯನ್ನನುಭವಿಸಿತು. ಭಕ್ತರೆಲ್ಲಾ ಭಯ ಭ್ರಾಂತರಾದರು. ಆದರೆ ಈ ದೇಹಕ್ಕೆ ಯಾವ ವ್ಯಾಧಿಯೂ ತಗಲುವುದಿಲ್ಲ. ಅದರ ಸಮೀಪದಲ್ಲಿ ಕೂಡ ಸುಳಿಯುವಂತಿಲ್ಲ. ಅಂಥದ್ದೇನಾದರೂ ಸಂಭವಿಸಿದರೆ - ನೆನಪಿಟ್ಟುಕೊಳ್ಳಿ - ನನ್ನದಲ್ಲ. ಮತ್ತೊಬ್ಬರಿಗೆ ತಗಲುಬೇಕಾದ್ದನ್ನ ನಾನು ಸ್ವಾಗತಿಸಿ, ಸ್ವೀಕರಿಸಿ, ತೀರಿಸುವುದು ಮಾತ್ರ. ನನಗೂ ಅದಕ್ಕೂ ಅಷ್ಟೇ ನಂಟು. ನನ್ನನ್ನೇನೂ ಯಾವುದೂ ಬಾಧಿಸಲಾರದು". ಮಾರ್ಕಂಡೇಯನ್ನು ರಕ್ಷಿಸಿದ ಮಹೇಶ್ವರನಂತೆ, ಸ್ವಾಮಿ ಸಾಧುಗಳನ್ನು ಕಾಪಾಡುತ್ತಾರೆ.

ಡಿಸೆಂಬರ್ ೯ನೆ ತಾ| ಬಿಕ್ಕಳಿಕೆ ಮೊದಲಾಯಿತು, ಒಂದೇ ಸಮನೆ. ಹೊಟ್ಟೆಯೊಳಗಿನ ಗ್ಯಾಸನ್ನು ಮೂಗಿನ ಮೂಲಕ ಕೊಳಾಯಿ ಇಳಿಸಿ ಹೊರ ತೆಗೆದರೆ ಮಾತ್ರ ಅದು ನಿಲ್ಲುತ್ತದೆ, ಎಂದು

ವೈದ್ಯರ ತಂಡ ತೀರ್ಪು ಕೊಟ್ಟಿತು. ಹೊಟ್ಟೆಯ ಬಲಗಡೆ ಕರುಳು ಹಣ್ಣು ಬಲಿತು, ಕೆಂಚಗೆ ರಬ್ಬರ್ ಚೆಂಡಿನಾಕಾರದಲ್ಲಿ, ಮುಟ್ಟಿದರೆ ಸೀಳಿ ಕೀವು ಚಿಮ್ಮುತ್ತದೆ ಎಂಬ ದೆಶೆಯಲ್ಲಿ ಕಾಣಿಸಿತು. ತಾನಾಗಿಯೇ ಅದು ಒಡೆದರೆ ಕೀವು ರಕ್ತನಾಳಗಳಲ್ಲಿ ಸೇರಿ, ಇಡೀ ರಕ್ತ ವಿಷವಾಗಿ ಪ್ರಾಣಕ್ಕೆ ಅಪಾಯ, ಆದ್ದರಿಂದ ಮತ್ತಗೆ ಸೂಜಿ ಪ್ರಯೋಗ ಮಾಡಿ ಸಿರಿಂಜೊಂದರಿಂದ ಕೀವನ್ನು ಈಗಲೇ ಖಾಲಿ ಮಾಡಬೇಕು, ಎಂದು ಅವರು ಒತ್ತಾಯಪಡಿಸಿದರು. ಬಿಕ್ಕಳಿಕೆ ಬಂದಾಗಲೆಲ್ಲ, ಹೊಟ್ಟೆನೋವು ಹೆಚ್ಚಿ, ಹಣ್ಣು ಒಡೆಯುವ ಸಂಭವ ಜಾಸ್ತಿ ಎಂದು ಅವರು ಸ್ವಾಮಿಗೂ ತಿಳಿಯ ಹೇಳಿದರು. ಆದರೂ ಪಾಪ, ಅವರೆಲ್ಲ ಸೂಜಿ ಸಿರೆಂಜ್ ಸಹಿತ ಸ್ವಸ್ಥಾನ ಸೇರಬೇಕಾಗಿ ಬಂತು. ಸ್ವಾಮಿ ಸಮ್ಮತಿಸಲಿಲ್ಲ. ಸರಿ! ಆಸ್ಪತ್ರೆಯಲ್ಲಿ ಸಕಲ ಸಿದ್ಧತೆ ಸಹಿತ, ಗೇಟು ತೆಗೆದಿರಿಸಿಕೊಂಡು, ಶಸ್ತ್ರಕ್ರಿಯೆಗೆ ಬೇಕಾದ ಉಪಕರಣೆಗಳೊಂದಿಗೆ, ನಾವು ಆ ರಾತ್ರಿ ಕಾದಿರುತ್ತೇವೆ, ಎಂದು ಗವರ್ನರಿಗೆ ಧೈರ್ಯ ಹೇಳಿ ಅವರೆಲ್ಲರೂ ಹೊರಟರು.

೧೧ನೆ ತಾ| ರಾಜಭವನದಲ್ಲಿ ಸಂಜೆ ೬ ಗಂಟೆಗೆ, ಭಗವಾನ್ ಶ್ರೀ ಸತ್ಯಸಾಯಿ ಬಾಬಾ ಅವರ ಸನ್ನಿಧಿಯಲ್ಲಿ ಭಜನೆ, ಎಂದು ಬೃಂದಾವನದಲ್ಲಿ ನಿರ್ಧರಿಸಿದ ಕಾರ್ಯಕ್ರಮದಂತೆ ಆಗಲೇ, ಸ್ವಾಮಿ ಬಂದು ಸೇರುವ ಮೊದಲೇ, ಗವರ್ನರ್ ನಕುಲ್ ಸೇನ್ ಅವರು, ಅಚ್ಚುಕಟ್ಟಾಗಿ ಆಹ್ವಾನ ಪತ್ರಿಕೆಗಳನ್ನು ಅಚ್ಚು ಹಾಕಿಸಿ ಹಂಚಿದ್ದರು.

ಬೊಂಬಾಯಿಯಲ್ಲಿ ಈ ವಿಷಯ ಸ್ವಾಮಿ ಹೇಳಿದರು: "ಡಾಕ್ಟರುಗಳು ಆ ದಿನ ಮಧ್ಯಾಹ್ನ ನನ್ನನ್ನು ಪರೀಕ್ಷಿಸಿ, ತಕ್ಷಣವೇ ಆಪರೇಷನ್ ಆಗದಿದ್ದರೆ ಅನಾಹುತ ಎಂದರು. ನಾನು ಸೇನನ್ನು ಕರೆದು, ಭಜನೆ, ಉಪನ್ಯಾಸ ಉಂಟು, ಎಲ್ಲರಿಗೂ ಫೋನ್ ಮಾಡು ಎಂದೆ". ಮೂರು ಗಂಟೆ ಆಗುವುದರೊಳಗೇ ರಾಜಭವನದ ದೊಡ್ಡ ಹಾಲ್ ಭರ್ತಿ. ಆ ಹಾಲ್‌ನಲ್ಲಿ ಏರ್ಪಾಟು ಮಾಡಿದ್ದ ವೇದಿಕೆ ಸೇರಬೇಕೆಂದರೆ, ಬಾಬಾ ಹಾಸಿಗೆಯಿಂದೆದ್ದು, ಇಬ್ಬರ ಸಹಾಯ ಪಡೆದು, ಡ್ರಾಯಿಂಗ್ ರೂಂ ಹಾದು, ವರಾಂಡಾ ಉದ್ದಕ್ಕೂ ನಡೆದು, ಒಂದು ಮೆಟ್ಟಿಲು ಹತ್ತಿ, ಹೊಸ್ತಿಲು ದಾಟಿ, ಭಜನಾ ಹಾಲ್‌ನ ಆಚೆ ತುದಿ ಸೇರಿ, ಮತ್ತೆ ಎರಡು ಮೆಟ್ಟಿಲು ಹತ್ತಿ, ಅಲ್ಲಿದ್ದ ಕುರ್ಚಿಯಲ್ಲಿ ಕುಳ್ಳಿರಬೇಕಾಗಿತ್ತು- ಸುಮಾರು ೨೦೦ ಅಡಿಗಳ ದೂರ ದುಷ್ಕರ ಪ್ರಯಾಣ!

ಡಾಕ್ಟರುಗಳ ಎದೆ ನಡುಗಿತು. ಭಗವಾನರು ಇಂಥ ಸಾಹಸ ಮಾಡಿದರೆ, ತಮಗೂ ಗವರ್ನರ್ ಸಾಹೇಬರಿಗೂ ತೀರದ ಶೋಕ, ಅಪಕೀರ್ತಿ, ಎಂದು ಅವರು ಬಾಯಿಬಿಟ್ಟು ಹೇಳಿದರು. ಸೇನ್‌ರವರು ಅವರಿಗೆ ಹೇಳಿದರು: "ನೀವು ಭಯಪಡಬೇಕಾಗಿಲ್ಲ, ನನ್ನ ಅಂತರ್ವಾಣಿ ನುಡಿಯುತ್ತಿದೆ, ಸ್ವಾಮಿಯ ಲೀಲೆಗಳಲ್ಲಿ ಇದೂ ಒಂದು ಎಂದು"

ನಾಲ್ಕು ಗಂಟೆಗೆ ಡಾಕ್ಟರುಗಳು ಗವರ್ನರ್ ಸಮ್ಮತಿ ಸಂಪಾದಿಸಿ, ಸ್ವಾಮಿಯನ್ನು ಮತ್ತೊಮ್ಮೆ ನಡುಗುತ್ತ ನಡುಗುತ್ತ ಪರೀಕ್ಷಿಸಿದರು.... ಆ ! ಕೆಂಪಗಿನ ರಬ್ಬರ್ ಚೆಂಡು ಎಲ್ಲಿ? ಕರುಳನ್ನು ಬಾಧಿಸಿದ ಹುಣ್ಣೆಲ್ಲಿ? ಅದರ ಗುರ್ತು ಕೂಡ ಅವರಿಗೆ ಸಿಗಲಿಲ್ಲ. ಅವರಿಗೆ ಸಿಕ್ಕಿದ್ದು, ಭಗವಂತನ ಮಂದಹಾಸ, ದೇವರಲ್ಲಿ ವಿಶ್ವಾಸ, ಅಹಂಕಾರದ ಪಂಕ್ಚರ್, ಇವು ಮೂರೇ! ಸ್ವಾಮಿ ಎದ್ದು, ಸ್ನಾನದ ಕೋಣೆಗೆ ನಡೆದರು. ಐದು ಗಂಟೆಗೆ. ಇಪ್ಪತ್ತು ನಿಮಿಷಗಳ ನಂತರ, ಮುಖಕ್ಷೌರ ಮಾಡಿಕೊಂಡು, ಹೊಸ ರೇಷ್ಮೆ ಗೌನ್ ಧರಿಸಿ, ಧೋತರ ಉಟ್ಟು, ತಲೆಕೂದಲು ತಿದ್ದಿ, ಆಗ ತಾನೆ ಮರಳಿ ಪರಿಮಳ ಬೀರುವ ಗುಲಾಬಿ ಹೂವಿನಂತೆ ಹೊರ ಬಂದರು.

ಆ ಮಹಾಮಂಗಳ ಮುಹೂರ್ತವನ್ನು ಜಾನ್ ಹೀಗೆ ವರ್ಣಿಸುತ್ತಾಳೆ: "ಭಜನ ಮೊದಲಾಯಿತು. ನನ್ನ ಹೃದಯ ಆನಂದದಿಂದ ತಾಳ ಬಡಿಯುತ್ತಿತ್ತು. ಸಾಯಿಪ್ರೇಮ ಭವನವನ್ನಾವರಿಸಿತು. ಆ! ಅಗೋ! ಸ್ತ್ರೀ ಪುರುಷರ ಸಾಲುಗಳ ನಡುವೆ, ಮೆತ್ತನೆಯ ಕಾರ್ಪೆಟ್ಟಿನ ಮೇಲೆ ಪಾದಪಂಕಜವನ್ನಿರಿಸಿ, ರಾಜ ಠೀವಿಯಿಂದ ಬರುತ್ತಿದ್ದಾರೆ ಬಾಬಾ! ೪ ಘಂಟೆಗೆ ಅವರ ಎಡಬಲಗಳ ನೇರವಾಗಿ ಭಕ್ತರಿರಬೇಕಾಗಿತ್ತು. ಈಗ? "ಅನಾಥನಾಥ ಶ್ರೀನಾಥ ಪುಟ್ಟಪರ್ತಿ ಸತ್‌ಚಕ್ರವರ್ತಿ!" ದುಂಡು ಮುಖ, ಸುಲಿಪಲ್ಲು, ತಾರಾನೇತ್ರ, ತುಂಬು ಮೈ, ದಿಟ್ಟತನದ ನಡಿಗೆ, ಮಧುರ ನುಡಿಗೆ, ತಾಯಿ ಮಡಿಲ ಕೂಸನ್ನು ಕಂಡು ತಕ್ಷಣವೇ ವಿಭೂತಿ ಸೃಷ್ಟಿ? ಕುರ್ಚಿಯಲ್ಲಿ ಕುಳಿತ ಕೂಡಲೇ ತಾಳ ಬಡಿದು, ಭಜನಗಾನದಲ್ಲಿ ಮಂದಿಗೆ ಉತ್ಸಾಹ ನೀಡಿದರು. ಶ್ರೀಮತಿ ರಾಜಗೋಪಾಲನ್ ನನ್ನನ್ನು ತಿವಿದು, "ನೋಡು! ಎಂದೂ ಇಲ್ಲದ ಒಂದು ಮಹಾಜ್ಯೋತಿ ಆ ನೇತ್ರಗಳಲ್ಲಿ ಆವಿರ್ಭವಿಸಿದೆ"- ಎಂದಳು, ಆ ದಿನ ಅಲ್ಲಿ ಎಲ್ಲರಿಗೂ ದೈವಸಾನ್ನಿಧ್ಯದ ಆನಂದಾನುಭವ ದೊರಕಿತು, ಸಂದೇಹವಿಲ್ಲ ಎನ್ನುತ್ತಾಳೆ ಜಾನ್.

ಸ್ವಾಮಿಯ ಕರುಣಾದೃಷ್ಟಿ ಎವೆಯಿಕ್ಕದೆ ಅವರ ದಿವ್ಯ ಭವ್ಯ ವದನಾರವಿಂದವನ್ನೇ ಈಕ್ಷಿಸುತ್ತಿದ್ದ ಭಕ್ತರನ್ನಾಶೀರ್ವದಿಸಿತು. ಸ್ವಾಗತ ಭಾಷಣ ಮಾಡುತ್ತಾ ಗವರ್ನರ್ ಅಂದರು. "ಭಗವಾನರು ಭಕ್ತರ ಹೃದಯನಿವಾಸಿ ಅವರನ್ನು ರಕ್ಷಿಸಲು ಅವರಿಗೆ ಅಪಾರ ಆತುರತೆ. ಹತ್ತಾರು ಭಕ್ತರಿಗೆ, ಅವರಿರುವಲ್ಲೇ ಏಕಕಾಲದಲ್ಲಿ ಪ್ರಸನ್ನ ದರ್ಶನ ಅನುಗ್ರಹಿಸುತ್ತಿದ್ದಾರೆ. ಅವರಿಗೆ ಆಸನ್ನವಾಗಿರುವ ಅಪಾಯಗಳನ್ನು ಆಗಲೇ ಅರಿತು, ಅದನ್ನು ನಿವಾರಿಸಲು ತನ್ನನ್ನೇ ತೆರುವ ಕೃಪಾನಿಧಿ ಸ್ವಾಮಿ. ಭಕ್ತನೊಬ್ಬನಿಗೆ ಅವನ ಕರ್ಮಫಲವಾಗಿ ತಗುಲಬೇಕಾಗಿದ್ದ ಕಷ್ಟ ಪರಂಪರೆಯನ್ನು ಮರಣ ಭೀತಿಯನ್ನು, ತಾವೇ ತಮ್ಮ ದೇಹದಲ್ಲೇ ಆವಾಹಿಸಿಕೊಂಡು ಅವನನ್ನುಳಿಸಿದರು. ಭಗವಾನರಿಂದ

ಸಾಧ್ಯವಾಗದ ಅದ್ಭುತ, ಪ್ರಪಂಚದಲ್ಲೇ ಇಲ್ಲ. ಅವರ ಆಶ್ಚರ್ಯಜನಕ ಲೀಲೆಗಳು, ರೋಮಾಂಚಕಾರಿ, ಮಧುಮಯಿ, ಮಂಗಳಮಯಿ, ಮನೋಹಾರಿಣಿ, ಆನಂದವರ್ಷಿಣಿ" ಮುಂದುವರಿದು ನಕುಲ್ ಸೇನ್ ಅವರು, "ಗೋವಾ ಅಂದರೆ, ಗೋಪಕ ಪಟ್ಟಣದ ಐತಿಹಾಸಿಕ ಮಹಾತ್ಮ್ಯವನ್ನು ವಿವರಿಸಿ, ಅಲ್ಲಿಯ ಮಾಂಡವಿ ಹಾಗೂ ಅಘನಾಶಿನೀ ನದಿಗಳ ಪವಿತ್ರತೆಯನ್ನು ತಿಳಿಸಿದರು. ಶಿವ, ರಾಮ, ಕೃಷ್ಣ, ಪರಶುರಾಮರ ಸಾನ್ನಿಧ್ಯದಿಂದ ಪುನೀತವಾದ ಈ ಪ್ರದೇಶವನ್ನು, ಭಗವಂತ ಈಗಿನ ಅವತಾರ ರೂಪದಲ್ಲಿ ಆಗಮಿಸಿ ಆಶೀರ್ವದಿಸುತ್ತಿರುವುದು ನಮ್ಮ ಪುಣ್ಯ ವಿಶೇಷ ಎಂದರು.

ತಮ್ಮ ದಿವ್ಯೋಪನ್ಯಾಸದಲ್ಲಿ ಸ್ವಾಮಿ, ತಾವು ಬರಮಾಡಿಕೊಂಡ ಕರುಳು ರೋಗದ ವಿಷಯವನ್ನೂ ವಿಶದೀಕರಿಸಿದರು. "ದೇವರೇ ಇಲ್ಲ, ಇರಬೇಕಾಗಿಲ್ಲ. ಇರುವನು ಎಂದು ಹೇಳುವುದು ಮೋಸ, ನಂಬುವುದು ದಡ್ಡತನ, ಎಂದು ಬಹುಮಂದಿ ಆಡುತ್ತಾರೆ. ಅಂಥವರ ದುರಹಂಕಾರವನ್ನು ದೂರ ಮಾಡಲು, ದೇವರು ಆಗಾಗ ಅಲ್ಲಲ್ಲಿ ತನ್ನ ಶಕ್ತಿಯನ್ನು ಪ್ರಕಟ ಮಾಡುತ್ತಾನೆ. ಸಂಶಯಾತ್ಮರಿಗೆ ಅವರು ಪ್ರಶ್ನಿಸಿದೇನೇ ಉತ್ತರ ಸಿಗುತ್ತದೆ; ತಟ್ಟಿದೇನೇ ಜ್ಞಾನಗೋಪುರದ ಬಾಗಿಲು ತೆರೆಯುತ್ತದೆ. ಹೇಂದರೆ ದೇವರೇ ಇಲ್ಲ ಎಂಬ ನಾಸ್ತಿಕರು, ತಮ್ಮ ಕೆಸರನ್ನೇ ಉಸಿರಾಗಿ ಭಾವಿಸಿ ಮೇಲಕ್ಕೇಳುವುದೇ ಇಲ್ಲ. ಆದರೆ ಪ್ರತ್ಯಕ್ಷ ಒಂದು ಅರ್ಥವಾಗದ, ಅಚ್ಚರಿಗೊಳಿಸುವ ಸಂಭವ ನಡೆದಾಗ, ಅವರು ಆ ಚಮತ್ಕಾರದಿಂದ ಸಂಸ್ಕಾರ ಹೊಂದುತ್ತಾರೆ.

ಮನುಷ್ಯ ದೇಹ, ಆಹಾರ ವಿಹಾರ ವಿಪರೀತವಾದಾಗ ಅನಾರೋಗ್ಯಕ್ಕೆ ತುತ್ತಾಗುತ್ತದೆ. ಇದು ಸಹಜ. ಆದರೆ ಎರಡು ಮೂರು ದಿನ ನಿಮ್ಮನ್ನು ಗಾಬರಿಗೊಳಿಸಿದ ನನ್ನ ಖಾಯಿಲೆಗೆ ಅಂಥ ಕಾರಣಗಳಿರಲಿಲ್ಲ. ಅದನ್ನು ನಾನೇ ನನ್ನ ಭಕ್ತನೊಬ್ಬನನ್ನು ರಕ್ಷಿಸುವ ಸಲುವಾಗಿ, ಆತ ಅದರ ಪೆಟ್ಟಿನಿಂದ ಉಳಿಯಲಾರ ಎಂದು ತಿಳಿದು, ಅವನಿಂದ ತೆಗೆದುಕೊಂಡೆ. ಭಕ್ತಾನುಗ್ರಹವೇ ಅವತಾರದುದ್ದೇಶ. ಕರುಳು ಹುಣ್ಣು (ಅಪ್ಪೆಂಡಿಸೈಟಿಸ್) ಆತನಿಗೆ ಬರಬೇಕಾದದ್ದು. ಶಸ್ತ್ರ ಕ್ರಿಯೆಯಿಂದಲೇ ಅದನ್ನು ನಿವಾರಿಸಲು ಸಾಧ್ಯ. ಆದರೆ ಆತ ಆಗ ಉಳಿಯಲಾರ; ಅಷ್ಟು ನಿಶ್ಶಕ್ತ ದೇಹ. ನನಗೆ ಪ್ರಿಯವಾದ ಹಲವಾರು ಕೈಂಕರ್ಯಗಳಿಗೆ, ಆತ ಇನ್ನೂ ಕೊಂಚಕಾಲ ಬದುಕಬೇಕೆಂದು ನಾನು ನಿಶ್ಚಯಿಸಿದೆ. ಈ ದೇಹದಿಂದ ನಾನು ಬಂದಿರುವುದು, ಉಳಿದ ದೇಹಗಳಿಗೆ ಸಂಕಟ ತಗುಲಬಾರದೆಂಬುದಕ್ಕಾಗಿ. ಈ ದೇಹಕ್ಕೆ ನೋವು ಎಂಬುದೇ ಇಲ್ಲ .ಇದು ಆನಂದ ಸ್ವರೂಪ.

ಇದನ್ನು ನೀವು ಪವಾಡ ಎನ್ನುತ್ತೀರಿ. ನೀವೆಲ್ಲರೂ ಈಶ್ವರ ನಡೆಸುತ್ತಿರುವ ಪವಾಡಗಳೇ! ನಿತ್ಯ ಉಸಿರಾಡುವುದು, ತಿಂದ ಅನ್ನ ಜೀರ್ಣವಾಗಿ, ರಕ್ತದಲ್ಲಿ ಅದರ ಸಾರ ಸೇರಿ ಶಾರೀರಿಕ ಮಾನಸಿಕ

ಬೌದ್ಧಿಕ ಬಲ ಹೆಚ್ಚುವುದು, ಇವೆಲ್ಲ ಪವಾಡಗಳಲ್ಲದೆ ಮತ್ತೇನು? ಅವನು ಸರ್ವ ಶಕ್ತನಾದ್ದರಿಂದಲೇ, ಎಲ್ಲರಿಗೂ ಎಲ್ಲಕ್ಕೂ ಶಕ್ತಿ, ಸತ್ಯ, ಸೊಬಗು ಸ್ಥೈರ್ಯ, ಸಹನೆ, ಪ್ರೇಮ, ಶಾಂತಿ, ತಿಳಿವು, ದಯೆ- ಎಲ್ಲ ಅವನ ಕಟಾಕ್ಷದ ಪವಾಡ. ಪಾಪ! ನಾಸ್ತಿಕ, ದೇವದತ್ತವಾದ ಉಸಿರಿನ ಬಲದಿಂದಲೇ ದೇವರಿಲ್ಲ ಎಂದು ಶಪಥ ಮಾಡುತ್ತಿದ್ದಾನೆ. ದೇವರು ಕೊಟ್ಟ ಕಣ್ಣನ್ನು ಮುಚ್ಚಿ ಹಿಡಿದು, ನನ್ನ ಕಣ್ಣಿಗೆ ದೇವರು ಕಾಣಿಸುತ್ತಿಲ್ಲ. ಆದ್ದರಿಂದ ನಿಮ್ಮ ಕಣ್ಣೂ ಕಾಣಬಾರದು"- ಎನ್ನುತ್ತಾನೆ, ಎಂದೇ, ಅಂಥವರ ಕಣ್ಣನ್ನು ಇಂಥ ಆಶ್ಚರ್ಯಗಳಿಂದ ತೆರೆಯಬೇಕಾಗಿದೆ.

ಆದ್ದರಿಂದ ೧೯೭೦ ರ ಡಿಸೆಂಬರ್ ೧೧ನೆ ತಾ॥ ಪ್ರಪಂಚದ ಚರಿತ್ರೆಯಲ್ಲಿ ಒಂದು ಮಹತ್ವ ಪೂರ್ಣ ದಿನ. ಸಾಧು ಸಂರಕ್ಷಣೆಗಾಗಿ ಭಗವಂತನೇ ಮಾನವಾಕಾರ ತಾಳಿ ಬಂದ ಸ್ವಾಮಿ, ಜಗವರಿಯೆ, ಜನವರಿಯೆ, ಲೋಕವೇ "ಆಶ್ಚರ್ಯವತ್ ಪಶ್ಯತಿ" ಎಂಬ ಗೀತಾ ವಾಕ್ಯದಂತೆ, ತಮ್ಮ ದಿವ್ಯ ಭವ್ಯ ಪವಾಡವನ್ನು ಪ್ರಕಟಿಸಿದ ದಿನ- ಅದು.

ಇದರ ಸಂಬಂಧ ಮತ್ತೊಂದು ಕಥಾನಕ. ಬೆಂಗಳೂರಿಂದ ನೇರ ಬೊಂಬಾಯಿಗೆ ಬಂದು, ನಾನು ಇರುವ ಬಿಡದಿಗೆ ಸೇರಿ ಬಿಡಿ- ಎಂದು ಇಬ್ಬರು ಭಕ್ತರಿಗೆ ಸ್ವಾಮಿ ಹೇಳಿದ್ದರು. ಅವರಿಗೆ ೯ನೆ ತಾ॥ "ಬೇಡ ! ಗೋವಾಗೇ ಬನ್ನಿ"- ಎಂಬ ಫೋನ್ ಹೋಯಿತು. ಅವರು ರಾಜಭವನ ಸೇರಿದಾಗ, ಸ್ವಾಮಿಯ ಉಪನ್ಯಾಸ ಪ್ರಾರಂಭವಾಗಿ ಅರ್ಧಗಂಟೆ ಆಗಿತ್ತು. ಸದ್ದಿಲ್ಲದೆ ಒಳಕ್ಕೆ ನುಸುಳಿ, ಅವರು ಹಿಂದಿನ ಗೋಡೆಗೆ ಒರಗಿ ಒಂದು ಮೂಲೆಯಲ್ಲಿ ಕುಳಿತರು. ಆಗ, ಸ್ವಾಮಿ, "ಎರಡು ಮೂರು ದಿನ ನಿಮ್ಮನ್ನು ಗಾಬರಿಗೊಳಿಸಿದ ನನ್ನ ಖಾಯಿಲೆ..."- ಎಂದು ಹೇಳಿದಾಗ, ಅವರು "ಆ!" ಎಂದು ದಿಗ್ಭ್ರಮೆಗೊಂಡರು. ಅದರ ಸುಳಿವೇ ಅವರಿಗೆ ಕಾಣಿಸಲಿಲ್ಲ. "ನನ್ನನ್ನು ಅವರು ಆಸ್ಪತ್ರೆಗೆ ಸೇರಿಸಿ, ಹೊಟ್ಟೆ ಆಪರೇಷನ್ ಮಾಡದೆ ಗತ್ಯಂತರವಿಲ್ಲ, ಎಂದು ಇಲ್ಲಿಯ ಡಾಕ್ಟರುಗಳೆಲ್ಲ ಗವರ್ನರನ್ನು ಬೇಡಿಕೊಂಡರು" ಎಂದಾಗಂತೂ, ಅವರು "ಅಯ್ಯೋ" ಎಂದು ದುಃಖ ಆನಂದ ಎರಡರಿಂದಲೂ ಕಂಬನಿ ಸುರಿದರು.

ತಮ್ಮ ಕೋಣೆಗೆ ಸ್ವಾಮಿ ಹಿಂದಿರುಗಿದಾಗ, ಸೇನ್ ದಂಪತಿಗಳೂ, ಅಮೆರಿಕನ್ ಮಹಿಳೆಯರೂ, ಡಾಕ್ಟರುಗಳೂ ಸ್ವಾಮಿಯನ್ನು ಮುತ್ತಿದೆವು. "ನಾನು ದತ್ತಾತ್ರೇಯ ಸ್ವರೂಪ"- ಎಂದು ತಮ್ಮನ್ನು ತಾವು ವಿವರಿಸುತ್ತ ಕೈ ಆಡಿಸಿ ತಮ್ಮ ಭಾವಚಿತ್ರವೊಂದನ್ನು ಸೃಷ್ಟಿಸಿಕೊಟ್ಟರು. ಅದರಲ್ಲಿ ಮಹಾದ್ಭುತ ಸಂಗತಿ ಏನೆಂದರೆ, ಬ್ರಹ್ಮ ವಿಷ್ಣು ಶಿವ ತ್ರಿಮೂರ್ತಿಗಳ ಶಿರಸ್ಸು ಮಾಮೂಲಿನಂತಿರಲಿಲ್ಲ. ಅವು ಮೂರು ಶ್ರೀ ಸತ್ಯಸಾಯಿ ಶಿರಸ್ಸುಗಳು! ಅಂಥ ಚಿತ್ರ ನಾವು ಯಾರೂ ಎಲ್ಲೂ ಆ ನಿಮಿಷದವರೆಗೂ ಕಂಡಿರಲಿಲ್ಲ.

ನೂತನ ವರ್ಷವನ್ನು ಸ್ವಾಗತಿಸುವ ಮಹಾ ಸಮಾರಂಭಕ್ಕೆ ಧರ್ಮಕ್ಷೇತ್ರದ ಹತ್ತಾರು ಎಕರೆ ಜಾಗ ಸಾಲದಾಯಿತು. ಆ ದಿನ ಡಾ|| ಜಾನ್ ಹಿಸ್ಲಪ್ ಎಂಬ ಅಮೇರಿಕ ಭಕ್ತ, ಸಭಿಕರನ್ನುದ್ದೇಶಿಸಿ ಮಾತಾಡಿದ. ಆತ ಬರ್ಮಾದಲ್ಲಿ ಬೌದ್ಧ ವಿಹಾರಗಳಲ್ಲಿ ಹಲವಾರು ವರ್ಷಗಳು ಭಿಕ್ಷುಗಳ ಶಿಷ್ಯನಾಗಿ ಧ್ಯಾನಮಗ್ನನಾಗಿದ್ದು, ಅನಂತರ ಜಗತ್ ಪ್ರಖ್ಯಾತ ಎಂಬು ಬಿರುದು ಸಂಪಾದಿಸಿರುವ, ಮಹರ್ಷಿ ಮಹೇಶ ಯೋಗಿಯ ಜತೆಯಲ್ಲಿ ಕೆಲವು ವರ್ಷಗಳು ಕಳೆದ ವೀರ ಸಾಧಕ.

"ಎರಡು ಪ್ರಶ್ನೆಗಳಿಗೆ ನಾನು ನಿಮ್ಮ ಮುಂದೆ ಸಮಾಧಾನ ತಿಳಿಸಲು ಬಯಸುತ್ತೇನೆ. ಒಂದು, ದೂರದ ಒಂದು ದೇಶದಲ್ಲಿ ಜನಿಸಿ, ವಿಲಕ್ಷಣ ವಿಶಿಷ್ಟ ವಾತಾವರಣದಲ್ಲಿ ಬೆಳೆದ ನನ್ನ ಜೀವಕ್ಕೆ, ಬಾಬಾ ಅವರು ನೀಡಿರುವ ಅನುಗ್ರಹ ಎಂಥದ್ದು? ಅವರು ನನ್ನ ಹೃದಯ ವಾಸಿಯಾಗಿ, ಅದನ್ನು ಕರಗಿಸಿ ಮೃದು ಮಧುರವಾಗಿಸಿ, ಅದರಲ್ಲಿ ಆನಂದ ತುಂಬಿದ್ದಾರೆ. ಎರಡು, ಯಾವ ದೇಶಕ್ಕೂ ಯಾವ ಕಾಲಕ್ಕೂ ಸೇರದ, ಯಾವ ಸಂಪ್ರದಾಯದಿಂದಲೂ ಸೊಟ್ಟಗಾಗದ ನನ್ನ ಅಂತರಂಗದ ಅಜ್ಞಾತ ಸತ್ವದ ಸ್ವರೂಪವನ್ನು ಅರಿತುಕೊಳ್ಳಲು ಅವರು ನೀಡಿರುವ ನೆರವು ಎಂಥದ್ದು? ಬಾಬಾ ಅವರು ಮನೋಬುದ್ಧಿಗಳಿಗೆ ಸಿಲುಕದ ಭಗವತ್ ಶಕ್ತಿ. ಅವರು ನನಗೆ ಅಂತರಂಗ ಬಹಿರಂಗ ಗುರು; ನನ್ನ ಅಂತರಂಗ ಗುರಿ."

ಸ್ವಾಮಿಯ ದಿವ್ಯೋಪನ್ಯಾಸದಲ್ಲಿ, ಪ್ರತಿ ಮಾನವೂ ತನ್ನ ಹೃದಯವನ್ನು ಪ್ರಶಾಂತಿ ನಿಲಯವಾಗಿ ಪರಿಶುದ್ಧಗೊಳಿಸಬೇಕು, ಪರಸ್ಪರ ಪ್ರೇಮದಿಂದ ಬಾಳಿ ಬದುಕಬೇಕು. ಲೋಕಾಸ್ಸಮಸ್ತಾಸ್ಸುಖಿನೋ ಭವಂತು, ಎಂದು ಶ್ರದ್ಧಾಭಕ್ತಿಗಳಿಂದ ಸತತವಾಗಿ ಪ್ರಾರ್ಥಿಸಬೇಕು ಎಂಬ ಆದೇಶವಿತ್ತರು.

ಬೊಂಬಾಯಿ ನಗರದ 'ಬಾಲ ವಿಕಾಸ' ತರಗತಿಗಳಲ್ಲಿನ ಮಕ್ಕಳು, ಧರ್ಮಕ್ಷೇತ್ರದ ರಂಗ ಮಂಟಪದಲ್ಲಿ, ನೃತ್ಯ, ನಾಟಕ, ಗಾಯನ, ಭಜನೆ, ಅಭಿಯನಗಳ ಕಾರ್ಯಕ್ರಮ)ದಿಂದ, ಭಗವಂತನಿಗೂ ಭಕ್ತರಿಗೂ ಸಂತೋಷ ಕೊಟ್ಟರು. ಅರ್ಜುನನ ಪಾತ್ರವಹಿಸಿ, ಸಾಕ್ಷಾತ್ ಸಾಯಿಕೃಷ್ಣನ ಸಮೀಪದಲ್ಲಿ ನಿಂತು ವಿಷಾದ ವ್ಯಕ್ತಪಡಿಸಿದ ಮಗು, ಆ ಭಾವದಲ್ಲೇ ಮುಳುಗಿ ನಿಜಕ್ಕೂ ಅತ್ತಾಗ, ಸ್ವಾಮಿ ಅದನ್ನು ಎತ್ತಿ ತಬ್ಬಿಕೊಂಡ ದೃಶ್ಯ ಎಲ್ಲರ ಕಣ್ಣಲ್ಲೂ ಹನಿ ತರಿಸಿತು. ಲವಕುಶರ ವೀರಾವೇಶವನ್ನು ನೋಡಿದಾಗ, ಅದನ್ನು ಮೆಚ್ಚಿ ಆನಂದಿಸಿದ ಸೀತಾದೇವಿ, ವಾಲ್ಮೀಕಿ ಮುಂತಾದವರನ್ನು ವೀಕ್ಷಿಸಿದಾಗ, ರಾಮಾಯಣ ಮತ್ತೆ ಜೀವ ತಾಳಿ ಎಲ್ಲರನ್ನೂ ಚೇತನಗೊಳಿಸಿತು. ಪ್ರಹ್ಲಾದ ಧ್ರುವರ ತಂಡ ಕಣ್ಣ ಮುಂದೆ ತಾಂಡವ ಆಡಿತು.

"ಸತ್ಯಸಾಯಿ ಬಾಲ ವಿಕಾಸ"ದ ಬಾಲ ಬಾಲಿಕೆಯರು, ಸಾಯಿ ತಮ್ಮ ಹೃದಯ ವಾಸಿ ಎಂಬುದನ್ನು ಅರಿತಿರಬೇಕು. ಅವರ 'ಗುರು'ಗಳಿಗೆ ತಮ್ಮ ಶಿಕ್ಷಣ ಕೈಂಕರ್ಯವನ್ನು ಸಾಯಿಪೂಜೆ ಎಂದು ಭಾವಿಸಬೇಕು, ಮಕ್ಕಳಲ್ಲಿ ಬೆಳಗುವ ಗುಣಶೀಲಗಳಿಂದ ಅವರ ಮನೆಗಳು ಬೆಳಗಬೇಕು, ಅಂಥ ಮನೆಗಳಿಂದ ಊರೇ ಬೆಳಗಬೇಕು, ಇದು ನಿಮ್ಮ ಗುರಿಯಾಗಿರಲಿ ಎಂದು ಸ್ವಾಮಿ ಒತ್ತಿ ಹೇಳಿದರು.

ಸೇವಾದಳದ ಸಭ್ಯರನ್ನುದ್ದೇಶಿಸಿ ಒಂದು ಸಂಜೆ ಸ್ವಾಮಿ ಮಾತಾಡುತ್ತ, ನಾಮ ಸ್ಮರಣೆಯಿಂದ ಪಡೆಯಬಹುದಾದ ಧೈರ್ಯ ಸ್ಥೈರ್ಯಗಳನ್ನೂ, ಶಾಂತಿ ಸುಖಗಳನ್ನೂ ವಿವರಿಸಿದರು. ಪರಮಾತ್ಮನ ಕಲ್ಯಾಣ ಗುಣಗಾನವನ್ನು ನೆನಪಿಗೆ ತಂದು, ಹರ್ಷವರ್ಷವನ್ನು ಸುರಿಸುವ ನಾಮವನ್ನು ಅಶ್ರದ್ಧೆಯಿಂದ ಉಚ್ಚರಿಸಬಾರದು, ಯಾಂತ್ರಿಕವಾಗಿ ಉರುವಿಡಬಾರದು, ಕೋಪದಿಂದ ಕೂಗಬಾರದು, ವ್ಯರ್ಥ ವ್ಯವಹರಿಸಬಾರದು ಎಂದು ಹೇಳಿದರು. ನಿರಾಡಂಬರವಾದ ಉಡಿಗೆ ತೊಡಿಗೆ, ನಡೆ ನುಡಿ, ಆಹಾರ ವಿಹಾರಗಳನ್ನವಲಂಬಿಸಿ, ಜನತೆಯ ಸ್ನೇಹ, ಜನಾರ್ದನನ ಪ್ರೀತಿ ಸಂಪಾದಿಸಿ ಎಂದರು.

ಆ ವರ್ಷದ ವೈಕುಂಠ ಏಕಾದಶಿ ಜನವರಿ ೭ ನೆ ತಾ| ಆದ್ದರಿಂದ, ಸ್ವಾಮಿಯ ಸನ್ನಿಧಿ ಭಾಗ್ಯ ಬೊಂಬಾಯಿ ವಾಸಿಗಳಿಗೆ ದೊರಕಿತು. ಅಂದು ನಡೆದ ಹನ್ನೆರಡು ಗಂಟೆಯ ಅಖಂಡ ಭಜನೆಯ ನಂತರ ಸ್ವಾಮಿ, ಹತ್ತು ಇಂದ್ರಿಯಗಳ ವ್ಯಾಪಾರವನ್ನೂ ಒಟ್ಟುಗೂಡಿಸಿ, ಪುಟವಿಟ್ಟು, ಪರಮಾತ್ಮನೆಂಬ ಹನ್ನೊಂದನೆಯದರಡಿಯಲ್ಲಿ ಸಮರ್ಪಿಸಿದರೆ, ವೈಕುಂಠದ ಬಾಗಿಲು ತಾನಾಗಿಯೇ ತೆರೆದು, ಜೀವಿಯನ್ನು ಸ್ವಾಗತಿಸುತ್ತದೆ ಎಂದರು.

ಧರ್ಮೋದ್ಧರಣ ಕಾರ್ಯಕ್ಕೊದಗಲು ಸ್ವಾಮಿ ಸ್ಥಾಪಿಸಿರುವ, ಅಖಿಲ ಭಾರತ ಪ್ರಶಾಂತಿ ವಿದ್ವನ್ಮಹಾಸಭೆಯ ಮಹಾರಾಷ್ಟ್ರ ಶಾಖೆಯವರು ಪ್ರಕಟಿಸಿದ, "ಭಗವಂತನೊಂದಿಗೆ ಸಂಭಾಷಣ"- ಎಂಬ ಗ್ರಂಥವನ್ನು ಸ್ವಾಮಿಗೆ ಸಮರ್ಪಿಸಿದರು. ಧರ್ಮಕ್ಷೇತ್ರದಲ್ಲಿ ನೆರೆದಿದ್ದ ಭಕ್ತರು ಸಮೂಹದೆದುರು ಈ ಕಾರ್ಯಕ್ರಮ ಜರುಗಿತು. ಆಗ ಆ ಸಂಸ್ಥೆಯ ಕಾರ್ಯದರ್ಶಿ, ಮಹಾರಾಷ್ಟ್ರ ವಿಧಾನ ಪರಿಷತ್ ಅಧ್ಯಕ್ಷ ಶ್ರೀ ಪಾಗೆ ಅವರು, "ನಾವು ಕೆಲವರು ಸ್ವಾಮಿ ಸನ್ನಿಧಿಯಲ್ಲಿ ಕುಳಿತು, ಆಧ್ಯಾತ್ಮಿಕ ಸಂವಾದದಿಂದ ಸಂತೃಪ್ತಿ ಪಡೆದೆವು. ಈ ಗ್ರಂಥದಲ್ಲಿ ನಾವು ಕೇಳಿದ ಪ್ರಶ್ನೆಗಳನ್ನೂ, ಸ್ವಾಮಿ ಅನುಗ್ರಹಿಸಿದ ಸಮಾಧಾನಗಳನ್ನೂ ಅಕ್ಷರಶಃ ಅಚ್ಚು ಮಾಡಿದ್ದೇವೆ. "ಭಕ್ತ ಭಗವಂತನೆಡೆಗೆ ಸಾಗುವಾಗ, ಮೂರು ಹಂತಗಳನ್ನು ದಾಟುತ್ತಾನೆ. ಒಂದು 'ತವೈವಾಹಂ' (ನಾನು ನಿನ್ನವನು) ಎರಡು

ಪ್ರುಮೈವತ್ವಂ' (ನೀನು ನನ್ನವನು) ಮೂರು 'ಸೋಹಂ' (ನೀನೇ ನಾನು)" ಎಂದು ಅವರು ಸ್ಪಷ್ಟಪಡಿಸಿದರು. ಧ್ಯಾನದ ಕುರಿತು ಬೋಧಿಸುತ್ತ, ಒಂದು ವಿಚಾರ ಮುಗಿದು ಮತ್ತೊಂದು ಮೊದಲಾಗುವ ಮುಂಚೆ, ಆ ಮಧ್ಯಘಟ್ಟದಲ್ಲಿ ಮನಸ್ಸು ಪ್ರಶಾಂತಿನಿಲಯದಲ್ಲಿರುತ್ತದೆ. ಮೇಲೆ ಅಲೆಗಳೇಳಲಿ, ಬೀಳಲಿ; ಆಳದಲ್ಲಿ ತಳಮಳವೆಲ್ಲಿಯದು?- ಎಂದು ಹೇಳಿದರು.

ನಾನು ಸ್ವಾಮಿಯನ್ನು ಕೇಳಿದೆ, "ಅಲೆಗಳೇ ಇಲ್ಲದ ಮಾನಸ ಸರೋವರವನ್ನು ಸಾಕ್ಷಿಯಾಗಿ ನಿಂತು ನಾವು ವೀಕ್ಷಿಸಲು ಸಾಧ್ಯವೆ?" ಅದಕ್ಕವರು, "ಸಾಧ್ಯ; ಧ್ಯಾನಯೋಗದಿಂದ ಮಾತ್ರವೇ ಅಲ್ಲ ಕರ್ಮ ಯೋಗಿಗೂ, ಭಕ್ತನಿಗೂ ಕೂಡ ಸಾಧ್ಯ- ಆಗೊಮ್ಮೆ ಈಗೊಮ್ಮೆ, ಸಹಜವಾಗಿಯೇ. ಆದರೆ ಆ ಭವ್ಯಾನುಭವವನ್ನು ಮತ್ತೆ ಮತ್ತೆ ಮೆಲುಕು ಹಾಕಿ ಜೀರ್ಣಿಸಿಕೊಂಡು, ಆತ್ಮ ಶಕ್ತಿಯನ್ನು ಸಂಪಾದಿಸಿ ಮೈಗೂಡಿಸಿಕೊಳ್ಳಬೇಕು"- ಎಂದರು. ಇದರಿಂದ ಬಹುಕಾಲ ನನ್ನನ್ನು ಪೀಡಿಸಿದ ಒಂದು ಸಮಸ್ಯೆ ಪರಿಹಾರವಾಯಿತು. ಈ ಸಿದ್ಧಾಂತವನ್ನು ನಾನು ಯಾವ ಆರ್ಷ ಗ್ರಂಥದಲ್ಲೂ ಶಾಸ್ತ್ರದಲ್ಲೂ ಭಾಷ್ಯದಲ್ಲೂ ಕಂಡಿಲ್ಲ. ಶ್ರೀ ಸತ್ಯಸಾಯಿ ಬಾಬಾ ಅವರೇ ಪ್ರಥಮತಃ ಸಾರಿದ್ದಾರೆ.

ನೇತಿ ನೇತಿ ಎಂದು ಹೇಳುತ್ತ, ಬ್ರಹ್ಮತತ್ತ್ವ ಅನಿರ್ವಚನೀಯ ಎಂದು ನಿರ್ಣಯಿಸುವ ಪದ್ಧತಿಗೆ, ಸ್ವಾಮಿ ಹೊಸ ಅರ್ಥವನ್ನು ಕೊಟ್ಟು ವಿಷಯವನ್ನು ಸರಳ ಮಾಡಿದ್ದಾರೆ. ಹೀಗಲ್ಲ ಹೀಗಲ್ಲ ಎಂಬುದಕ್ಕಿಂತ, ಇಂಥದ್ದಲ್ಲ, ಇಷ್ಟೇ ಅಲ್ಲ ಎಂಬುದೇ ಸಮಂಜಸ ಎಂದರು. ಅಹಂ, ನಾನು ಎಂಬುದು ಆತ್ಮನನ್ನು ಸೂಚಿಸುತ್ತದೆ; ಆಕಾರ, ವಿಕಾರ, ದೇಹೇಂದ್ರಿಯಗಳು, ನಾಮರೂಪಗಳು, ಇವುಗಳನ್ನು ಸೂಚಿಸುವಾಗ ಅದು ಅಹಂಕಾರ ಆಗುತ್ತದೆ. ಪರಮಾತ್ಮನ ಪ್ರತಿಬಿಂಬವೇ ಜೀವಾತ . ಮನಸ್ಸು ಜಡ ಪದಾರ್ಥ, ಆದರೆ ಬಹು ಸೂಕ್ಷ್ಮ. ಪವಾಡಗಳು ಪ್ರದರ್ಶನಕ್ಕಾಗಿ ಅಲ್ಲ ಎಂದು ವಿವರಿಸಿದರು.

ಪುಟ್ಟಪರ್ತಿಗೆ ಹಿಂದಿರುಗಿ, ಸ್ವಾಮಿ ಶಿವರಾತ್ರಿ (೨೩ -೨-೭೧) ವರೆಗೂ ಅಲ್ಲೇ ಇದ್ದರು. ತಂಡೋಪತಂಡ ಎಂಟು ಮೂಲೆಗಳಿಂದಲೂ ಆಗಮಿಸುತ್ತಿದ್ದ ಜ್ಞಾನಿ, ಜಿಜ್ಞಾಸು, ಆರ್ತ, ಅರ್ಥಾರ್ಥಿಗಳನ್ನನುಗ್ರಹಿಸಿದರು. ಶಿವರಾತ್ರಿಯಂದು ಅವರ ದಿವ್ಯ ಶರೀರದಲ್ಲಿ ಸ್ವಯಂಭು ಶಂಭು ಉದ್ಭವಿಸಿದ, ಲಿಂಗಾಕಾರದಲ್ಲಿ. ಅದರ ಸನ್ನಿಧಿಯಲ್ಲೇ ಇಡೀ ರಾತ್ರಿ ಸಾವಿರಾರು ಜನ ಭಜನೆ ಹಾಡಿ ಪುನೀತರಾದರು. ತಮ್ಮ ಉಪದೇಶೋಪನ್ಯಾಸದಲ್ಲಿ ಸ್ವಾಮಿ, "ಇಂದೇಕೆ ಸ್ವಾಮಿ ತಮ್ಮಿಂದ ಲಿಂಗೋದ್ಭವವಾಗುವಂತೆ ಸಂಕಲ್ಪಿಸಿದ್ದಾರೆ?"- ಎಂಬ ಪ್ರಶ್ನೆಯನ್ನು ತಾವೇ ಹಾಕಿಕೊಂಡು, ಉತ್ತರ

ಹೇಳಿದರು. "ಭಗವಲ್ಲೀಲೆಯನ್ನರ್ಥ ಮಾಡಿಕೊಳ್ಳುವುದು ಅಸಾಧ್ಯ. ಅದು ಅಗಮ್ಯ, ಅಗೋಚರ. ಆದರೆ ನಿಮ್ಮ ನಡುವೆ ಭಗವಂತ, ಇಗೋ ಇದ್ದಾನೆ, ಎಂದು ನಿಮ್ಮ ಕಣ್ಣು ತೆರೆದು ನಿಮಗೆ ತಿಳಿಸುವುದಕ್ಕಾಗಿ, ಇದೂ ಒಂದು ಮಾರ್ಗ. ಭಗವದ್ವಿಶ್ವಾಸ ಇಲ್ಲ ಎನಿಸಿಬಿಟ್ಟರೆ, ದುರಾಶೆ, ದುರ್ಗುಣ, ದ್ವೇಷ, ಹಿಂಸೆ, ಇವೆಲ್ಲ ಹತೋಟಿ ಮೀರಿ ಬೆಳೆಯುತ್ತವೆ"- ಎಂದರು.

ಮೇ ತಿಂಗಳು ಸ್ವಾಮಿ ಮತ್ತೆ ಬೊಂಬಾಯಿಗೆ ಭೇಟಿ ಇತ್ತರು. ಧರ್ಮಕ್ಷೇತ್ರ ಸ್ಥಾಪನೆ ನಡೆದದ್ದು ಮೇ ೧೨ನೇ ತಾ| ಆದ್ದರಿಂದ ಅಂದು ವಾರ್ಷಿಕೋತ್ಸವ. ಅದರ ಅಂಗವಾಗಿ, ಅಖಿಲ ಭಾರತ ಬಾಲವಿಕಾಸ ಶಿಕ್ಷಣ ಕ್ಷೇತ್ರದ ಗುರುಗಳ ಮಹಾಸಮ್ಮೇಳನವೂ ಏರ್ಪಾಡಾಗಿತ್ತು. ೪೦೪ ಗುರುಗಳು ಹಾಜರಿದ್ದರು. ವಿದ್ಯಾಭ್ಯಾಸ ಪದ್ಧತಿಯಲ್ಲೇ ಸ್ವಾಮಿ ಸಂಕಲ್ಪಿಸಿದ ಮಹತ್ವಪೂರ್ಣ ಕ್ರಾಂತಿಯ ಗುರುತಾಗಿ, ಉಪಾಧ್ಯಾಯಿನಿಯರಿಗೆ 'ಗುರು' ಎಂದು ನಾಮಕರಣ ಮಾಡಲಾಯಿತು. ಬ್ರಹ್ಮನಂತೆ ಹೊಸ ಭಾವಗಳನ್ನೂ ಆದರ್ಶಗಳನ್ನೂ ನವಚೇತನವನ್ನೂ ಗುರುಗಳು ನಾಟಬೇಕು. ವಿಷ್ಣು ರೂಪದಲ್ಲಿ ಸದ್ಭಾವ ಸದ್ಗುಣ ಸಚ್ಚಿಂತನೆಗಳನ್ನು ಪೋಷಿಸಬೇಕು. ಮಹೇಶ್ವರನಂತೆ ದುರ್ಗುಣಗಳನ್ನೂ ದುಸ್ಸ್ವಭಾವವನ್ನೂ ಲಯಗೊಳಿಸಬೇಕು, ಎಂದು ಸ್ವಾಮಿ ಆಜ್ಞೆ ಮಾಡಿದರು. ಬಾಲ ವಿಹಾರ ಎಂಬ ಅದುವರೆಗೂ ಇದ್ದ ಹೆಸರನ್ನು "ಬಾಲ ವಿಕಾಸ" ಎಂದು ಬದಲಾಯಿಸಿ, ಮಕ್ಕಳಲ್ಲಡಗಿರುವ ದೈವೀ ಸಂಪತ್ತಿನ ಅಭಿವ್ಯಕ್ತಿಯ ಕಡೆಗೆ, ಜನತೆಯ, ತಂದೆ ತಾಯಂದಿರ ಗುರುಗಳ ಗಮನವನ್ನು ಸೆಳೆದರು. ಮಕ್ಕಳ ಮನಸ್ಸಲ್ಲಿ ಕಲುಷ ತುಂಬುವ ಸಿನಿಮಾ, ಜಾಹಿರಾತು, ಕಥೆಕಾದಂಬರಿ, ಚಿತ್ರಾವಳಿ ಇವುಗಳನ್ನು ತಿರಸ್ಕರಿಸಬೇಕೆಂದು ಸಲಹೆ ಮಾಡಿದರು.

ಅದೇ ಸಂದರ್ಭದಲ್ಲಿ, ಮಹಾರಾಷ್ಟ್ರದಲ್ಲಿನ ಸತ್ಯಸಾಯಿ ಸೇವಾ ಸಂಸ್ಥೆಗಳ ಸಮ್ಮೇಳನ, ಸ್ವಾಮಿ ಸಾನ್ನಿಧ್ಯ ಲಾಭದಿಂದ, ಫಲಪ್ರದವೂ ಜಯಪ್ರದವೂ ಆಯಿತು. ಗುಜರಾತ್ ರಾಜ್ಯದಲ್ಲೂ ಅಂಥ ಬೃಹತ್ಸಮ್ಮೇಳನದ ಸಿದ್ಧತೆ ನಡೆದಾಗ, ಸ್ವಾಮಿ ಅಲ್ಲಿಗೆ ಒಂದು ಸಂದೇಶ ಕಳುಹಿಸಿ, ಅದನ್ನು ಪ್ರತಿನಿಧಿಗಳೆದುರು ಪಠಿಸುವಂತೆ ಆದೇಶಿಸಿದರು. "ನಾನು ನಿಮ್ಮಲ್ಲೇ ಇದ್ದು, ನಿಮ್ಮ ಸಕಲ ಕಾರ್ಯ ಕಲಾಪಗಳನ್ನೂ ವೀಕ್ಷಿಸಿ ಪರೀಕ್ಷಿಸುತ್ತಿದ್ದೇನೆ. ನಾನು ಸರ್ವಸಾಕ್ಷಿ"- ಎಂದು ಅವರಿಗೆ ತಿಳಿಸಿದರು. ಪುಟ್ಟಪರ್ತಿಗೆ ಹಿಂದಿರುವಾಗ, ಕರ್ನಾಟಕ ರಾಜ್ಯದಲ್ಲಿನ ಸರ್ವ ಸೇವಾ ಸಮಿತಿಗಳ ವಾರ್ಷಿಕ ಸಮ್ಮೇಳನವನ್ನಾಶೀರ್ವದಿಸಲು, ಧಾರವಾಡದಲ್ಲಿ ಎರಡು ದಿನ ತಂಗಿದರು.

ಅಲ್ಲಿಂದ ಸ್ವಾಮಿ ಅನಂತಪುರ ಸೇರಿ, ಅಲ್ಲಿ ಆಗಲೇ ನಿರ್ಮಾಣವಾಗಿದ್ದ ಶ್ರೀ ಸತ್ಯಸಾಯಿ ಮಹಿಳಾ ಕಾಲೇಜು ಭವನವನ್ನು ಪ್ರವೇಶೋತ್ಸವಕ್ಕಾಗಿ ಸಿದ್ಧಪಡಿಸಲು ಭಕ್ತರನ್ನು ಹುರಿದುಂಬಿಸಿದರು. ಆ ಭವನವನ್ನು ಕುರಿತು, ಸುಪ್ರಸಿದ್ಧ ವಿಜ್ಞಾನ ಶಾಸ್ತ್ರಜ್ಞ ಡಾ|| ಸೂರಿ, ಭಗವಂತಂ, ಡಿ. ಎಸ್. ಸಿ. ಹೀಗೆ ಬರೆದಿದ್ದಾರೆ. "ಇದೊಂದು ಮಾನವಾತೀತ ಮಹಾಶಕ್ತಿಯ ಪವಾಡ. ಹತ್ತು ತಿಂಗಳ ಅವಧಿಯಲ್ಲಿ, ನಲವತ್ತು ಲಕ್ಷ ರೂಪಾಯಿ ವೆಚ್ಚದಲ್ಲಿ, ವಿಶ್ವವಿದ್ಯಾಲಯವೊಂದನ್ನು ನಡೆಯಿಸಲು ಸಕಲ ಅನುಕೂಲಗಳನ್ನೂ ಒಳಗೊಂಡ ವಿಶಾಲ ಭವನ ನಿರ್ಮಾಣವಾಯಿತೆಂದರೆ ಬಾಬಾ ಅವರಿಂದಲೇ ಸಾಧ್ಯ. ಯಾರು ಇದನ್ನು ಕಟ್ಟಿದರು? ಹಣವೆಲ್ಲಿಂದ ಬಂತು? ಬುದ್ಧಿಗೆಟುಕದ ಸಾಹಸ; ಮರ್ತ್ಯರಿಂದಾಗದ ಮಹಿಮೆ! ಭಗವಂತನ ಸಂಕಲ್ಪ ಅಪ್ರತಿಹತ ಎಂಬುದನ್ನು ಪ್ರತ್ಯಕ್ಷ ನೋಡಬೇಕಾದರೆ, ಅನಂತಪ್ರುರ ಸಂದರ್ಶಿಸಿ." ರಾಷ್ಟ್ರಪತಿ ವಿ. ವಿ. ಗಿರಿಯವರು ಪ್ರಾರಂಭೋತ್ಸವವನ್ನು ಗುರು ಪೌರ್ಣಮಿ ದಿನ (ಜುಲೈ ೮) ನೇರವೇರಿಸುವುದಾಗಿ ನಿಶ್ಚಯವಾಯಿತು.

ಆದರೆ ಜುಲೈ ಒಂದನೆಯ ತಾ|| ಅನಂತಪುರ ಸೇರಿ ಆ ಭವನವನ್ನು ಸುತ್ತಿ ಬಂದ ಬೊಂಬಾಯಿ ಕಂಟ್ರಾಕ್ಟರೊಬ್ಬರು, "ನನ್ನ ವಶದಲ್ಲಿರುವ ಜನಬಲ, ಧನಬಲ, ಯಂತ್ರಬಲ ಎಲ್ಲವನ್ನೂ ಕೇಂದ್ರೀಕರಿಸಿ ಇಲ್ಲಿಗೆ ತಂದರೂ, ಈ ಕಟ್ಟಡ ಪ್ರವೇಶೋತ್ಸವದ ಸಮಯಕ್ಕೆ ಸರ್ವಾಂಗ ಸುಂದರವಾಗಬೇಕಾದರೆ, ಇನ್ನು ಆರು ತಿಂಗಳ ಕಾಲ ಹಿಡಿಯುತ್ತದೆ"- ಎಂಬ ತೀರ್ಪಿತ್ತರು. ಪಾಪ! ಅವರೇ ಕಣ್ಣಾರೆ ನೋಡಿದರು, ಆಶ್ಚರ್ಯಪಟ್ಟರು, ಅಂದಿನ ವೈಭವ, ಕಟ್ಟಡದ ಕಮನೀಯ ಕಾಣ್ಕೆ. ಭಾರತೀಯ ಸಂಸ್ಕೃತಿ, ಸನಾತನ ಧರ್ಮ, ಸರ್ವಮತ ಸಮ್ಮತ ಸ್ವರೂಪವಾದ ಸಾಯಿಮತ, ಸತ್ಯಧರ್ಮಶಾಂತಿ ಪ್ರೇಮಪೂರಿತ ಹೃದಯ ಕಮಲ- ಇವೆಲ್ಲದರ ಸುಂದರ ಪ್ರತೀಕ ಆ ಸೌಧ ರತ್ನ.

ಕಾಲೇಜು ಪ್ರಾರಂಭೋತ್ಸವ ಮುಹೂರ್ತದಲ್ಲಿ ವೇದಿಕೆಯ ಮೇಲೆ, ಬಾಬಾ ಅವರ ಎಡಬಲಗಳಲ್ಲಿ, ದೇಶ ನಾಯಕರು ಬಹು ಮಂದಿ ಆಸೀನರಾಗಿದ್ದರು. ರಾಷ್ಟ್ರಪತಿ ವಿ. ವಿ. ಗಿರಿ,

ಅವರ ಗೃಹಲಕ್ಷ್ಮಿ, ಶ್ರೀಮತಿ ಸರಸ್ವತಮ್ಮ, ಮೈಸೂರು ರಾಜ್ಯಪಾಲ ಶ್ರೀ ಧರ್ಮವೀರ, ಗೋವಾ ರಾಜ್ಯಪಾಲ ಶ್ರೀ ನಕುಲ ಸೇನ್, ಆಂಧ್ರ ಪ್ರದೇಶ ಮುಖ್ಯಮಂತ್ರಿ ಶ್ರೀ ಬ್ರಹ್ಮಾನಂದ ರೆಡ್ಡಿ, ವಿದ್ಯಾ ಮಂತ್ರಿ ಶ್ರೀ ಪಿ. ವಿ. ನರಸಿಂಹ ರಾವ್, ವೆಂಕಟೇಶ್ವರ ವಿಶ್ವ ವಿದ್ಯಾಲಯದ ಉಪ ಕುಲಪತಿ ಶ್ರೀ ಜಗನ್ನಾಥ ರೆಡ್ಡಿ, ಆಂಧ್ರ ಪ್ರದೇಶದ ಮಂತ್ರಿಗಳಾದ ಶ್ರೀ ವೆಂಕಣ್ಣ ಹಾಗೂ ಶ್ರೀ ಲಕ್ಷ್ಮೀ ನರಸಿಂಹಯ್ಯ- ಹೀಗೆ ಅಧಿಕಾರ ಸ್ಥಾನ, ವಿದ್ಯೆ, ತ್ಯಾಗ ದೇಶಾಭಿಮಾನ, ಭಕ್ತಿ, ಭಾಷಾಭಿಮಾನ

ಕ್ಷೇತ್ರಗಳಲ್ಲಿ ಹೆಸರಾಂತವರನೇಕರು ನೆರೆದಿದ್ದರು. ಅವರ ಮಧ್ಯೆ, ಮಂದಸ್ಮಿತ ವದನಾರವಿಂದದಿಂದ ಪ್ರೇಮಮಯ ಕರುಣಾದೃಷ್ಟಿಯನ್ನು ಬೀರುತ್ತ, ಬಾಬಾ ಅವರು ಕಂಗೊಳಿಸಿದರು.

ಸಿಮ್ಲಾದ ಉನ್ನತ ವಿದ್ಯಾ ಸಂಸ್ಥೆಯ ನಿರ್ದೇಶಕರಾದ ಡಾ|| ವಿನಾಯಕ ಕೃಷ್ಣ ಗೋಕಾಕರು ಅತಿಥಿಗಳನ್ನು ಸ್ವಾಗತಿಸುತ್ತ, "ಸ್ವಾಮಿ ಸ್ಥಾಪಿಸಲಿರುವ ವಿದ್ಯಾಲಯಗಳು, ದೇಶದಾದ್ಯಂತ ಭಾರತೀಯತೆಯನ್ನು ನೆಲೆಗೊಳಿಸಿ ಬೆಳೆಸುವವು, ತಿಳುವಳಿಕೆ ತುಂಬಿ ಕುಶಲತೆಗಳನ್ನು ಕಲಿಸುವವು ಮಾತ್ರವಲ್ಲದೆ, ಸತ್‌ಶೀಲ, ಸತ್ಸಂಪ್ರದಾಯಗಳ ಪೋಷಣೆ, ಸಹನೆ ಸಹಕಾರಗಳ ಅಭಿವೃದ್ಧಿ, ಆತ್ಮಜ್ಞಾನ ಸಂಪಾದನೆಯಿಂದ ಸಮರಸದ ಜೀವನ, ಇವನ್ನೂ ಈ ವಿದ್ಯಾಲಯಗಳು ಸರ್ವ ವಿಧದಿಂದಲೂ ಪೋಷಿಸುವವು ಎಂದರು. ಆಂಧ್ರ ಮತ್ತು ಉಸ್ಮಾನಿಯಾ ವಿಶ್ವವಿದ್ಯಾಲಯಗಳ ಉಪಕುಲಪತಿ ಸ್ಥಾನವನ್ನಲಂಕರಿಸಿದ್ದ ಡಾ|| ಭಗವಂತಂ, ನಾನು ಕಾಲೇಜುಗಳನ್ನು ಸ್ಥಾಪಿಸಿದೆ. ಎಷ್ಟೋ ಕಾಲೇಜುಗಳಿಗೆ. ಪ್ರಾರಂಭೋತ್ಸವದ ಮಾಡಿದೆ. ಆದರೆ ಪ್ರಾರಂಭ ಮುಹೂರ್ತದಲ್ಲೇ ಲೈಬ್ರರಿ, ಲ್ಯಾಬರೆಟರಿ, ಗ್ಯಾಸ್ ವ್ಯವಸ್ಥೆ, ಹಾಸ್ಟೆಲ್, ಆಡಿಟೋರಿಯಂ, ಪ್ರೊಜೆಕ್ಟರ್, ಮೈಕ್ ವ್ಯವಸ್ಥೆ, ಉತ್ತಮ ಅಧ್ಯಾಪಕ ಸಮುದಾಯ, ಎಲ್ಲವೂ ಸಿದ್ಧವಾಗಿರುವುದನ್ನು ಇಲ್ಲಿ ಇಂದು ಕಾಣುತ್ತಿದ್ದೇನೆ"- ಎಂದರು. ಮುಖ್ಯಮಂತ್ರಿ ಬ್ರಹ್ಮಾನಂದ ರೆಡ್ಡಿಯವರು, ಆಂಧ್ರಪ್ರದೇಶಕ್ಕೂ ಭಾರತ ದೇಶಕ್ಕೂ ಇದು ಪರ್ವ ದಿನ, ದೊಡ್ಡ ಹಬ್ಬ, ಮಂಗಳ ಮುಹೂರ್ತ ಎಂದರು ವಿದ್ಯಾಮಂತ್ರಿ, "ಬಾಬಾ ಅವರು ಮಹಿಳೆಯರಿಗಾಗಿ ವಿದ್ಯಾಲಯ ರೂಪೀಕರಿಸಿದರೆಂದರೆ, ಅದು ದೇಶದ ಇತರ ಕಾಲೇಜು ಗಳಂತಿರಬಾರದು, ಅದು ಇಡೀ ಜನಾಂಗಕ್ಕೆ ಆದರ್ಶ, ಸ್ಫೂರ್ತಿಯ ಬುಗ್ಗೆ, ಆನಂದದ ಸುಗ್ಗಿ"- ಎಂದರು. ಧರ್ಮವೀರ ಅವರು, "ಮಹಿಳೆ ವಿದ್ಯಾವತಿಯಾದಾಗ, ಕುಟುಂಬದವರಿಗೆಲ್ಲ ಪ್ರಗತಿ, ಪ್ರಕಾಶ. ಆದ್ದರಿಂದಲೇ ಬಾಬಾ ಅವರು ಅವಗಿಗಾಗಿ ಇಂಥ ಉತ್ತಮ ಉದ್ಯಮವನ್ನು ಸ್ಥಾಪಿಸಿದ್ದಾರೆ" ಎಂದರು.

ರಾಷ್ಟ್ರಪತಿ ಗಿರಿ ಅವರು, ಕೋಟಿಗಟ್ಟಲೆ ಜನರನ್ನು ಅಧ್ಯಾತ್ಮ ಪಥದಲ್ಲಿ ನಡೆಸುತ್ತಿರುವ ಬಾಬಾ ಅವರು, ಶಿಕ್ಷಣ ಕ್ಷೇತ್ರವನ್ನೂ ತಮ್ಮ ಧರ್ಮ ಸಂಸ್ಥಾಪನಾ ಕಾರ್ಯದ ಅಂಗವಾಗಿ ಸ್ವೀಕರಿಸಿರುವುದಕ್ಕೆ, ನಾವು ಅವರಿಗೆ ಕೃತಜ್ಞತೆಯನ್ನರ್ಪಿಸಬೇಕೆಂದರು. ಮಾನವ ಕುಲದ ಆದಿ ಗುರುವೆನಿಸಿ, ಭಾರತ ಭಾಗವತ ಪುರಾಣಗಳನ್ನು ಜಗತ್ತಿಗೆ ನೀಡಿದ ವೇದವ್ಯಾಸ ಮಹರ್ಷಿಯನ್ನಾರಾಧಿಸಲು ಮೀಸಲಾಗಿರುವ ಪೂರ್ಣಿಮಾ ದಿನ, ಈ ವಿದ್ಯಾಲಯ ನೂತನ ಭವನವನ್ನು

ಪ್ರವೇಶಿಸುವುದು ಸೂಕ್ತವಾಗಿದೆ, ಎಂದು ಬಾಬಾ ಅವರು ನುಡಿದರು. ಅಲ್ಲದೆ, ಆಧುನಿಕ ಗುರುಕುಲದಂತೆ, ಗುರು, ಶಿಷ್ಯ ಸಂಪರ್ಕ - ಸಂವಾದ ಸಾಮರಸ್ಯಗಳಿಂದ ಶಿಕ್ಷಣ ಕ್ರಮವನ್ನು ಈ ಕಾಲೇಜಿನಲ್ಲಿ ಅನುಸರಿಸಲಾಗುವುದು. ಪರ್ವತದ ಕುಕ್ಷಿಯೊಳಗಿಂತ ಅಗ್ನಿ ಚಿಮ್ಮುವ ಹಾಗೆ ಆಸುರೀ ಆಸೆಗಳು ಹೊರಬಿದ್ದು, ತನ್ನನ್ನೂ ತನ್ನವರನ್ನೂ ಬಾಧಿಸುತ್ತವೆ. ದೈವೀ ಆಸೆಗಳು ಹೃದಯದಿಂದ ಹೊರಹೊಮ್ಮಿದರೆ, ಸತ್ಯ, ಪ್ರೇಮ, ಶಾಂತಿ, ಅಹಿಂಸೆ, ಸೋದರತ್ವ ಮುಂತಾದ ಸದ್ಗುಣಗಳು ವಿಕಾಸಗೊಳ್ಳುತ್ತವೆ ಎಂದರು.

ತ್ಯಾಗಭೂಮಿ, ಯೋಗ ಭೂಮಿ ಎಂದು ಕೀರ್ತಿ ಪಡೆದಿದ್ದ ಭಾರತ ದೇಶ, ಈಗ ಭೋಗಭೂಮಿಯಾಗಲು ಪ್ರಯತ್ನಿಸುತ್ತಿದೆ. ಭಾರತೀಯರಲ್ಲಿ ಅನುಕರಣ ಬುದ್ಧಿ ಬೆಳೆಯುತ್ತಿದೆ. ಬೇರು ಕಿತ್ತು ಬೇರೆ ಕಡೆ ನೆಟ್ಟ ಗಿಡಗಳ ಹಾಗೆ, ಅವರು ಬಾಡಿ ಬೆಂಡಾಗುತ್ತಿದ್ದಾರೆ. ಇದು ಅಕ್ಷಮ್ಯವಾದ ಆತ್ಮವಂಚನೆ; ಮಾತೃದ್ರೋಹ. ಇಂಥ ದಾರುಣ ಪರಿಸ್ಥಿತಿಯ ನಿವಾರಣೆಗಾಗಿಯೇ, ಈ ಕಾಲೇಜನ್ನು ಸ್ಥಾಪಿಸುತ್ತಿದ್ದೇನೆ. ಈ ಬೀಜ ಮೊಳೆತು, ಮೊಳಕೆ ಬಲಿತು, ಬೆಳೆದು, ಚಿಗುರು ಹರಡಿ, ಹೂವು ಹಣ್ಣಾತ್ತು, ಚಿರಕಾಲ ನೆರಳಾಗಿ ನೆರವಾಗಲಿ ಎಂದು ಹರಸಿದರು.

# "ಊರು ಇಲ್ಲ, ಹೆಸರೂ ಇಲ್ಲ"

"ನನಗೆ ಸ್ವಂತ ಊರೆಂಬುದು ಇಲ್ಲ; ಸ್ವಂತ ಹೆಸರೂ ಇಲ್ಲ. ಎಲ್ಲ ಊರೂ ನನ್ನದೇ; ಯಾವ ಹೆಸರು ಹಿಡಿದು ಕರೆದರೂ ನಾನು ಓಗೊಡುತ್ತೇನೆ"- ಎಂದು ಸ್ವಾಮಿ ತಮ್ಮ ೨೧ನೆ ವಯಸ್ಸಿನಲ್ಲಿ, ತಾವು ತಮ್ಮ ಅಣ್ಣನವರಿಗೆ ಬರೆದ ಒಂದು ಪತ್ರದಲ್ಲಿ ಬರೆದು, ಅವರಿಗೆ ದಿಗ್ಭ್ರಮೆಯನ್ನುಂಟುಮಾಡಿದ್ದರು! ಯಾವ ಭಾಷೆಯಲ್ಲಾಗಲಿ, ಯಾವ ದೇಶದಿಂದಾಗಲಿ, ಯಾರು ಹೇಗೆ ಕರೆದರೂ ಸ್ವಾಮಿ ಅದನ್ನು ಲಾಲಿಸಿ, ಅವರನ್ನು ಪಾಲಿಸುತ್ತಾರೆ ಎಂಬುದು ಸರ್ವವಿದಿತ.

ಸತ್ಯನಾರಾಯಣ ಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿದ ನಂತರ, ತಾಯಿ ಗರ್ಭದಿಂದ ಹೊರಬಂದ ಶ್ರೀಮಂತ ಶಿಶುವಿಗೆ, ಸತ್ಯನಾರಾಯಣ ಎಂಬ ಸಾರ್ಥಕ ನಾಮವನ್ನು ತಾತ ಕೊಂಡಮರಾಜು ನಿಶ್ಚಯಿಸಿದರು. "ಸತ್ಯ" ಎಂದೇ ಕರೆದರು. ಮನೆತನದ ಹೆಸರು (ಅವತಾರ ನಿಮಿತ್ತವಾಗಿ ಭಗವಂತನೇ ಆರಿಸಿದ ಮನೆತನವಾದ್ದರಿಂದ), ರತ್ನಾಕರ , ರತ್ನಗಳ ಆಗರವಾದ ಸಾಗರ!

ಸತ್ಯ ಎಂಬ ಹೆಸರು ಅನ್ವರ್ಥನಾಮ. ಕೃಷ್ಣಾವತಾರವಾದಾಗ, ಬ್ರಹ್ಮದೇವ ಆನಂದಾತಿರೇಕದಿಂದ ಮಗುವನ್ನು ಸ್ತುತಿಸಿದ್ದು, 'ಸತ್ಯ' ಎಂದೇ! "ಸತ್ಯವ್ರತಂ, ಸತ್ಯಪರಂ, ತ್ರಿಸತ್ಯಂ! ಸತ್ಯಸ್ಯಯೊನಿ ನಿಹಿತಂ ಚ ಸತ್ಯೇ! ಸತ್ಯಸ್ಯ ಸತ್ಯಂ ಋತ ಸತ್ಯ ನೇತ್ರಂ| ಸತ್ಯಾತ್ಮಕಂ ತ್ವಾಂ ಶರಣಂ ಪ್ರಪದ್ಯೆ"- ಎಂದು ಬ್ರಹ್ಮನು ಅಂದು ಪ್ರಾರ್ಥಿಸಿದ್ದ.

೧೪ನೆ ವಯಸ್ಸಿನಲ್ಲಿ ಸ್ವಾಮಿ ತಮ್ಮನ್ನು ಸಾಯಿಬಾಬಾ ಎಂದು ಪ್ರಕಟಿಸಿದರು. ಬಾಬಾ ಎಂದರೆ ತಂದೆ. ಮರಾಠಿ ಮತ್ತು ಹಿಂದಿ ಭಾಷೆಗೆ ಸಂಬಂಧಿಸಿದ ನುಡಿಗಳಲ್ಲೆಲ್ಲ, ಬಾಬಾ ಎಂದೇ ಸಾಧು ಸಂತರನ್ನು ಸಂಬೋಧಿಸುವ ರೂಢಿ. ಸಾಯಿ ಎಂದರೆ ಸ್ವಾಮಿ. ಶಿರ್ಡಿಗೆ ತಮ್ಮ ೧೬ ನೆ ವಯಸ್ಸಿನಲ್ಲಿ ಬಾಬಾ ಆಗಮಿಸಿದಾಗ, ಊರು ಬಾಗಿಲಲ್ಲೇ ಖಂಡೋಬಾ ಗುಡಿಯ ಪೂಜಾರಿ, ಅವರನ್ನು 'ಸಾಯಿ' ಎಂದು ಕರೆದ. ಆ ಹೆಸರೇ ಅವರಿಗೆ ಖಾಯಂ ಆಯಿತು. ಸಾಹಿ, ಶಾಹಿ, ಷಾಹಿ, ಷಹ, ಷಾ- ಇವೆಲ್ಲ ಪ್ರಭು ಎಂಬ ಒಂದೇ ಅರ್ಥವನ್ನು ಕೊಡುತ್ತವೆ. ಆಯೀ ಎಂದರೆ ತಾಯಿ. ಲಲಿತಾ ಸಹಸ್ರನಾಮದಲ್ಲೂ ಈ ಪದ ಉಂಟು. ಬಾಬಾ ಎಂದರೆ ತಂದೆ. ಸ ಎಂದರೆ ಇಬ್ಬರೂ. ಆದ್ದರಿಂದ ಸಾಯಿಬಾಬಾ ಎಂದರೆ, ತಾಯಿ- ತಂದೆ ಎಂದು ಬಾಬಾ ಅವರೇ ಹೇಳಿದ್ದುಂಟು. ಶ್ರೀ ಎಂದರೆ ಮಂಗಳ ಸೂಚಕ ಪದ; ಸಂಪತ್ತು, ಐಶ್ವರ್ಯಗಳ ಗುರುತು. ಶ್ರೀ ಎಂಬ ಪದವನ್ನು ಭಗದವತಾರಗಳಿಗೆ ಅಳವಡಿಸಿಕೊಳ್ಳುತ್ತೇವೆ ಹೊರತು, ಭಗವನಂತನನ್ನು ಶಿವ, ವಿಷ್ಣು ಎಂದೇ ಗುರುತಿಸುತ್ತೇವೆ ಎಂದು ಗಮನಿಸಬೇಕಾದದ್ದು.

ಭಗವಾನ್ ಎಂದರೆ, ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ ಜ್ಞಾನ, ವೈರಾಗ್ಯ ಎಂಬ ಷಡ್ಗುಣಗಳನ್ನು ಪಡೆದಿರುವವನು ಎಂಬುದೇ ಅರ್ಥ. ಐಶ್ವರ್ಯವೆಂದರೆ ಈಶ್ವರತ್ವ, ಪ್ರಭುತ್ವ. ೧೯೬೮ ಸಂ| ಬೊಂಬಾಯಿ ನಗರದಲ್ಲಿ ನಡೆದ ಪ್ರಥಮ ಪ್ರಪಂಚ ಮಹಾಸಮ್ಮೇಳನದಲ್ಲಿ, ಸ್ವಾಮಿ ತಮ್ಮ ತತ್ವವನ್ನು ತುಸು ಬಯಲು ಮಾಡಿದರು. "ಹಿಂದಿನ ಅವತಾರಗಳ ಶಕ್ತಿ ಸಾಮರ್ಥ್ಯಗಳು ಪ್ರಪಂಚವನ್ನು ತಲೆಬಾಗಿಸುವಂತೆ ಮಾಡಲು, ಚಕ್ರವರ್ತಿಯಾಗಿದ್ದುದರಿಂದಲೂ ಇತರ ಹಲವು ಅಧಿಕಾರ ಸ್ಥಾನಗಳಲ್ಲಿದ್ದರಿಂದಲೂ ಸಹಾಯ ದೊರಕಿರಬಹುದು . ಆದರೆ ಈಗ ಈ ಕಲಿಯುಗದಲ್ಲಿ, ಈ ಸತ್ಯ ಸಾಯಿ ಸಂಬಂಧ ಸ್ವರೂಪಕ್ಕೆ, ಯಾವುದರಿಂದ, ಯಾವುದಕ್ಕಾಗಿ, ಇಷ್ಟು ದೇಶಗಳ ಜನರು ತಲೆ ಬಾಗುತ್ತಿದ್ದಾರೆ ಎಂದರೆ, ಇದಕ್ಕೆಲ್ಲ ಇದರಲ್ಲಿನ ಪರತತ್ವವಾದ ದೈವತ್ವವೇ ಮೂಲ ಕಾರಣ. ಈ ಸತ್ಯಸಾಯಿ ಸ್ವರೂಪ ದೈವ ಸ್ವರೂಪ ಎಂಬುದನ್ನು, ಎಂದೋ ಹೇಗೋ ಈ ಉಪಾಧಿ ಹೊರಟು ಹೋದ ನಂತರ ಅರ್ಥಮಾಡಿಕೊಳ್ಳಬೇಕಾದ ಪರಿಸ್ಥಿತಿ ಕೂಡ ಇಲ್ಲ. ಈ ದೇಹ ಇರುವಾಗಲೇ, ಸರ್ವ ದೇಶಗಳೂ ನಮ್ಮ ಭಾರತ ದೇಶಕ್ಕೆ ಶಿರಬಾಗಿ, ಈ ದೈವತ್ವ ಎಂಬ ಸತ್ಯಸಾಯಿ ಅವತಾರ, ಸರ್ವದೇಶಗಳಲ್ಲೂ ಮೊಳಗುವುದನ್ನು ಶೀಘ್ರದಲ್ಲೇ ನೀವು ಅರಿತು ಆನಂದಿಸಬಹುದಾಗಿದೆ." ದೂಷಣ ಭೂಷಣ, ನಿಂದೆ ಸ್ತುತಿ, ಎರಡನ್ನೂ ಸ್ವಾಗತಿಸಿ, ಎರಡಕ್ಕೂ ಸ್ಥಾನ ಕೊಡದೆ ವೈರಾಗ್ಯ ಸ್ವಾಮಿಯದು. "ಸರ್ವ ರೂಪಧರಂ ಶಾಂತಂ, ಸರ್ವ ನಾಮಧರಂ ಶಿವಂ| ಸಚ್ಚಿದಾನಂದ ರೂಪಮ ದ್ವೈತಂ, ಸತ್ಯಂ ಶಿವಂ ಸುಂದರಂ"- ಎಂದು ತಮ್ಮನ್ನು ಕುರಿತು ಹೇಳಿದ್ದಾರೆ.

ಭಗವಾನ್ ಎಂಬುದಕ್ಕೆ ಶಾಸ್ತ್ರದಲ್ಲಿ ಬೇರೆ ಹಲವು ಗುಣಗಳನ್ನೂ ಹೇಳಿದೆ.

ಉತ್ಪತ್ತಿಂಚ ವಿನಾಶಂಚ

ಭೂತಾನಾಮಾಗತಿಂ ಗತಿಂ

ವೇತ್ತಿ ವಿದ್ಯಾಂ ಅವಿದ್ಯಾಂಚ

ಸ ವಾಚ್ಯ ಭಗವಾನಿತಿ

ಜಗತ್ತಿನ ಉತ್ಪತ್ತಿ ಸ್ಥಿತಿಲಯಗಳು ಏಕೆ, ಹೇಗೆ ಎಂಬುದನ್ನೂ, ಪಂಚಭೂತಗಳು, ಚರಾಚರಗಳು ಬಂದದ್ದು ಹೇಗೆ, ಹೋಗುವುದೆಲ್ಲಿಗೆ ಎಂಬುದನ್ನೂ, ವಿದ್ಯೆ, ಅವಿದ್ಯೆ ಎರಡರ ಅಧಿಪತಿಯಾಗಿದ್ದು, ಒಂದನ್ನು ಕೊಟ್ಟು ಮತ್ತೊಂದನ್ನು ಸುಟ್ಟು ಕಾಪಾಡುವ ಸಾಮರ್ಥ್ಯವನ್ನೂ ಪಡೆದಿರುವವನು ಭಗವಾನ್ ಎಂಬುದು ಇದರ ಅರ್ಥ.

ಆರ್ನಾಲ್ಡ್ ಷೂಲ್ಮನ್ ಎಂಬ ಪ್ರಖ್ಯಾತ ಅಮೆರಿಕನ್ ಸಾಹಿತಿಗೆ ಸ್ವಾಮಿ ಹೇಳಿದರಂತೆ, ಅವನು ತನ್ನ ಗ್ರಂಥದಲ್ಲಿ ಬರೆದಿದ್ದಾನೆ. "ನಿನ್ನ ಹಿಂದಿನ ಜನ್ಮಗಳನ್ನೆಲ್ಲ ನಾನು ಬಲ್ಲೆ. ಮುಂದಿನ ಜನ್ಮಗಳನ್ನೂ ನಾನು ಈಗಲೇ ಬಲ್ಲೆ. ನಿನ್ನ ಅಶಾಂತಿಗೆ ಕಾರಣವೇನು, ಅದನ್ನು ಗೆಲ್ಲುವ ಬಗೆ ಯಾವುದು, ಅದು ಸಂಪೂರ್ಣ ತೊಲಗುವುದು ಯಾವಾಗ ಎಂಬುದನ್ನೂ ನಾನು ಬಲ್ಲೆ. ನಿನ್ನದು ಮಾತ್ರ ಅಲ್ಲ. ಪ್ರತಿಯೊಬ್ಬನಿಗೂ ಹಿಂದೆ ಏನಾಯಿತು, ಈಗ ಏನಾಗಿದೆ, ಮುಂದೆ ಏನಾಗುತ್ತಿದೆ ಎಂಬುದನ್ನೂ ಬಲ್ಲೆ."

ಒಮ್ಮೆ ಬೊಂಬಾಯಿ ನಗರದ ವಲ್ಲಭಾಯಿ ಸ್ಟೇಡಿಯಂನಲ್ಲಿ ಜರುಗಿದ ಮಹಾನ್ ಸಭೆಗೆ ಸ್ವಾಮಿ, 'ನಾನೇ ನಿಮ್ಮೆಲ್ಲರ ಅಂತರ್ಯಾಮಿ. ಆದ್ದರಿಂದ ನಿಮ್ಮ ಮನೋವಾಕ್ ಕಾಯ ಕರ್ಮಗಳನ್ನೂ ನಾನು ಬಲ್ಲೆ. ಎಲ್ಲರ ಚೈತನ್ಯದ ಒಳಚೇತನ ನಾನು. ನಿಮ್ಮ ಮನೋರಥದ ಸಾರಥಿ ನಾನು'- ಎಂದರು. ಅನಂತಪುರದಲ್ಲಿ ಅನುಗ್ರಹಿಸಿದ ದಿವ್ಯೋಪನ್ಯಾಸವೊಂದರಲ್ಲಿ, 'ಭೂಸ್ವರ್ಗ ಪಾತಾಳ ಹದಿನಾಲ್ಕು ಲೋಕಗಳು ಎದುರಾದರೂ, ದೇಹ ತಾಳಿ ಬಂದಿರುವ ನನ್ನ ಸಂಕಲ್ಪ ನೆರವೇರಲೇಬೇಕು'- ಎಂದರು.

೧೯೬೫ ನೆ ಸಂ|ದಲ್ಲಿ, "ಭಗವದವತಾರ ಇದುವರೆಗೂ ಇಂಥ ಪ್ರವಾಹ ರೂಪದಲ್ಲಿ ತನ್ನ ಪ್ರೇಮವನ್ನು ಜನತೆಗೆ ಹಂಚಿಲ್ಲ. ಗ್ರಾಮಗಳಿಗೆ ಹೋಗಿ ಅಲ್ಲಿಯ ಜನರ ಕಷ್ಟ ಕಾರ್ಪಣ್ಯಗಳನ್ನು ನಿವಾರಿಸುವುದು, ದುಃಖಿಗಳು ಎಲ್ಲಿದ್ದರೂ ಅವರ ಬಳಿಗೆ ಹೋಗಿ ಆಶ್ವಾಸನ ನೀಡುವುದು, ನಿದ್ರೆ ಮಾಡುವವರನ್ನೆಬ್ಬಿಸಿ ಕಣ್ಣು ತೆರೆಯುವುದು, ಮಂದಮತಿಗಳಿಗೆ ಚಂದದ ಮದ್ದು ಕುಡಿಸಿ, ಆಧ್ಯಾತ್ಮಿಕ ಪಥ ತೋರಿಸಿ ಉಳಿಸುವುದು, ಸತ್ಯ ಧರ್ಮ ಶಾಂತಿ ಪ್ರೇಮ ಸಹನೆ ಅಹಿಂಸೆಗಳ ಬೀಜಗಳನ್ನು ಹೃದಯ ಕ್ಷೇತ್ರದಲ್ಲಿ ಬಿತ್ತಿ ಬೆಳೆಸುವುದು, ಜಾತಿ ಮತ ಕುಲ ಧನ ವಿದ್ಯೆ ವಯಸ್ಸು ಎಂಬ ಭೇದಗಳಿಗೆ ಗಮನ ಕೊಡದೆ ಎಲ್ಲರನ್ನೂ ಉದ್ಧರಿಸುವ ನಿರ್ಧಾರ ಮಾಡುವುದು, ಇವು ಈ ಅವತಾರದ ಉದ್ದೇಶ"- ಎಂದರು. "ನಾನು ನಿಮ್ಮ ಗುರು ಅಲ್ಲ. ನಿಮ್ಮ ಆರಾಧ್ಯ ದೇವರೂ ಅಲ್ಲ; ನಾನು ನೀವೇ! ನಿಮ್ಮ ನಿಜಸ್ವರೂಪವೇ ನಾನು. ನೀವು ಅಲೆಗಳು, ನಾನು ಸಮುದ್ರ. ನಿಮ್ಮನ್ನು ನೀವು ತಿಳಿದರೆ, ನನ್ನನ್ನು ತಿಳಿದ ಹಾಗೆ, ಏಕೆಂದರೆ, ನಾನೇ ನೀವು, ನೀವೇ ನಾನು."

ವಿಷ್ಣು ಪುರಾಣವು ಭಗವಾನ್ ಎಂದರೆ, (ಭ) ಪ್ರಪಂಚದ ಪೋಷಕ, ಪಾಲಕ (ಗ) ನಾಯಕ, (ವ) ಧಾರಕ ಎಂಬ ಅರ್ಥ ಕೊಡುತ್ತದೆ. ಶರಣಾಗತಿ ಗದ್ಯ ಎಂಬ ಶ್ರೀವೈಷ್ಣವ ಗ್ರಂಥದಲ್ಲೂ ಭಗವಾನ್ ಎಂಬ ಪದಕ್ಕೆ ವಿವರವಾಗಿ ಅರ್ಥ ಕೊಟ್ಟಿದೆ. ಅಪರಿಮಿತ ಜ್ಞಾನ, ಪ್ರಕೃತಿಯ ಮೇಲೆ

ಪ್ರತಿಹತ ಪ್ರಭುತ್ವ, ತೇಜಸ್ಸು, ಕರುಣೆ, ಸಾಮರ್ಥ್ಯ, ಸತ್ಯ, ಪರಾಕ್ರಮ ಇತ್ಯಾದಿ ಗುಣಗಳ ಸ್ವರೂಪವೆಂದು ಹೇಳಿದೆ.

ಶಿರ್ಡಿಯಲ್ಲಿದ್ದಾಗಲೂ ಬಾಬಾ, "ನಾನು ವಾಸುದೇವ. ನಾನು ಇಲ್ಲದ ಸ್ಥಳವೊಂದಿಲ್ಲ. ಬೆಳಕು ಗಾಳಿ ನೀರು ನೆಲ ನಾಕ ಎಲ್ಲೆಲ್ಲೂ ನಾನುಂಟು. ಎಲ್ಲ ರೂಪವೂ ನನ್ನದೇ. ನನಗೆ ಬಾಗಿಲು ಅಡ್ಡವಾಗದು. ಎಲ್ಲೆಡೆಗೂ ನನಗೆ ಪ್ರವೇಶವುಂಟು"- ಎಂದು ಘೋಷಿಸಿದ್ದಾರೆ. ಈ ಅವತಾರದಲ್ಲೂ ಬಾಬಾ, ಬಾಗಿಲಿಗೆ ಚಿಲಕ ಹಾಕಿ ರಮಣಾಶ್ರಮದಲ್ಲಿ ಮಲಗಿ ನಿದ್ರೆ ಬರದೆ ಹೊರಳಾಡುತ್ತಿದ್ದ ಅಭೇದಾನಂದ ಸ್ವಾಮಿಯನ್ನು ಬಡಿದೆಬ್ಬಿಸಿ, ತಮ್ಮ ಹಾಗೂ ಅವರ ಗುರು ರಮಣ ಮಹರ್ಷಿಗಳ ದರ್ಶನ ಕೊಟ್ಟು, ತೆಲುಗಿನಲ್ಲಿ ಅವರಿಗೆ ಧ್ಯಾನ ಯೋಗ ಕುರಿತು ಅಮೂಲ್ಯ ಉಪದೇಶ ಕೊಟ್ಟು ಅಂತರ್ಧಾನವಾಗಿದ್ದಾರೆ. ಇಂಥ ಸಂಭವಗಳು ಅನೇಕ. ಬೆಂಗಳೂರು ನರ್ಸಿಂಗ್ ಹೋಂ ಒಂದರಲ್ಲಿ, ಡಾ| ಭಗವಂತದ ಅವರಿಗೆ ಶಸ್ತ್ರಕ್ರಿಯೆ ನಡೆಯುತ್ತಿದ್ದಾಗ ಬಿಗಿದ ಬಾಗಿಲು ದೂಡಿ ಸ್ವಾಮಿ, ಅವರಿಗೂ ಡಾಕ್ಟರುಗಳಿಗೂ ದರ್ಶನ ಕೊಟ್ಟರು. ಐದನೆಯ ಫಾರಂನಲ್ಲೇ ಶಾಲೆ ತೊರೆದು ಹೊರ ಬಂದ ನಮ್ಮ ಸ್ವಾಮಿಗೆ, ಅಣುಶಾಸ್ತ್ರದಲ್ಲಿನ ಲೆಕ್ಕಾಚಾರ ಸೂತ್ರಗಳು, ವೇದಮಂತ್ರಗಳ ಉಚ್ಚಾರಣಾ ವಿಧಾನ, ವೈದ್ಯಶಾಸ್ತ್ರದ ನಿಗೂಢ ನಿಯಮಗಳು, ತಂತ್ರ ಗ್ರಂಥಗಳಲ್ಲಿನ ಚಕ್ರ ಸೂಕ್ಷ್ಮಗಳು, ಎಲ್ಲವೂ ಕರತಲಾಮಲಕ.

ತಾವು ಅವತಾರ ಪುರುಷ ಎಂಬುದನ್ನು ಸ್ಪಷ್ಟವಾಗಿ ಸ್ವಾಮಿ ಲೋಕಕ್ಕೆ ತಿಳಿಸಿದ್ದಾರೆ.

ಯುಗಧರ್ಮ ಪರಿಸ್ಥಿತಿ ವಿಪರೀತವಾದಾಗ
ನಯ ಮಾರ್ಗದಿ ಅದನು ನಿಲ್ಲಿಸುವ ಸಲುವಾಗಿ
ಲೋಕವೇ ಕಲಿಯುಗದಿ ಕಲಹದಲಿ ಕೆಟ್ಟಾಗ
ಕಲ್ಮಷವ ಕಳೆದು ಕಾಪಿಡುವ ಸಲುವಾಗಿ

ದುರ್ಮಾರ್ಗಿಗಳ ಮಧ್ಯ ಬಹು ದೈನ್ಯದಲಿ
ಬೆಂಡಾದ ಸಾಧುಗಳ ರಕ್ಷಿಸುವ ಸಲುವಾಗಿ
ಕಾಲ ಪ್ರವಾಹದಿಂ ಕಳೆಗುಂದಿ ಮರೆಯಾದ
ಭಾಷ್ಯಾರ್ಥ ಗುಪ್ತಗಳ ಬೆಳಗಿಸುವ ಸಲುವಾಗಿ

ಕ್ಷಾತ್ರಭಾರವನಿಳುಹಿ ಭೂದೇವಿ ಶಾಂತಿಗಾಗಿ

ತ್ರೇತಾ ಯುಗದಿ ಕೊಟ್ಟ ವಚನ ರಚನೆಗಾಗಿ

ಅವತರಿಸಿರುವನಚುತನು ಪರ್ತಿಯಲ್ಲಿ

ವಾಸುದೇವಾಖ್ಯ ಶ್ರೀಹರಿ, ಸತ್ಯ ಶೌರೀ

ಅವತಾರದ ಸ್ವರೂಪ ಸ್ವಭಾವಗಳನ್ನು ಬಾಬಾ ಅವರೇ ಅನೇಕ ಬಾರಿ ತಿಳಿಸಿದ್ದಾರೆ. ಅವರಲ್ಲದೆ ಯಾರು ತಾನೆ ತಿಳಿಸಬಲ್ಲರು? ಪಂಚೇಂದ್ರಿಯಗಳು ಎಲ್ಲ ಜೀವಿಗಳ ಹಾಗೆ ಅವರಿಗೂ ಉಂಟು. ಹಾಗೆಯೇ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಿ ಎಂಬ ನಾಸ್ಕು ಅಂತಃಕರಣಗಳೂ ಅಲ್ಲದೆ, ದೈವಾಂಶ ವಿಶಿಷ್ಟವಾದ ಸೃಷ್ಟಿ ಸ್ಥಿತಿ ತಲಯ ತಿರೋಧಾನ ಅನುಗ್ರಹ ಎಂಬ ನಾಲ್ಕು ಶಕ್ತಿಗಳೂ ಅವತಾರಕ್ಕೆ ಇಲ್ಲದೆ ಇಲ್ಲ. ಇವೆಲ್ಲ ಸೇರಿದರೆ, ೧೩. ಆಯಿತು, ಲಕ್ಷಣಗಳು. ಆದರೆ ವಿಶೇಷ ಅನುಗ್ರಹ, ಸಾಮಾನ್ಯ ದೃಷ್ಟಿಯಲ್ಲಿ ಅರ್ಹತೆ ಇಲ್ಲದವರಿಗೂ ಅನುಗ್ರಹ, ಅಹೇತುಕ ದಯಾಸಿಂಧುತ್ವ, ಅವತಾರದ ಪ್ರತ್ಯೇಕ ಶಕ್ತಿ. ಅಲ್ಲದೆ ನಾಮೋಚ್ಚಾರ ಮಾತ್ರೇಣ ಪ್ರತ್ಯಕ್ಷ ರಕ್ಷೆ, ತಮ್ಮ ಬಹು ವಿಧ ರೂಪದಲ್ಲಿ ಸರ್ವವ್ಯಾಪಕತೆ, ಇವೆರಡೂ ದೈವಾವತಾರಕ್ಕೇ ಸಾಧ್ಯ. ಅಂತೂ ಈ ೧೬ ಲಕ್ಷಣಗಳು, ಅವತಾರ ಪುರುಷನನ್ನು ಇತರ ಮಹಾತ್ಮರಿಂದ ಗುರುತಿಸಲು ಸಹಾಯ ಮಾಡುತ್ತವೆ.

ಸ್ವಾಮಿಯ ಸಂಕಲ್ಪದಿಂದ ಪ್ರಪಂಚದ ನಾನಾಕಡೆಗಳಲ್ಲಿ ಸಾವಿರಾರು ಮನೆಗಳಲ್ಲಿ ಅವರ ಸಾನ್ನಿಧ್ಯದ, ಅನುಗ್ರಹದ ಗುರುತಾದ ಪಟಗಳಿಂದ ವಿಭೂತಿ, ಕುಂಕುಮ, ಚಂದನ, ತೀರ್ಥ, ಅಮೃತ ವರ್ಷಿಸುತ್ತವೆ. ಸಂಶಯಾತ್ಮರು ಅನೇಕರು ಕಠಿನ ಪರೀಕ್ಷೆಗಳಿಗೆ ಸಾಹಸ ಮಾಡಿದರೂ, ಅವರ ಸಂಕಲ್ಪ ಅಡ್ಡಿ ಆಂತಕ ಇಲ್ಲದೆ ನೆರವೇರುತ್ತಲೇ ಇದೆ. ಎಲ್ಸೀ ಕವನ್ ಎಂಬವರ ಮನೆಯಲ್ಲಿ (ಸಂಯುಕ್ತ ಸಂಸ್ಥಾನ), ಸ್ವಾಮಿಯ ಚಿತ್ರಪಟದಲ್ಲಿ ರತ್ನ ಖಚಿತ ಎಂಟು ಮೂಲೆಯ ಪದಕವೊಂದು ಉದ್ಭವವಾಗಿ, ನಾಲ್ಕಾರು ವರ್ಷಗಳಿಂದ ಜನರನ್ನು ವಿಸ್ಮಯಗೊಳಿಸಿ, ಆಸ್ತಿಕರನ್ನಾಗಿ ಮಾರ್ಪಡಿಸುತ್ತಿದೆ.

ಭೃಗುನಾಡಿ, ಶುಕನಾಡಿ ಮುಂತಾದ ಪ್ರಾಚೀನ ನಾಡೀಗ್ರಂಥಗಳಲ್ಲಿ, ತ್ರಿಕಾಲಜ್ಞರಾದ ಮಹರ್ಷಿಗಳು, ಬಾಬಾ ಅವರ ಅವತಾರ ವಿವರಗಳನ್ನು ಬರೆದಿರಿಸಿದ್ದಾರೆ. ಶ್ರೀ ಭಗವತ್ ದಯಾಳ್ ಶರ್ಮ ಎಂಬವರು ಹರಿಯಾನಮಾ ರಾಜ್ಯದ ಮುಖ್ಯಮಂತ್ರಿಯಾಗಿದ್ದರು. ಆಗ ಭೃಗುನಾಡಿಯಲ್ಲಿ ತಮ್ಮ ಆಗುಹೋಗು ಸಂಶೋಧಿಸಿದಾಗ, "ದೇವರು ಪ್ರಶಾಂತಿ ನಿಲಯದಲ್ಲಿ ಅವತಾರ ಮಾಡಿದ್ದಾರೆ. ನಿನಗೆ ಅವರ ದರ್ಶನ ಭಾಗ್ಯ ದೊರೆಯುತ್ತದೆ' - ಎಂದು ತಿಳಿಯಿತಂತೆ. ಆ ಸ್ಥಳ, ಆ ದ್ವಾರಕಾ

ಕ್ಷೇತ್ರ ಎಲ್ಲಿದೆ ಎಂದು ಹುಡುಕಿ, ಅಲ್ಲಿಗೆ ಬಹು ಪ್ರಯಾಸದಿಂದ ಬಂದು ಸೇರಿದರು. ನಾನು ಆಗ ಅವರನ್ನು ನೋಡಿದೆ.

ನಾಡೀ ಗ್ರಂಥದ ವಿಷಯ ನನಗೂ ಅವರು ಹೇಳಿದರು. ಸ್ವಾಮಿ ಅವರಿಗೆ ದರ್ಶನವಿತ್ತು, ಯಾವಾಗಲೂ ಧರಿಸಲು ಒಂದು ನಟರಾಜ ಪದಕವನ್ನು ಸೃಷ್ಟಿಸಿ ಅನುಗ್ರಹಿಸಿದರು. ಜೆ.ಪಿ. ಮಾರು ಎಂಬ ಶ್ರೀಮಂತರ ಮನೆ ಜೋಯಿಸರು. ನೇಪಾಳ ದೇಶದವರು. ಅವರು ಆಗಾಗ ಬೊಂಬಾಯಿಗೆ ಬಂದು ಅವರಿಗೆ ಭವಿಷ್ಯ ಹೇಳುವರು. ಅವರಿಗೆ ಭೃಗು ಸಂಹಿತೆ(ನಾಡಿ) ಯ ಹದಿನೈದು ಸಹಸ್ರಶ್ಲೋಕಗಳೂ ಕಂಠಸ್ಥ!" ೧೯೬೭ ಅಕ್ಟೋಬರ್ ತಿಂಗಳಲ್ಲಿ ಅವರು ಮನೆಗೆ ಬಂದರು. ಯಾವುದೋ ಒಂದು ಜಟಿಲ ಸಮಸ್ಯೆ, ಎಂದು ಪರಿಹಾರವಾಗುತ್ತದೆ ಎಂದು ನಾನು ಅವರನ್ನು ಪ್ರಶ್ನಿಸಿದೆ. ೧೯೬೭ ನವೆಂಬರ್ ೪ನೆ ತಾ| ನನಗೆ ಪ್ರತ್ಯಕ್ಷ ದೇವರ ದರ್ಶನ ಲಭಿಸುತ್ತದೆ, ಎಂದು ಅವರು ಭೃಗು ಆಧಾರದ ಮೇಲೆ ನನಗೆ ಹೇಳಿದರು. ಅದೇ ದಿನ ದೇವರು ಪ್ರತ್ಯಕ್ಷ. ಸತ್ಯಸಾಯಿ ರೂಪದಲ್ಲಿ, ಬೊಂಬಾಯಿಯಲ್ಲಿನ "ಉಷಾಕಿರಣ" ಎಂಬ ಸೌಧದಲ್ಲಿರುವ ನನ್ನ ಗೃಹಕ್ಕೆ ಪಾದ ಬೆಳೆಸಿ, ನನ್ನ ಪೂಜೆಯನ್ನುಂಗೀಕರಿಸಿ ನನ್ನನ್ನಾಶೀರ್ವದಿಸಿದರು. ಸರ್ವದೇವತಾ ಸ್ವರೂಪ, ಈ ಸಾಯಿ. ಅವರದು ಶಿವ ಶಕ್ತಿ ಸ್ವರೂಪ."

ಭಗವಾನ್ ದಾಸ್ ಎಂಬ ತತ್ವಶಾಸ್ತ್ರಜ್ಞ, ಕೃಷ್ಣಾವತಾರ ಕುರಿತು ಬಂದಿರುವ ಗ್ರಂಥದಲ್ಲಿ, "ಕಪಟ ಗುರುಗಳು ತೋರಿ, ತಲ್ಲಣಿಸುವ ಜನರನ್ನು ತಪ್ಪು ದಾರಿಗಳತ್ತ ನೂಕುವಾಗ, ಅರಿಷಡ್ವರ್ಗ ನರನಲ್ಲಿ ಉರಿದೆದ್ದು, ಪರಪೀಡನಕ್ಕವನನ್ನು ಪ್ರೋತ್ಸಾಹಿಸಿದಾಗ, ಅಸುರೀ ಸಂಪತ್ತಿನಿಂದ ಉನ್ಮತ್ತರಾದವರು, ಲೋಕಕಂಟಕರಾಗಿ ಮೆರೆಯುವಾಗ, ಭಗವಂತ ನರಾಕಾರ ತಾಳಿ ಇಳಿದು ಬರುವ" - ಎಂದಿದ್ದಾರೆ.

ಸಾಯಿ ಅವತಾರದ ಮಹತ್ವ, ತತ್ವ, ಆದರ ಸತ್ಯ, ಎಲ್ಲವೂ ದಿನ ದಿನಕ್ಕೆ ಪ್ರಕಾಶ ಪಡೆಯುತ್ತಿವೆ. "ನಾನು ಸತ್ಯ ಬೋಧಕ"- ಎಂದು ಅವರೇ ಹೇಳಿಕೊಂಡಿದ್ದಾರೆ. ಅವರ ಪ್ರತೀ ಮಾತೂ ಚರ್ಯೆಯೂ ಈ ಬೋಧನೆಯನ್ನೊಳಗೊಂಡಿದೆ. ಅವರ ಕರುಣೆ, ಪ್ರೇಮ ಇವುಗಳಿಗೆ ಯಾರೂ ಹೊರತಲ್ಲ. ನಮ್ಮಂತೆಯೇ ನಡೆದು, ನುಡಿದು, ದುಡಿದು, ನಮ್ಮನ್ನು ಬಳಿ ಸೇರಿಸಿ, ವಾತ್ಸಲ್ಯದಿಂದ ನಮ್ಮನ್ನು ಸಾಕಿ, ಸಲಹಿ, ಭುಕ್ತಿ, ಭಕ್ತಿ, ಮುಕ್ತಿಗಳನ್ನು ನೀಡುತ್ತಿರುವ ದಿವ್ಯಶಕ್ತಿ ಬಾಬಾ.

# ಮತ್ತೊಂದು ಮಾತು

ಈ ಪುಸ್ತಕವನ್ನೂ, ಇದೇ 'ಸತ್ಯ ಶಿವಂ ಸುಂದರಂ'ನ ಹಿಂದಿನ ಎರಡು ಭಾಗಗಳನ್ನೂ ಓದಿದ ಅನಂತರ, ನೀವು ಅವುಗಳ ಪ್ರಭಾವದಿಂದ ಹೊಸ ಚೇತನ ಹೊಂದಿರಲೇಬೇಕು. ಈ ದಿವ್ಯ ಕಥಾ ಪಠನದಿಂದ, ಅದರ ಮನನದಿಂದ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ, ಆಹಾರ ವಿಹಾರ, ನಡೆನುಡಿಗಳು ಸರಳ, ಸುಂದರ, ಸಾತ್ವಿಕವಾಗಿ ಪರಿಣಾಮ ಹೊಂದಿರಬಹುದು. ಬಾಬಾ ಅವರ ಸಂಕಲ್ಪ ಮಾತ್ರದಿಂದ ಜೀವನ ಸುಲಭ, ಸುಗಮವಾದವರು ಸಹಸ್ರಾರು. ಅವರು ಕ್ಯಾನ್‌ಸೆಲ್ ಎಂದರೆ, ಕ್ಯಾನ್ಸರ್ ರೋಗದ ಮಂಗಮಾಯ! "ಇನ್ನು ನಿಮ್ಮ ಎಸ್ಟೇಟಿಗೆ ಕಾಡುಕಿಚ್ಚಿನ ಭಯವಿಲ್ಲ" - ಎಂದು ಅವರು ಪುಟ್ಟಪರ್ತಿಯಲ್ಲಿ ಅಭಯವಿತ್ತರೆ ಸಾಕು, ಮೆಕ್ಸಿಕೋ ಗಡಿಯ ಚುಚೂಮಾ ಬೆಟ್ಟದ ಸುತ್ತ ಇರುವ ಅರಣ್ಯಕ್ಕೆ ಶ್ರೀ ಸಾಯಿರಕ್ಷೆ. ಎಷ್ಟು ತೆಗೆದರೂ ಅಷ್ಟು ತುಂಬುವ ಅಕ್ಷಯ ಭರಣಿಯಲ್ಲಿ, ಸ್ವಾಮಿ ವಿಭೂತಿ ಕೊಡುತ್ತಾರೆ ಹಲವರಿಗೆ. ಅವರ ಸಂಕಲ್ಪದ ಬಲದಿಂದ ಅದು ಖಾಲಿಯಾಗುವುದೇ ಇಲ್ಲ. ಪ್ರತೀ ಜೀವಿಯ ಭೂತ, ಭವಿಷ್ಯ ಬಲ್ಲವರು. ಆದರೂ ಆಶ್ಚರ್ಯ, ನಾವೂ ಅವರಂತೆಯೇ ಎನ್ನುತ್ತಾರೆ. ಅವರಂತಲ್ಲ ಎಂದು ನಾವು ವಾದಿಸಿದರೆ, ಅಜ್ಞಾನದ ತಿಮಿರ ನಮ್ಮನ್ನು ಬಾಧಿಸುತ್ತಿದೆ ಎಂದು ಹೇಳುತ್ತಾರೆ. ಜೀವಾತ್ಮ, ಪರಮಾತ್ಮ ಭಿನ್ನವಲ್ಲ ಎಂದು ಬೋಧಿಸುತ್ತಾರೆ. ಎಂಥ ಅದ್ಭುತವಾದ ಉಪದೇಶ!

ಷೂಲ್ಮನ್ ಬರೆದ 'ಬಾಬಾ' ಎಂಬ ಗ್ರಂಥವನ್ನು ವಿಮರ್ಶಿಸಿ, ೧೯೭೦ರಲ್ಲಿ ಅಮೆರಿಕಾದ 'ಪಬ್ಲಿಷರ್ಸ್ ವೀಕ್ಲಿ' ಎಂಬ ಪತ್ರಿಕೆ, ಬಾಬಾ ಅವರನ್ನು ಕುರಿತು ಹೀಗೆ ಹೇಳುತ್ತದೆ :

"ಸತ್ಯ ಸಾಯಿಬಾಬಾ ತಮ್ಮನ್ನು ಭಗವದವತಾರ ಎಂದು ಗುರುತಿಸುತ್ತಾರೆ. ೩೦ ಲಕ್ಷ ಜನರು ಅವರನ್ನನುಸರಿಸಿ, ಆಧರಿಸಿ, ಆರಾಧಿಸುತ್ತಿದ್ದಾರೆ. ಅವರೆಲ್ಲರೂ ಬಾಬಾ ದರ್ಶನ ಪಡೆಯಲು, ಅವರನ್ನು ಭಜಿಸಲು, ಪವಾಡಗಳಿಂದ ಗುಣ ಹೊಂದಲು ಪುಟ್ಟಪರ್ತಿಗೆ ಯಾತ್ರೆ ಮಾಡುತ್ತಾರೆ. ಅವರ ಬೇಡಿಕೆಗಳಿಗೆ ಕಿವಿಗೊಟ್ಟು, ಎಂದೂ ಎಲ್ಲೂ ವಾಸಿಯಾಗದ ವ್ಯಾಧಿಗಳನ್ನು ಅವರು ವಾಸಿ ಮಾಡುತ್ತಾರೆ. ವಿಭೂತಿ ಇತ್ಯಾದಿ ವಸ್ತುಗಳನ್ನು ಸೃಷ್ಟಿ ಮಾಡಿಕೊಡುತ್ತಾರೆ. ಆಸ್ತಿಕರನ್ನು ಅವರ ನಂಬಿಕೆಯಲ್ಲಿ ದೃಢಪಡಿಸುತ್ತಾರೆ. ಸಂಶಯ ಗ್ರಸ್ತರಲ್ಲಿ ಆಸ್ತಿಕತೆಯ ಬೀಜವನ್ನುನಾಟುತ್ತಾರೆ".

ನಮ್ಮ ನಮ್ಮ ಹಾಗೆಯೇ ಅವರೂ ಒಬ್ಬ ಮಾನವ ಎಂಬ ಭ್ರಮೆ, ಸ್ಥೂಲಮತಿಗಳಲ್ಲಿ ಮೂಡುವುದು ಸಹಜ. ಆದರೆ ಸೂಕ್ಷ್ಮ ಮತಿಗಳು ಅವರನ್ನವಲೋಕಿಸಿ ಆಲೋಚನಾಪರರಾದಾಗ,

ಅವರ ನಿಜಸ್ವರೂಪದ ಅರಿವಾಗದಿರದು. ಮಾನವ ಕುಲದ ಇತಿಹಾಸದಲ್ಲಿ ಇದುವರೆಗೂ ಪ್ರಕಟವಾದ ಅವತಾರ ಪುರುಷರ ಅಂತಶ್ಶಕ್ತಿ, ಬಾಬಾ ಅವರಲ್ಲಿ ಇದ್ದೋಷ್ಪತಿಶಯವಾಗಿ ರೂಪ ತಾಳಿದೆ, ಎಂದು ಅವರು ತಿಳಿಯುತ್ತಾರೆ.

ಪ್ರಪಂಚವನ್ನೇ ಪ್ರಶಾಂತಿ ನಿಲಯವಾಗಿ ಪುನರ್ನಿರ್ಮಾಣ ಮಾಡಲು ಬಂದಿರುವ ಯುಗಾವತಾರ ಅವರು. ಇದಕ್ಕಾಗಿ, ನಮ್ಮ ಒಳಗಿನೊಳಗೆ ಕೊಳೆತು ಕುಳಿತಿರುವ ದುಶ್ಚಟಗಳನ್ನೂ, ದುರ್ಭಾವಗಳನ್ನೂ, ದುರಾಲೋಚನೆಗಳನ್ನೂ ಗಮನಿಸಿ, ಕನಿಕರಿಸಿ, ನಮ್ಮಲ್ಲಿ ನೆಲೆಸಿರುವ ತಮ್ಮನ್ನೇ ತಿಳಿಯಪಡಿಸಿ, ಜಗನ್ನಾಟಕದಲ್ಲಿ ನಮ್ಮ ನಮ್ಮ ಪಾತ್ರಗಳನ್ನು ಹೆಚ್ಚು ಉತ್ಸಾಹದಿಂದ, ಜನ ಮೆಚ್ಚುವಂತೆ ಅಭಿನಯಿಸಲು ನಿಯೋಜಿಸುವರು.

ದೈಹಿಕ ಅನಾರೋಗ್ಯ, ಮಾನಸಿಕ ದೌರ್ಬಲ್ಯ, ಬುದ್ಧಿಮಾಂದ್ಯ, ಆರ್ಥಿಕ ದುಸ್ಥಿತಿ, ಕೌಟುಂಬಿಕ ಕಲಹ, ರಣ ಹೇಡಿತನ, ಆಧ್ಯಾತ್ಮಿಕ ಸಂದೇಹ, ಎಲ್ಲವನ್ನೂ ಮೃದು ಮಧುರ ವಾಕ್ಯಗಳಿಂದ, ಮನೋಹರ ಮಂದಹಾಸದಿಂದ, ಸರಸ ಸಂಭಾಷಣೆಯಿಂದ ನಿವಾರಿಸುತ್ತಾರೆ. ಉಪೇಕ್ಷೆಯನ್ನುಪದೇಶಿಸಿ, ಅದಕ್ಕೆ ಬೇಕಾದ ವಿಚಕ್ಷಣಾ ಸಾಮರ್ಥ್ಯವನ್ನೂ ಕೊಟ್ಟು, ಅಪೇಕ್ಷೆಗಳನ್ನು ತಗ್ಗಿಸುತ್ತಾರೆ.

ವ್ಯಕ್ತಿಯ ಜಾತಕ, ಜೀವನ, ಕರ್ಮಫಲವನ್ನು ತಿದ್ದಬಲ್ಲರು; ತಿದ್ದುತ್ತಿದ್ದಾರೆ. ಹಾಗೆಯೇ ದೇಶದ ಜಾತಕವನ್ನೂ ಸಂಕಲ್ಪ ಮಾತ್ರದಿಂದ ತಿದ್ದಬಲ್ಲರು. ೧೯೬೫ರಲ್ಲಿ ಪಾಕಿಸ್ತಾನ್ ಭಾರತವನ್ನಾಕ್ರಮಿಸಿ, ಘೋರ ಯುದ್ಧದ ಕಾರ್ಮೋಡಗಳು ಕವಿದು ಕತ್ತಲೆ ಕಟ್ಟಿದಾಗ, ನವರಾತ್ರಿ ಉತ್ಸವವನ್ನು ಕೊಂಡಾಡಲು ಸಾಧ್ಯವಾಗದೆಂದು, ಮೈಸೂರು ಬಂಗಾಳ ದೇಶಗಳು ಅದನ್ನು ಕೈಬಿಟ್ಟರು. ಆದರೆ ಬಾಬಾ ಅವರು ಮಾತ್ರ ಅಷ್ಟರೊಳಗೆ ಯುದ್ಧ ನಿಂತು ಶಾಂತಿ ಒಪ್ಪಂದವಾಗುತ್ತದೆ ಎಂದು ಸಾರಿದರು. ಮಹಾಲಯ ಅಮಾವಾಸ್ಯೆಗೆ ಎರಡು ದಿನ ಇದೆ ಎನ್ನುವಾಗ ಯುದ್ಧ ನಿಂತಿತು.

೧೯೭೧ರಲ್ಲಿ ಬಂಗ್ಲಾದೇಶ ಸ್ಥಾಪನೆಗಾಗಿ ಅಲ್ಲಿಯ ಜನ ಪಾಕಿಸ್ಥಾನ ಸರ್ಕಾರದ ಮೇಲೆ ದಂಗೆ ಎದ್ದಾಗ, ಭಾರತ ಸೈನ್ಯಕ್ಕೂ ಪಾಕಿಸ್ಥಾನ ಸೈನ್ಯಕ್ಕೂ, ಯುದ್ಧ ಬೆಳೆದು ಬಲಿಯಿತು. ಆ ಮಧ್ಯೆ, ಮದ್ರಾಸ್ ನಗರದಲ್ಲಿ ಡಿಸೆಂಬರ್ ೨೨, ೨೩ ತಾ||ಗಳಲ್ಲಿ ಅಖಿಲ ಭಾರತ ಸಾಯಿ ಸೇವಾ ಸಂಸ್ಥೆಗಳ ಸಮ್ಮೇಳನ ನಡೆಯಿಸುವುದೆಂದು ಸ್ವಾಮಿ ಸಂಕಲ್ಪಿಸಿದರು. ತುರ್ತು ಪರಿಸ್ಥಿತಿಯಿಂದಾಗಿ ಭಾರತ ಸರ್ಕಾರ ವಿಧಿಸಿದ್ದ ಕಟ್ಟುಕಟ್ಟಳೆಗಳೆಲ್ಲ ಅಷ್ಟು ಹೊತ್ತಿಗೆ ಸಡಿಲವಾಗಿ, ಸಮ್ಮೇಳನ ಜಯಪ್ರದವಾಗಿ ಜರುಗುತ್ತದೆ

ಎಂದು ಅಭಯವಿತ್ತರು. ಅನಿರೀಕ್ಷಿತವಾಗಿ, ಅತ್ಯಾಶ್ಚರ್ಯಕರವಾಗಿ, ಡಿಸೆಂಬರ್ ೧೭ನೆ ತಾ| ೯೩೦೦೦ ಸಶಸ್ತ್ರ ಪಾಕಿಸ್ಥಾನಿ ವೀರ ಯೋಧರೂ ಅವರ ದಳಪತಿಗಳೂ, ಆಯುಧಗಳನ್ನು ಕೆಳಗಿರಿಸಿ ನಿಂತು, ಭಾರತ ಸೇನಾಪತಿಗೆ ಶರಣಾದರು.

ಅವರಿಗೆ ತಿಳಿಯದಿರುವುದೊಂದು ಇಲ್ಲ. ಜಪಾನ್ ದೇಶದಲ್ಲಿ ಅಧಿಕ ಪ್ರಚಾರ ಪಡೆಯುತ್ತಿರುವ, "ಝೆನ್" ಧ್ಯಾನ ಪದ್ಧತಿಯನ್ನು ನೀನು ಕಲಿತೆ ಅಲ್ಲವೆ ಕೆಲವು ದಿನ? - ಎಂದು ಬಾಬಾ ಅವರು ಪುಲ್‌ಮನ್ ಅವರನ್ನು ಕೇಳಿದರು, ಮೊದಲ ಸಲದ ಭೇಟಿಯಲ್ಲೇ. ಆಗ ಅವನ ಒಳ ಮನಸ್ಸು ಅವನಿಗೆ ಹೇಳಿತು. "ಈ ವಿಷಯ ನಾನು ಗೋಕಾಕರಿಗೆ ಹೇಳಿದೆ ಅವರಿಂದಲೇ ಈ ಸುದ್ದಿ ಇತರರಿಗೆ ಬಂದಿರಬೇಕು"- ಎಂದು. "ತಕ್ಷಣ ಸ್ವಾಮಿ, ಇಲ್ಲ, ಇಲ್ಲ. ನಿನ್ನ ಹೆಂಡತಿ ಎದೆಯಲ್ಲಿ ಕಾಣಿಸಿಕೊಂಡ ಗಡ್ಡೆ, ಕ್ಯಾನ್ಸರ್ ಇರಬಹುದು ಎಂದು ಹೆದರಿ, ನೀನು ಎರಡು ಸಲ ಡಾಕ್ಟರುಗಳಿಂದ ಪರೀಕ್ಷೆ ಮಾಡಿಸಿದೆ, ಅಲ್ಲವೆ? ಮೊದಲನೆಯ ಸಲ ಡಾಕ್ಟರು ಕ್ಯಾನ್ಸರ್ ಅಂತ ಅನುಮಾನಿಸಿದರು. ಮುಂದಿನ ವಾರ, ಅಲ್ಲ ಅಂತ ಖಚಿತ ಹೇಳಿದರು, ಅಲ್ಲವೆ? ಇಲ್ಲಿ ಕೇಳು! ನಾನೇ ಅದನ್ನು ಕ್ಯಾನ್ಸರ್ ಆಗಿದ್ದನ್ನು ಹೋಗಲಾಡಿಸಿದೆ, ನೀನು ಇಂಡಿಯಾಗೆ ನೆಮ್ಮದಿಯಾಗಿ ಪ್ರಯಾಣ ಮಾಡುವುದಕ್ಕಾಗಿ, ಎಂದರು. ಈ ಸಂಗತಿ ನೀನು ಗೋಕಾಕ್‌ಗೆ ಹೇಳಿಲ್ಲ, ಗೊತ್ತು" ಎಂದು ಸೇರಿಸಿದರು.

ಅವರ ನಡೆ ನುಡಿ, ಆಹಾರ, ವಿಚಾರ, ಸಂಚಾರ, ಚಮತ್ಕಾರ, ಎಲ್ಲವೂ ತೆರೆದ ಪುಸ್ತಕ. ಬೆಳಕನ್ನೇ ಬೆಳಗಿಸುತ್ತ, ಸದಾ ಸರ್ವತ್ರ ತೊಳಗುವ ಪರಂಜ್ಯೋತಿ, ಸತ್ಯ ಸಾಯಿ ಬಾಬಾ.

★★★



ಮಾನಸ ಭಜರೇ ಗುರು ಚರಣಂ
ದುಸ್ತರ ಭವ ಸಾಗರ ತರಣಂ